ಮಾನವತಾವಾದಿ
ತತ್ತ್ವಜ್ಞಾನಿ
ಬರ್ಟ್‌ರೆಂಡ್ ರಸೆಲ್

ಸಾಮ್ರಾಜ್ಯಶಾಹಿಯ
ಇಂದಿನ ರೂಪ
ಜಾಗತೀಕರಣ




# ಹೊಸತು

## ನೆಮ್ಮದಿಯ ನಾಳೆ ನಮ್ಮದು



ಫೆಬ್ರುವರಿ ೨೦೦೦
ಬೆಲೆ : ರೂ. ೧೦

## ಕ್ಷೇಮಾಭ್ಯುದಯದ ಹರಿಕಾರ ಅಮರ್ತ್ಯ ಸೇನ್



ಅಂಡಮಾನ್ ಪ್ರವಾಸ

# ಹೊಸತು

## ಒಳಗೇನಿದೆ.....


ಜಾಗತೀಕರಣ- ಒಂದು ಟಿಪ್ಪಣಿ -ಡಾ॥ ಕೆ. ಎಸ್. ಕೃಷ್ಣಸ್ವಾಮಿ .... ೬

ಜಾಗತೀಕರಣ ಮತ್ತು ಸಾಂಸ್ಕೃತಿಕ ಪಲ್ಲಟ -ಪ್ರೊ॥ ಕೆ. ಜಿ. ನಾಗರಾಜಪ್ಪ .... ೯

ಅಮರ್ತ್ಯ ಸೇನ್ -ಡಾ॥ ಡಿ. ನರಸಿಂಹ ರೆಡ್ಡಿ .... ೧೨

ಅಂತು ಇಂತು ಮುಗಿದ ಸಿಯಾಟಲ್ ಸಮಾವೇಶ -ಟಿ. ಎಸ್. ವೇಣುಗೋಪಾಲ್ .... ೧೯

ಗಾಂಧೀಜಿ ಮತ್ತು ಅವರ ದೈವಕಲ್ಪನೆ -ಎಂ. ಬಿ. ಲಾಲ್ .... ೩೪

ವೈಚಾರಿಕತೆಯ ಹರಿಕಾರ ಬರ್ಟ್‌ರೆಂಡ್ ರಸೆಲ್ - ಎ. ಶ್ರೀನಿವಾಸಮೂರ್ತಿ .... ೩೬

ಕನ್ನಡ ಸಾಹಿತ್ಯ ಕಂಡ ದಲಿತ ಚಳವಳಿ : ಕೆಲವು ವಿವಾದಗಳು -ಪ್ರೊ॥ ಮ. ನ. ಜವರಯ್ಯ .... ೨೩

ಮಾನವ ಜಾತಿ ತಾನೊಂದೆ ವಲಂ - ಕಣವಿ (ಸಂದರ್ಶನ) -ಡಾ॥ ಸಿದ್ದನಗೌಡ ಪಾಟೀಲ .... ೩೦

ಮಮತೆಯ ಮೂರ್ತಿ ವೈಎನ್‌ಕೆ -ಕೆ. ಎಲ್. ಗೋಪಾಲಕೃಷ್ಣರಾವ್ .... ೩೨

ಅಕ್ಕವ್ವ (ತಿಂಗಳ ಕತೆ) -ಚಿತ್ರಶೇಖರ ಕಂಠಿ .... ೧೫

ಕಾವ್ಯಧಾರೆ

ಚೆನ್ನಣ್ಣ ವಾಲೀಕಾರ, ಎಂ. ವೆಂಕಟಸ್ವಾಮಿ, ಶಂಕರಯ್ಯ ಆರ್. ಘಂಟಿ .... ೨೨

'ಮಹಾ ನಿರ್ವಾಣ'ಕ್ಕೆ ೨೫ರ ಸಂಭ್ರಮ -ಚಂದ್ರಕಾಂತ ಪೋಕಳೆ .... ೨೫

ಎರಡು ಸೂಫಿ ಕತೆಗಳು -ಬಿ. ಗಂಗಾಧರ ಮೂರ್ತಿ .... ೪೨

ಗಣಪನ ಕೈಗೆ ಎ.ಕೆ. 47 -ಶೇಷನಾರಾಯಣ .... ೨೮

ಸಾಯಲೊಲ್ಲದ, ಸಾಯಲರಿಯದ..... -ಪಾರ್ಥ .... ೫

ಭಯೋತ್ಪಾದಕರ ವಿರುದ್ಧ ಅಂತರರಾಷ್ಟ್ರೀಯ ಕ್ರಮ -ಸೀಯಾರ್ಕೆ .... ೪೧

ಅದೃಶ್ಯ ಸಮುದಾಯ : ಜರವಾಗಳು -ಡಾ॥ ರಹಮತ್ ತರೀಕೆರೆ .... ೫೪

ಕೃಷಿಗಿರುವ ಘೋರ ಕುತ್ತುಗಳು -ಎಸ್. ಎಸ್. ಕಟಗಿಹಳ್ಳಿ ಮಠ .... ೩೮

ಸಾಂಬಾರ ಪದಾರ್ಥಗಳು ಮತ್ತು ಆರೋಗ್ಯ -ಎಂ. ಎಸ್. ಲಕ್ಷ್ಮಣಾಚಾರ್ .... ೩೯

ವಿನೋದ ಗಣಿತ .... ೪೪

ಪ್ರಳಯ ಭೀತಿ -ವೆಂಕಟಯ್ಯ ಅಪ್ಪಗೆರೆ .... ೪೫

ಮನೋವೈದ್ಯಕೀಯದಲ್ಲಿ ಹೊಸತೇನು ? -ಡಾ॥ ಸಿ. ಆರ್. ಚಂದ್ರಶೇಖರ್ .... ೫೧

ದಿನಕ್ಕೊಂದು ಗ್ರಹ ? -ಡಾ॥ ಬಿ. ಎಸ್. ಶೈಲಜಾ .... ೫೬

ಪ್ರಾಥಮಿಕ ಶಿಕ್ಷಣ : ಒಂದು ಚಿಂತನೆ -ಶಿವಾನಂದ ಹೊಂಬಳ .... ೪೮

ಬಾಲದುಡಿಮೆಗಾರ-ದಾದಾಪೀರ್ -ಕೆ. ಪಿ. ಸ್ವಾಮಿ .... ೫೮

ಯೋಗ ಪ್ರವೇಶ-೭ -ಜಿ. ರಾಮಕೃಷ್ಣ .... ೫೯

ಅಹಿಂಸೆ -ಡಾ॥ ಜೆ. ಶ್ರೀನಿವಾಸಮೂರ್ತಿ .... ೬೦



ಚಿತ್ರಗಳು : ಗುಜ್ಜಾರ್, ಮೋಹನ, ನಾಡಿಗ್, ಹಾದಿಮನಿ, ರವಿಕುಮಾರ್ ಅಜ್ಜೀಪುರ

ಮುಖಪುಟ ವಿನ್ಯಾಸ : ನವಕರ್ನಾಟಕ ವಿನ್ಯಾಸ

ಚಿತ್ರ : ಅಮರ್ತ್ಯ ಸೇನ್ (ಚಿತ್ರಕೃಪೆ : ಫ್ರಂಟ್‌ಲೈನ್)

ಕಚೇರಿ ಸಹಕಾರ : ಜಿ. ವಿ. ತೇಜೋವತಿ


ನಲವತ್ತು ವರ್ಷಗಳ ಹಿಂದಿನ ಮಾತು. ಬೆಂಗಳೂರಿನ ಅಕೌಂಟೆಂಟ್ ಜನರಲ್ ಕಚೇರಿಯಲ್ಲಿ ಗುಮಾಸ್ತನಾಗಿದ್ದೆ. ನಮ್ಮ ವಿಭಾಗದಲ್ಲೂ ಯಥಾಪ್ರಕಾರ ಶುಕ್ರವಾರದ ಪೂಜೆ ನಡೆಯುತ್ತಿತ್ತು. ಲಕ್ಷ್ಮೀ ಎಂದು ಹೇಳಲಾದ ಒಂದು ಚಿತ್ರಕ್ಕೆ ಊದುಕಡ್ಡಿ, ಮಂಗಳಾರತಿ, ನೈವೇದ್ಯ ಹೀಗೆ ಸೇವೆ ಮಾಮೂಲಾಗಿತ್ತು. ಅದನ್ನು ಮಾಡುತ್ತಿದ್ದವನು ಶ್ರೀನಿವಾಸನ್ ಎಂಬ ತಮಿಳು ಹುಡುಗ. ಆತನದೂ ನನ್ನ ವಯಸ್ಸೇ. ಕಚೇರಿಗೆ ಬಂದ ತಕ್ಷಣ ಕೆಲಸ ಶುರು ಮಾಡುವ ಬದಲು ನನ್ನ ಬಳಿ ಬಂದು ಕೂರುತ್ತಿದ್ದ. ವೆಂಕಟೇಶ ಸುಪ್ರಭಾತದ ಪದ್ಯವೊಂದರ ಅರ್ಥ ಹೇಳಿಸಿಕೊಳ್ಳುವುದು ಅಥವಾ ಯಾವುದಾದರೂ ಸಂಸ್ಕೃತದ ಪದ್ಯವನ್ನು ಬರೆಸಿಕೊಂಡು ಬಾಯಿಪಾಠ ಮಾಡುವುದು ಆತ ನನ್ನಲ್ಲಿ ಮಾಡುತ್ತಿದ್ದ ಶಿಷ್ಯವೃತ್ತಿ. ನಾನು ಪಂಚೆ ಉಡುತ್ತಿದ್ದುದರಿಂದ ಪೂಜೆಯ ಕೆಲಸ ನನಗೇ ಸರಿ ಎಂದು ತೀರ್ಮಾನಿಸಿ ಅದನ್ನು ಮಾಡಲು ನನ್ನಲ್ಲಿ ವಿನಂತಿಸಿಕೊಂಡ. ಇತರರೂ ಅದಕ್ಕೆ ಸಮ್ಮತಿಸಿದರು.

ಶುಕ್ರವಾರ ಬಂತು. ಹಳೆಯ ಹೂವು ತೆಗೆದು ಹೊಸ ಹೂವು ಇರಿಸುವುದರಿಂದ ಪೂಜೆ ಆರಂಭವಾಗಬೇಕು. ನಾನು ಅದನ್ನು ಮಾಡಲು ಹೊರಟೆ. ಶ್ರೀನಿವಾಸನ್‌ಗೆ ಹಾಗೂ ಇನ್ನೂ ಕೆಲವರಿಗೆ ಮುಜುಗರ. ಏಕೆಂದರೆ ಚಪ್ಪಲಿ ತೆಗೆಯದೆ ನಾನು 'ಪೂಜೆ' ಆರಂಭಿಸಿಬಿಟ್ಟಿದ್ದೆ. ಅದರಿಂದ ಲಕ್ಷ್ಮಿಗೆ ಅಸಮಾಧಾನವಾಗಬಹುದೆಂದು ನನಗೆ ಹೊಳೆದಿರಲಿಲ್ಲ. ಅದನ್ನು ತೆಗೆದು ಪೂಜೆ ಮಾಡಬೇಕೆಂದು ಶ್ರೀನಿವಾಸನ್ ಹೇಳಿದ. ಹಾಗಾದರೆ ನೀನೇ ಪೂಜೆ ಮಾಡಿಕೋ ಎಂದೆ. ಹಾಗೆಯೇ ಅಂದಿನ ಪೂಜೆ ಮುಗಿಯಿತು. ಮುಂದಿನ ವಾರ ಮತ್ತೆ ಆ ಕೆಲಸ ಅವನೇ ವಹಿಸಿಕೊಂಡ. ಶಿಷ್ಯತ್ವವನ್ನೂ ಮುಂದುವರೆಸಿದ.

ಪ್ರಸಂಗ ಅಲ್ಲಿಗೆ ಮುಗಿಯಿತು. ನಲವತ್ತು ವರ್ಷಗಳ ನಂತರ ಇಂದು ಇಂತಹ ಘಟನೆ ನಡೆಯಬಹುದೆ, ನಡೆದರೆ ಅದು ಹೇಗೆ ಪರಿಸಮಾಪ್ತಿ ಆಗಬಹುದು ? ಅದು ಹೇಳಬರುವುದಿಲ್ಲ. ಇಂದಿನ ವಾತಾವರಣದಲ್ಲಿ ಸಂಶಯ, ಅಪ್ರಕಟಿತ ಕೋಪ, ಒಂದು ರೀತಿಯ ಗುದ್ದಾಟ ನಾನು ಹೇಳಿದಂತೆ ಆಗಬೇಕೆಂಬ ಅಧಿಕಾರ ಪ್ರಜ್ಞೆ, ಇವೆಲ್ಲ ತುಂಬಿವೆಯೆಂದು ತೋರುತ್ತದೆ.

ಬಾಬಾಬುಡನ್‌ಗಿರಿ, ಕಾಚರಕನಹಳ್ಳಿ, ಕೋಲಾರ ಮುಂತಾದ ಹೆಸರುಗಳೇ ಕೆಲವು ಘಟನೆಗಳನ್ನು ಮನಸ್ಸಿಗೆ ತರುತ್ತವೆ. ಹಾಗೆ ನೋಡಿದರೆ ಇದು ಭಯಾನಕ ತಿಂಗಳು. ದೇವರೇನಾದರೂ ಇದ್ದರೆ ಅವನೂ ನಡುಗಿಹೋಗಿರಬೇಕು. ಅವನ ಭಕ್ತರ ಭಾವನೆಗಳು ಅಷ್ಟು ಹರಿತವೆಂದು ಅವನು ಊಹಿಸಿದ್ದಿರಲಾರ. ಹಲವು ದಶಕಗಳಿಂದ ಶಾಂತವಾಗಿದ್ದ ದತ್ತಪೀಠ ಕೇವಲ ಮೂರು ವರ್ಷಗಳಲ್ಲಿ ಹೀಗೇಕೆ ಉರಿಯುತ್ತಿದೆಯೆಂದು ಬೆರಗಾಗಿರದಿದ್ದರೆ ಅವನ ಸಂಯಮ ಅಗಾಧವೆಂದೇ ಹೇಳಬೇಕು. ಹತ್ತಾರು ವರ್ಷಗಳಲ್ಲಿ ಒಡೆದು ಚೂರಾಗದಿದ್ದ ನವಗ್ರಹ ವಿಗ್ರಹಗಳು ಇದ್ದಕ್ಕಿದ್ದಂತೆ ಏಕೆ ತುಂಡಾದುವು ? ಎಲ್ಲೋ ಒಂದಕ್ಕೊಂದು ಸಂಬಂಧಿಸಿರಬೇಕು. ಆದರೆ ಮುಕ್ತಾಯ ಹೇಗೆ ?

ಕಾಂದಹಾರ್‌ನಲ್ಲಿ ಮಣ್ಣು ಮುಕ್ಕಿದ ವಾಜಪೇಯಿ ಸರ್ಕಾರದ ಸಮರ್ಥನೆಯೋ ಎಂಬಂತೆ ರಾಜೇಂದ್ರ ಸಿಂಗ್ ಎಂಬ 'ರಾಷ್ಟ್ರೀಯ ಸ್ವಯಂ ಸೇವಕ ಸಂಘ'ದ ನೇತಾರರು ಉದ್ಗರಿಸಿದರು, 'ಇದು ಭಾರತದ ಪರಂಪರಾಗತ ಹೇಡಿತನದ ಕುರುಹು' ಎಂದು. ಹೇಡಿತನವನ್ನು ಒಪ್ಪಿಕೊಳ್ಳಲು ಸಿದ್ಧರಿಲ್ಲದವರು ಏನು ಮಾಡಬೇಕೆಂದು ಅವರು ಹೇಳಿಲ್ಲ. ಹೇಳಬೇಕಾಗಿಯೂ ಇಲ್ಲ. ಪ್ರತಾಪವನ್ನು ಮೆರೆಯಲು ಭಾವೋದ್ರೇಕಕ್ಕೆ ಒಳಗಾಗಬೇಕೆಂಬ ಉಪದೇಶ ಇಲ್ಲದೆಯೂ ಆ ದಿಕ್ಕಿನಲ್ಲಿ ಧಾವಿಸುತ್ತಿದೆ ನಮ್ಮ ದೇಶ.

ಕೋಲಾರ ಜಿಲ್ಲೆಯಲ್ಲೊಬ್ಬ ಪೊಲೀಸ್ ಇನ್ಸ್‌ಪೆಕ್ಟರ್ ನಡೆದುಕೊಂಡಿರುವ ರೀತಿ ನೋಡಿದರೆ ಉದ್ಧಟತನಕ್ಕೇನಾದರೂ ಎಲ್ಲೆ ಇದೆಯೇ ಎಂಬ ಅನುಮಾನ ಹುಟ್ಟುತ್ತದೆ. ಪೊಲೀಸ್ ದೌರ್ಜನ್ಯಗಳಿಗೆ ಕೊರತೆಯೇನೂ ಇಲ್ಲದ ನಮ್ಮ ರಾಜ್ಯದಲ್ಲಿ ಈ ಬಕ್ಷ್ ಎಂಬುವವನ ದುರ್ನಡತೆ ಅತ್ಯಂತ ಖಂಡನೀಯವಾದ್ದು. ಒಂದು ಸರ್ಕಾರಿ ಕಚೇರಿಯಲ್ಲಿ ಮತಧರ್ಮಗಳ ಆಚರಣೆಯ ಭಾಗವಾಗಿ ಪೂಜೆ ನಡೆಯಬೇಕೆ, ಮಂಗಳಾರತಿ ಮಾಡಬೇಕೆ, ಇತ್ಯಾದಿ ಪ್ರಶ್ನೆಗಳು ಒಂದು ಕಡೆಗಿರಲಿ. ಆದರೆ ಮಂಗಳಾರತಿಯಿಂದ ಸಿಗರೇಟ್ ಹಚ್ಚಿಕೊಳ್ಳುವುದನ್ನು ಹೇಗೂ ಸಮರ್ಥಿಸಲಾಗುವುದಿಲ್ಲ. ಹಿಂದೆಂದೂ ಹಾಗೆ ಮಾಡಿಲ್ಲದಿದ್ದವನು ಇಂದು ಹಾಗೆ ಮಾಡಿದ್ದಾನೆಂದರೆ ಏನದರರ್ಥ ? ಅಥವಾ, ಹಿಂದೆ ಹಾಗೆ ಮಾಡಿದ್ದುದನ್ನು ಮುಚ್ಚಿಡುತ್ತಿದ್ದರೆ ? ಇಲ್ಲವೆ, ಮಂಗಳಾರತಿ ತಟ್ಟೆಯಿಂದ ದೂರವಿರುತ್ತಿದ್ದವನು ಈಗ ಹತ್ತಿರ ಬಂದನೆ ? ಏನೇ ಆದರೂ ಅವನ ಮಿತಿ ಮೀರಿದ ವರ್ತನೆಗೆ ಶಿಕ್ಷೆಯಾಗಬೇಕು. ಅವನ ಒಂದು ದುಷ್ಕ್ರಿಯೆಯಿಂಧ ಒಂದಷ್ಟು ಊರುಗಳಲ್ಲಿ ಬೆಂಕಿ ಬೀಳಬಹುದೆಂಬುದನ್ನು ಗಂಭೀರವಾಗಿ ತೆಗೆದುಕೊಳ್ಳಬೇಕು.

ನಮ್ಮ ವಾತಾವರಣದಲ್ಲಿ ತಾಳ್ಮೆ, ಪರಸ್ಪರ ಗೌರವ, ಸಂಭಾವಿತ ನಡತೆ ಇವುಗಳ ಜಾಗದಲ್ಲಿ ದುರಹಂಕಾರ, ದ್ವೇಷ, ಅನಾಗರಿಕ ಮನಸ್ಸು ವಿಪರೀತವಾಗಿ ಹರಡುತ್ತಿವೆ. ಹತಾಶೆಯನ್ನು ದೂರಮಾಡಿ ಸಾಮುದಾಯಿಕ ಕ್ರಿಯಾಶೀಲತೆಯನ್ನು ಬೆಳೆಸಿಕೊಳ್ಳುವ ಸಂಸ್ಕೃತಿಯೊಂದೇ ನಮಗಿರುವ ದಾರಿ.




ಸಂಪುಟ-೧ ಸಂಚಿಕೆ - ೬ ಫೆಬ್ರುವರಿ ೨೦೦೦

**ಪ್ರಧಾನ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ ಮಂಡಲಿ**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಬಿ. ಜಿ. ಗುಜ್ಜಾರಪ್ಪ
ಎಸ್. ಗುರುದತ್
ಮಲ್ಲೇಪುರಂ ಜಿ. ವೆಂಕಟೇಶ್
ರಹಮತ್ ತರೀಕೆರೆ
ಬಿ. ವಿ. ವೀರಭದ್ರಪ್ಪ
ಕೆ. ಪಿ. ಸ್ವಾಮಿ

**ವ್ಯವಸ್ಥಾಪಕರು**

ಎಸ್. ಸುರೇಂದ್ರ
ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೮೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಅಂ. ಪೆ. ೫೧೯೭
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail : nkp@bgl.vsnl.net.in


## ಒತ್ತೆಯಾಳುಗಳ ಬಿಡುಗಡೆ

ಭಾರತೀಯ ವಿಮಾನವೊಂದರ ಅಪಹರಣವನ್ನು ಮಾಡಿದ್ದವರನ್ನು ಹೇಗೆ ನಡೆಸಿಕೊಳ್ಳಬೇಕಾಗಿತ್ತೆಂದು ಈಗಾಗಲೇ ನೂರಾರು ಪುಟಗಳು ಪತ್ರಿಕೆಗಳಲ್ಲಿ ಅಚ್ಚಾಗಿವೆ, ಗಂಟೆಗಟ್ಟಲೆ ವ್ಯಾಖ್ಯಾನಕಾರರು ಮಾತನಾಡಿದ್ದಾರೆ. ಯಾರನ್ನು ಬಿಡುಗಡೆ ಮಾಡಬೇಕೆಂದು ಕೇಳಲಾಗಿತ್ತೋ ಅವರನ್ನೇ ಸಾಯಿಸಿಬಿಡುತ್ತೇವೆಂಬ ಬೆದರಿಕೆ ಹಾಕಬೇಕಾಗಿತ್ತೆಂದು ಕರ್ನಾಟಕದ ''ಮೌಲ್ಯಾಧಾರಿತ'' ರಾಜಕಾರಣಿಯೊಬ್ಬರು ಹೇಳಿದ್ದಾರೆ. ಆಗ ನಮ್ಮ ೧೫೦ ಪ್ರಯಾಣಿಕರ ಬಿಡುಗಡೆ ಗೌರವಯುತವಾಗಿರುತ್ತಿತ್ತೆಂದು ಅವರ ಅನಿಸಿಕೆ.

ಘಟನೆಯ ಕಾಲದಲ್ಲಿ ಮತ್ತು ನಂತರ ಬಂದಿರುವ ಟೀಕೆ, ಸಲಹೆಗಳನ್ನು ಗಮನಿಸಿದರೆ ಒಂದಂಶವಂತೂ ಸ್ಪಷ್ಟ : ವಾಜಪೇಯಿ ಸರ್ಕಾರ ಏನು ಕ್ರಮ ಕೈಗೊಂಡಿದ್ದರೂ ಅದಕ್ಕೆ ವ್ಯಾಪಕ ಸಮರ್ಥನೆ ದೊರಕುತ್ತಿರಲಿಲ್ಲ. ಅಮೃತಸರದಿಂದ ವಿಮಾನವನ್ನು ಹಾರಲು ಬಿಡಬಾರದಿತ್ತು ಎನ್ನುವ ಜನರಿದ್ದಾರೆ. ಹಾಗೆ ಮಾಡಿದ್ದು, ಅಪಹರಣಕಾರರು ವಿಮಾನದಲ್ಲಿದ್ದವರನ್ನು ಕೊಂದಿದ್ದರೆ ? (ವಿಮಾನ ಸ್ಫೋಟಿಸಲು ಅವರಿಗೆ ಸಾಧ್ಯವಿರಲಿಲ್ಲವೆಂದು ತಿಳಿದಿದ್ದು ಆಮೇಲೆ).

ಅದ್ವಾನಿ-ಜಸವಂತ್-ವಾಜಪೇಯಿ ಈ ಘಟನೆಯ ಬಗ್ಗೆ ಬೇರೆ ಬೇರೆ ಧ್ವನಿಗಳಲ್ಲಿ ಮಾತಾಡಿರುವುದು ಆರೋಗ್ಯಕರವಲ್ಲ. ಹುಯಿಲೆಬ್ಬಿಸುವುದರಲ್ಲಿ ನಿಷ್ಣಾತರಾದ ಅದ್ವಾನಿ ಈಗಲೂ ಹುಯಿಲಿನ ಭಾಷೆಯನ್ನೇ ಬಳಸುತ್ತಿದ್ದರೆ, ತುಟಿ ಬಿಚ್ಚದೆ ಮಾತನಾಡುವ ಜಸವಂತ್ ಆಫ್ಘಾನಿಸ್ತಾನದ ತಾಲಿಬಾನನ್ನು ಶ್ಲಾಘಿಸುವುದರಲ್ಲೇ ತೃಪ್ತಿ ಪಡೆದಿದ್ದಾರೆ. ''ನಗುವ ಬುದ್ಧ''ನನ್ನು ಸೃಷ್ಟಿಸಿದ ವಾಜಪೇಯಿ ಬುದ್ಧನ ಪ್ರತಿಮೆಯಂತೆ ಏನೂ ಮಾತನಾಡಲಾರದೆ ಕಣ್ಣುಮುಚ್ಚಿ ಕುಳಿತುಕೊಳ್ಳುವಂತಾಗಿದೆ. ಸುಸಂಘಟಿತ ಯೋಜನೆ, ಲಯ ತಪ್ಪದ ಸಂಧಾನ, ಮಾತನಾಡುವಾಗ ಎಚ್ಚರ, ಮಾತಿಗಿಂತ ಕೃತಿಗೆ ಆದ್ಯತೆ, ಇವೆಲ್ಲಾ ವಾಜಪೇಯಿ ಆಡಳಿತ ಕ್ರಮದಲ್ಲಿ ಸೊನ್ನೆಯೆಂಬುದು ಕಾಂದಹಾರ್ ಪ್ರಕರಣ ಬಯಲಿಗೆಳೆದಿದೆ. ಒತ್ತೆಯಾಳುಗಳ ಬಿಡುಗಡೆಯನ್ನು ಹರ್ಷದಿಂದ ಸ್ವಾಗತಿಸುತ್ತಲೇ ಈ ಮಾತನ್ನು ಹೇಳಬೇಕಾಗಿದೆ. ''ಏನೇ ಆದರೂ ಅವರಿಗೆ ಮಣಿಯುವುದಿಲ್ಲ'' ಎಂಬ ವಾಜಪೇಯಿ ಆರ್ಭಟ ಅರ್ಥಹೀನವಾಯಿತಷ್ಟೇ ಅಲ್ಲ; ಅವರ ಸಂಪುಟದ ಸದಸ್ಯ, ಭಾರತದ ವಿದೇಶಾಂಗ ವ್ಯವಹಾರಗಳ ಸಚಿವ, ಜಸವಂತ ಸಿಂಗ್, ಘೋರ ಅಪರಾಧಿಗಳ ಜೊತೆ ವಿಮಾನದಲ್ಲಿ ಕಾಂದಹಾರ್‌ಗೆ ಪ್ರಯಾಣ ಬೆಳೆಸಿದರು ! ಇದು ಅತ್ಯಂತ ನಾಚಿಕೆಗೇಡಿನ, ಅವಿವೇಕದ ಪ್ರಸಂಗ. ಪಾತಕಿಗಳಿಗಾಗಿ ಬೇರೊಂದು ವಿಮಾನ ಹಾರಿಸಿದ್ದರೂ ನಷ್ಟವಿರಲಿಲ್ಲ; ಆದರೆ ಒಬ್ಬ ಸಚಿವರು ಬೆಂಗಾವಲಾಗಿ ಹೋಗಿ ಅವರ ಮರ್ಯಾದೆ ಮಾಡಿದ್ದರೆನ್ನುವುದು ಅಕ್ಷಮ್ಯ. ಯಾವ ಮಹದುಪಕಾರ ಮಾಡಿದ್ದಕ್ಕೆ ಈ ಸಚಿವರು ತಾಲಿಬಾನ್ ಸರ್ಕಾರಕ್ಕೆ ವಂದನೆ ಸಲ್ಲಿಸುತ್ತಿದ್ದಾರೋ ತಿಳಿಯದು. ಸ್ಫೋಟಕ ಸಾಮಗ್ರಿಯನ್ನು ಅಪಹರಣಕಾರರಿಗೆ ದಕ್ಕಿಸಿಕೊಟ್ಟಿದ್ದಕ್ಕೇನು ? ಅಥವಾ ಭಾರತದ ವಾಯುಪಡೆ ಕಾಂಧಹಾರ್‌ಗೆ ಬಂದುಬಿಟ್ಟೀತೆಂದು ಅಪಹೃತ ವಿಮಾನದ ಸುತ್ತ ತನ್ನ ಸೇನಾಬಲವನ್ನು ಜಮಾಯಿಸಿದ್ದಕ್ಕೋ ? ಅಥವಾ, ಅಪಹರಣಕಾರರನ್ನೂ ಬಿಡುಗಡೆಗೊಂಡ ವಿದ್ರೋಹಿಗಳನ್ನೂ ಪಾಕಿಸ್ತಾನದ ಗಡಿಗೆ ಸಾಗಿಸಿದ್ದಕ್ಕೋ ?

ಒಟ್ಟಿನಲ್ಲಿ ನಮ್ಮ ಕೇಂದ್ರ ಸರ್ಕಾರದ ಮಾತಿನ ಮಲ್ಲರು ಸುಬದ್ಧ ಹಾಗೂ ಪ್ರಬುದ್ಧವಾದ ಸಮಾಲೋಚನೆ ನಡೆಸಿ ಕಾರ್ಯಶೀಲರಾಗಲು ಸರ್ವಥಾ ಅಸಮರ್ಥರು ಎಂಬುದಕ್ಕೆ ಈ ಪ್ರಕರಣ ಒಂದು ನಿದರ್ಶನವಾಯಿತು. ಅಮೆರಿಕಾಕ್ಕೆ ಡೊಗ್ಗು ಸಲಾಮು ಹಾಕುವುದನ್ನುಳಿದು ಬೇರೇನನ್ನಾದರೂ ವಾಜಪೇಯಿ ಸರ್ಕಾರ ಮಾಡಬಲ್ಲುದೇ ಎಂಬ ಅನುಮಾನ ತೀವ್ರವಾಗುತ್ತಿದೆ. ಪಾಕಿಸ್ತಾನವೇ ಎಲ್ಲಕ್ಕೂ ಹೊಣೆ ಎಂದು ಅರಚಿದರೆ ಈ ಸರ್ಕಾರದ ಜವಾಬ್ದಾರಿ ಮುಗಿಯುವುದಿಲ್ಲ. ''ಅಲ್ಲಿ ಪ್ರಜಾಪ್ರಭುತ್ವವಿಲ್ಲ, ಅದು ಆತಂಕವಾದಕ್ಕೆ ಬೆಂಬಲವಾಗಿ ನಿಂತಿದೆ, ಆದ್ದರಿಂದ ಪಾಕಿಸ್ತಾನ ಸರ್ಕಾರವನ್ನು 'ಭಯೋತ್ಪಾದಕ ರಾಷ್ಟ್ರ' ಎಂದು ಘೋಷಿಸಿ'' ಎಂದು ಅಮೆರಿಕಾಕ್ಕೆ ಮೊರೆಯಿಡುವ ವಾಜಪೇಯಿ ಸರ್ಕಾರ ಅಮೆರಿಕಾ ವಿಶ್ವದಲ್ಲೆಲ್ಲಾ ಎಂತಹ ಭಯೋತ್ಪಾದಕ ಕೃತ್ಯಗಳನ್ನೆಸಗಿದೆಯೆಂಬ ಪ್ರಶ್ನೆಯನ್ನು ಹಾಕಿಕೊಳ್ಳುವುದಿಲ್ಲವೇಕೆ ? ನಮ್ಮನ್ನು ನಾವು ರಕ್ಷಿಸಿಕೊಳ್ಳಲು ಅಮೆರಿಕಾದ ಆಸರೆ ಅಪೇಕ್ಷಿಸುವ ಸರ್ಕಾರಕ್ಕೆ ಏನು ಹೇಳಬೇಕು ? ಇದಕ್ಕಿಂತಲೂ ಹೆಚ್ಚು ಗೌರವಯುತವಾಗಿ ಬಾಳಲು ಭಾರತಕ್ಕೆ ಹಕ್ಕಿದೆ, ಸಾಮರ್ಥ್ಯವಿದೆ. ಅದನ್ನು ಆಗುಮಾಡಿಕೊಳ್ಳಲು ಮುಂದಾಗುವುದು ನಮ್ಮ ತುರ್ತಿನ ಅವಶ್ಯಕತೆ.

ಆ ದಿಸೆಯಲ್ಲಿ ಕಾರ್ಯತತ್ಪರರಾಗಬೇಕಾಗಿರುವಾಗ ''ಹಿಂದೂಗಳು ಹೇಡಿಗಳು'' ಎಂಬ ಪ್ರಚೋದಕ ಮಾತುಗಳು ಕೇಳಿ ಬರುತ್ತಿವೆ. ಅದನ್ನು ಹೇಳುತ್ತಿರುವವರು ಕಟ್ಟಾ ಹಿಂದುತ್ವದ ಪ್ರತಿಪಾದಕರು. ಉದ್ದೇಶ ಗೂಢವೇನಲ್ಲ; ಧೀರರಾಗಿ ಕಂಗೊಳಿಸಬೇಕಾದರೆ ಹಿಂದುಗಳು ಅನ್ಯಮತೀಯರನ್ನು ಶಿಕ್ಷಿಸಬೇಕು! ಅಂತರರಾಷ್ಟ್ರೀಯ ಮಟ್ಟದಲ್ಲಿ ಹತಾಶೆಗೊಂಡು ಪ್ರಾದೇಶಿಕ ಮಟ್ಟದಲ್ಲಿ ದಾಂಧಲೆ ನಡೆಸಲು ಈ ಕರೆ. ಇದು ಅಪಾಯಕಾರಿ ನಿಲುವು. ಇದನ್ನು ಸಾರ್ವಜನಿಕರು ಅರಿತುಕೊಳ್ಳಬೇಕಾಗಿದೆ. ಅರಿತುಕೊಂಡಿದ್ದಾರೆ.

## ಕರ್-ಮ-ಪ ತಂದ ತಲೆನೋವು

೧೨೧೬ರಿಂದ ೫೧ರ ನಡುವೆ ಜೀವಿಸಿದ್ದ ಕುನ್-ದ್ಗಾ-ರಿಗ್ಯಾಲ್ ಎಂಬ ಪ್ರಸಿದ್ಧ ಬೌದ್ಧ ಸನ್ಯಾಸಿಯು ಟಿಬೆಟ್ಟಿನಲ್ಲಿ ಬೌದ್ಧಮತ ಪ್ರಚಾರಕ್ಕೆ ಶ್ರಮಿಸಿದವರಲ್ಲಿ ಅತಿಶ್ರೇಷ್ಠ. ಚೆಂಗಿಜ಼್ ಖಾನ್ ರಕ್ತದ ಹೊಳೆಯನ್ನು ಹರಿಸುತ್ತಿದ್ದ ಕಾಲದಲ್ಲಿ ಈತ ಮಂಗೋಲಿಯಾಕ್ಕೆ ಬೌದ್ಧ ಭಿಕ್ಷುಗಳನ್ನು ಕಳಿಸಲು ಅಂಜಲಿಲ್ಲ. ಮಂಗೋಲಿಯಾ ಸೈನ್ಯದ ದಂಡನಾಯಕ ಚಿ-ಗ್ಯಾ-ದೋ-ತಿ ಎಂಬುವವನು ಟಿಬೆಟ್ಟಿನಲ್ಲಿ ಆಕ್ರಮಣ ನಡೆಸಿದಾಗ ಸಾ-ಸ್ಕ್ಯ ಗೊಂಫಾ ಒಂದರಲ್ಲೇ ಐನೂರು ಭಿಕ್ಷುಗಳು ಸತ್ತರು. ಬೇರೆ ಹಲವು ಗೊಂಫಾ (ಬೌದ್ಧಮಂದಿರ)ಗಳು ನೆಲಸಮವಾದವು. ೧೨೪೭ರಲ್ಲಿ ರಿಗ್ಯಾಲ್‌ನೇ ಸ್ವತಃ ಮಂಗೋಲಿಯಾದ ಚಕ್ರವರ್ತಿಯನ್ನು ಭೇಟಿಯಾಗಿ, ಮನವೊಲಿಸಿ, ಅವನ ಗುರುವಾದ. ಧುಸ್ ಮತ್ತು ಗಿತ್ಸಾನ್ ಪ್ರಾಂತಗಳನ್ನು ಆ ಚಕ್ರವರ್ತಿ ಬೌದ್ಧಮಂದಿರಕ್ಕೆ ಬಳುವಳಿಯಾಗಿ ನೀಡಿದ. ಟಿಬೆಟ್ಟಿನಲ್ಲಿ ಬೌದ್ಧಧರ್ಮದ ಆಳುವ ಶಕ್ತಿ ಅದರಿಂದ ಪ್ರಾರಂಭವಾಯಿತು ಮತ್ತು ಆ ಮತಧರ್ಮದ ವ್ಯಾಪ್ತಿ ಹರಡಿತು.
ಸಾ-ಸ್ಕ್ಯ ಬಿಸಾದ್ ಎಂಬ ರಿಗ್ಯಾಲ್‌ನ ತತ್ತ್ವ ಗ್ರಂಥವು ಈಗಲೂ ಟಿಬೆಟ್ಟಿನಲ್ಲಿ ಅಧ್ಯಯನ ಮಾಡಲಾಗುವ ಮಹತ್ವದ ಗ್ರಂಥ.

ಅಂದಿನ ಸನ್ನಿವೇಶಕ್ಕೂ ಇಂದಿನ ಕರ್-ಮ-ಪನಂತಹ ಬೌದ್ಧ ಗುರುಗಳ ಕರ್ಮಕ್ಕೂ ಸಾಕಷ್ಟು ಅಂತರವಿದೆ. ರಿಗ್ಯಾಲ್ ನಂತರದ ಸ್ಕಾರ್-ಮ ಎಂಬುವವನ ಶಿಷ್ಯರಲ್ಲಿ ಯಾರೂ ಯೋಗ್ಯರಿರಲಿಲ್ಲವೆಂದಲ್ಲ; ಆದರೆ ಅವರನ್ನು ಬಿಟ್ಟು ರಾನ್-ಬ್ಯುನ್-ದೋ-ರ್ಜೆ

ಎಂಬ ಹುಡುಗನನ್ನು ಸ್ಕಾರ್-ಮನ ಅವತಾರವೆಂದು ಘೋಷಿಸಿ ಪಟ್ಟಕ್ಕೆ ತರಲಾಯಿತು. ಆಗಿನಿಂದ ಲಾಮಾಗಳ ಅವತಾರ ಟಿಬೆಟ್ಟಿನಲ್ಲಿ ನಿರಂತರವಾಗಿ ಸಾಗಿಬಂದಿದೆ. ಒಂದು ಶಾಖೆಯ ಸಂಪ್ರದಾಯವಾಗಿ ಆರಂಭವಾದದ್ದು ಬೇರೆ ಶಾಖೆಗಳಿಗೂ ಹಬ್ಬಿ ಈಗ ಟಿಬೆಟ್ಟಿನಲ್ಲಿ ಅದೆಷ್ಟು ''ಜೀವಂತ ಬುದ್ಧ''ಗಳಿದ್ದಾರೋ ಹೇಳಬರುವುದಿಲ್ಲ. ಸದ್ಯದಲ್ಲಿ ಕರ್-ಮ-ಪ ಅಲ್ಲದೆ ಎರಡು ವರ್ಷ ವಯಸ್ಸಿನ ಇನ್ನೊಬ್ಬ ಹುಡುಗ ಸಹ ಜೀವಂತ ಬುದ್ಧನೆಂದು ಹುಡುಕಿಹಾಕಲಾಗಿದ್ದಾನೆ.

ಆಗ ಈ ಸಂಪ್ರದಾಯಕ್ಕೆ ಒಂದು ಕಾರಣವಿತ್ತು; ಹುಡುಗನನ್ನು ಪಟ್ಟಕ್ಕೇರಿಸಿ ಅವನ ಸುತ್ತಮುತ್ತಲ ಜನ ಇಡೀ ಗೊಂಪಾದ ಆಸ್ತಿಯನ್ನು ಭೋಗಿಸಲು ಅನುಕೂಲ ಮಾಡಿಕೊಳ್ಳುತ್ತಿದ್ದರು. ವಿದ್ವತ್ತು, ಧಾರ್ಮಿಕ ಸತ್ವ, ಝಾನ (ಧ್ಯಾನ) ಮುಂತಾದುವೆಲ್ಲಾ ಅಪ್ರಸ್ತುತವಾಗಿ ಮಠಾಧೀಶನ ಆಸ್ತಿಗೆ ಪ್ರಾಬಲ್ಯ ಬರುತ್ತಿತ್ತು. ಇಂತಹ ಸನ್ನಿವೇಶವು ಈಗ ಇಲ್ಲವಾಗಿದೆಯೆಂದು ಹೇಳಲಾಗದು.

ಹದಿಮೂರು ವರ್ಷದ ಕರ್-ಮ-ಪ ''ಓಡಿ ಬಂದಿದ್ದಾನೆ'' ಎಂಬ ಸುದ್ದಿ ಬಂದಾಗ ಈ ಹಿನ್ನೆಲೆಯನ್ನು ಗಮನಿಸುವುದು ಸೂಕ್ತ. ಆಸ್ತಿಯ ದಾಳವಾಗಲು ಸಾಧ್ಯವಿರುವಂತೆ ಒಬ್ಬ ಪುಟ್ಟ ಲಾಮಾ ರಾಜಕೀಯ ದಾಳವೂ ಆಗಬಲ್ಲ. ಇದು ಯಾರ ಮತ್ತು ಎಂತಹ ರಾಜಕೀಯವೆಂಬುದಷ್ಟೇ ಭಾರತದ ರಾಜತಾಂತ್ರಿಕ ವಲಯಗಳಲ್ಲಿ ಚರ್ಚೆಗೆ ಬರಬೇಕಾದ್ದು. ಧಾರ್ಮಿಕ ಶ್ರದ್ಧಾಳುವಾಗಿ ಈ ಹುಡುಗ ಟಿಬೆಟ್ಟಿನಿಂದ ಕಾಲ್ಕಿತ್ತಿದ್ದಾನೆಂದು ಹುಂಬರು ನಂಬಬಹುದು; ಸರ್ಕಾರದ ವಿದೇಶಾಂಗ ಸಚಿವಾಲಯ ಅದನ್ನು ಗಂಭೀರವಾಗಿ ಪರಿಗಣಿಸುವುದಿಲ್ಲ. ಯಥಾಪ್ರಕಾರ ನಮ್ಮ ರಕ್ಷಣಾ ಸಚಿವ ಜಾರ್ಜ್ ಫರ್ನಾಂಡಿಸ್ ಕರ್-ಮ-ಪನ ರಕ್ಷಣೆಗೆ ಧಾವಿಸಿ ಚೀಣಾದ ಮೇಲೆ ಆರೋಪ ಹೊರಿಸುವಂತಹ ಮಾತುಗಳನ್ನಾಡಿದ್ದಾರೆ. ಒಂದು ಗೊಂಪಾದ ಆಂತರಿಕ ವಿದ್ಯಮಾನಗಳಿಗೆ ಸ್ಪಂದಿಸುವುದು ಭಾರತ ಸರ್ಕಾರಕ್ಕೆ ಆದ್ಯತೆಯ ವಿಷಯವಾಗಲಾರದು. ಚೀಣಾ ಸರ್ಕಾರ ಸಹ ಒಬ್ಬ ಹುಡುಗನ ವಿಷಯವನ್ನು ರಾಜತಾಂತ್ರಿಕ ಸಂಬಂಧಗಳ ಕೇಂದ್ರಬಿಂದುವನ್ನಾಗಿ ಮಾಡಬಾರದು. ಕ್ಯೂಬಾದ ಒಬ್ಬ ಹುಡುಗನ ನೆವದಲ್ಲಿ ಅಮೆರಿಕಾ ದೊಡ್ಡ ಗೊಂದಲ ಎಬ್ಬಿಸಿರುವಂತೆ ಕರ್-ಮ-ಪ ಬಗೆಗೂ ಎಬ್ಬಿಸಹೊರಟಿದೆ. ಅಮೆರಿಕಾ ಸರ್ಕಾರದ ಪ್ರತಿನಿಧಿಯೊಬ್ಬಳು ಆಗಲೇ ಈ ಹುಡುಗನನ್ನು ಭೇಟಿಯಾಗಿ ರಾಜಕೀಯದ ಮಾತಾಡಿದ್ದಾಳೆ. ಅಮೆರಿಕಾದ ಬಲೆಗೆ ಬಿದ್ದು ಭಾರತ ಸರ್ಕಾರವು ಚೀಣಾದೊಡನೆ ಬಾಂಧವ್ಯವನ್ನು ಕೆಡಿಸಿಕೊಳ್ಳದಿರುವಂತೆ ಎಚ್ಚರ ವಹಿಸಬೇಕಾಗಿದೆ.

## ಉತ್ಸವಗಳ ಹಾವಳಿ

ಅದೇನು ಸಾಧಿಸಿದ್ದೇವೋ ಏನೋ, ಅಂತೂ ಉತ್ಸವಗಳು ನಮ್ಮ ರಾಜ್ಯದಲ್ಲಿ ದಿನನಿತ್ಯದ ವ್ಯವಹಾರವಾಗಿದೆ. ಸಹಸ್ರಮಾನವನ್ನು ಸ್ವಾಗತಿಸಲು ಲಂಡನ್ನಿನಲ್ಲಿ ಕಟ್ಟಲಾದ ಬೃಹತ್ ಗೋಪುರವು ಅಸಹ್ಯವಾಗಿದೆಯೆಂದು ಬ್ರಿಟನ್ನಿನ ರಾಜಕುಮಾರ ಉದ್ಗರಿಸಿದ್ದಾನಂತೆ. ಹಾಗೆ ಉದ್ಗರಿಸುವವರು ಬೆಂಗಳೂರಿನ ವಿಧಾನಸೌಧದಲ್ಲಿ ಯಾರೂ ಇಲ್ಲವೆಂದು ತೋರುತ್ತದೆ. ಇದ್ದಿದ್ದರೆ ನಮ್ಮ ಉತ್ಸವಗಳನ್ನು ಅಸಹ್ಯವೆಂದು ಹೇಳುವ ಬದಲು ಕುಸಂಸ್ಕೃತಿಯ ಆಗರಗಳೆಂದು ಛೀಮಾರಿ ಹಾಕುತ್ತಿದ್ದರು. ಕರ್ನಾಟಕದ ಸಂಸ್ಕೃತಿ ಬಡಕಲಾಗಿ ಉಸಿರು ಕಳೆದುಕೊಂಡು ಬಿಟ್ಟೀತೆಂಬ ಆತಂಕ ಕಾಡುತ್ತಿರುವವರಂತೆ ನಟಿಸುವ 'ಸಾಂಸ್ಕೃತಿಕ' ಆಡಳಿತಗಾರರು ಉತ್ಸವಗಳಲ್ಲಿ ಪ್ರಕಾಶಕ್ಕೆ ಬರುತ್ತಿರುವುದು ಎಲ್ಲರಿಗೂ ತಿಳಿದಿದೆ. ರಾಜ್ಯದ ಬೇರೆ ಬೇರೆ ಭಾಗಗಳ ಜನಕ್ಕೆ ನಮ್ಮ ಸಾಂಸ್ಕೃತಿಕ ಪರಂಪರೆಯನ್ನು ಪರಿಚಯಿಸಿಕೊಡುವ ಪ್ರಯತ್ನವನ್ನು ಹೀಗಳೆಯುವುದು ಉದ್ದೇಶವಲ್ಲ; ಆದರೆ ಉತ್ಸವಗಳ ಹೆಸರಿನಲ್ಲಿ ನಡೆಯುತ್ತಿರುವ ಬೇರೆ ಅವ್ಯವಹಾರಗಳನ್ನು ಮುಚ್ಚಿಡಬಾರದು ಎಂಬುದಷ್ಟೇ ಮುಖ್ಯ ಆಶಯ.

ಕೃಷ್ಣ, ಪೆದ್ದು ಕೃಷ್ಣ, ಸುಂದರ ಕೃಷ್ಣ ಮುಂತಾದ ಹೆಸರುಗಳಲ್ಲಿ 'ಕೃಷ್ಣ' ಇರುವಂತೆ 'ಕಪ್ಪು ಛಾಯೆ' ಸಹ ಇದೆ. ಈ ಕೃಷ್ಣರೆಲ್ಲ ಉತ್ಸವಗಳಲ್ಲಿ ಪೆದ್ದುತನವನ್ನು ಮೆರೆಯುವುದರ ಜೊತೆಗೆ ಜೇಬುಗಳನ್ನು ತುಂಬಿಸಿಕೊಳ್ಳುತ್ತಿದ್ದಾರೆಂಬ ಪುಕಾರನ್ನು ಸುಮ್ಮನೆ ತಳ್ಳಿಹಾಕುವಂತಿಲ್ಲ. ಕೆಲವು ತಿಂಗಳುಗಳ ಹಿಂದೆ ಚಿಕ್ಕಬಳ್ಳಾಪುರದಲ್ಲಿ 'ಉತ್ಸವ' ಜರುಗಿತು. ದೂರದೂರದಿಂದ ಹತ್ತಾರು ಜಾನಪದ ಕಲಾವಿದರು ಬಂದರು. ಜನರಿಗೆ ತಮ್ಮ ಕಲೆಯ ಔತಣ ನೀಡಿದರು. ಅವರಿಗೆ ತಂಗುವ ಸ್ಥಳ, ಊಟ, ಮುಂತಾದುವು ಬಹಳ ಕಳಪೆಯಾಗಿತ್ತೆಂದು ನೋಡಿದ ಜನ ಹೇಳಿದರು. ಅನುಭವಿಸಿದ ಕಲಾವಿದರೂ ಹೇಳಿದರು. ಸರ್ಕಾರದ ಲೆಕ್ಕಪತ್ರಗಳಲ್ಲಿ ಮಾತ್ರ ಅವರಿಗೆಲ್ಲಾ ಅದ್ದೂರಿ ವ್ಯವಸ್ಥೆ ಮಾಡಲಾಗಿತ್ತು. ಅಂದರೆ ಅವರ ಪ್ರಯಾಣದ ಭತ್ಯೆ, ತಂಗುವ ವ್ಯವಸ್ಥೆ, ಊಟೋಪಚಾರ ಎಲ್ಲಾ ಭವ್ಯವಾಗಿ ಮಾಡಲಾಗಿತ್ತು. ಮಾಡಲಾಗಿತ್ತೆಂದು ಲೆಕ್ಕ ತೋರಿಸಿ ಅವರ ಹೆಸರಿನಲ್ಲಿ ನಮ್ಮ ಕೆಲವು ''ಸಾಂಸ್ಕೃತಿಕ'' ಅಧಿಕಾರಿಗಳು ಹಣವನ್ನು ಗುಳುಂ ಮಾಡಿ, ಕಲಾವಿದರಿಗೆ ಟೋಪಿ ಹಾಕಿದ್ದರು.

ಉತ್ಸವಗಳ ಹಿಂದಿನ ಹುರುಪು ಇದೇ ಆಗಿದೆ. ಒಂದು ಡೊಳ್ಳು ಕುಣಿತ ಮಾಡಿಸಿದರೆ ಯಾರೋ ಅಧಿಕಾರಿ ತನ್ನ ಡೊಳ್ಳನ್ನು ಚೆನ್ನಾಗಿ ಬೆಳೆಸಿಕೊಳ್ಳುತ್ತಾನೆ! ಡೊಳ್ಳು ಬಾರಿಸಿದವನು ಚಪ್ಪಾಳೆ ಪಡೆದು ಹಿಂದಿರುಗುತ್ತಾನೆ. ಹೀಗೆ ಜೇಬು ತುಂಬಿಸಿಕೊಳ್ಳುವ ಉತ್ಸಾಹದಿಂದ ನಡೆಸಲಾಗುವ ಉತ್ಸವಗಳ ಅವ್ಯವಹಾರಗಳ ಬಗ್ಗೆ ಆಗಾಗ್ಗೆ ದನಿಯೆತ್ತಲಾಗಿದೆಯಾದರೂ ಸಂಸ್ಕೃತಿಯು ಮಹತ್ವಾದ ವಿಷಯವಾದ್ದರಿಂದ ಅದರ ಹಿಂದಿನ ಜಾಣ ಲೂಟಿ ಮರೆಯಾಗಿದೆ.

ಹತ್ತೊಂಬತ್ತನೆಯ ಶತಮಾನದ ಇಂಗ್ಲೆಂಡಿನಲ್ಲಿ ಉತ್ಸವ ಸಂಪ್ರದಾಯ ಬಲವಾಗಿತ್ತು. ೧೮೪೮ರಲ್ಲಿ ಇಡೀ ಯೂರೋಪು ದುಡಿಯುವ ಜನತೆಯ ಉಗ್ರ ಕಾಳಗಗಳಿಂದ ತತ್ತರಿಸಿತ್ತು. ಇಂಗ್ಲೆಂಡ್ ಸಹ ಅದಕ್ಕೆ ಹೊರತಾಗಿರಲಿಲ್ಲ. ಬ್ರಿಟನ್ನಿನ ಸರ್ಕಾರವು ಜನರನ್ನು ಓಲೈಸಲು ಒಂದು ತಂತ್ರವನ್ನು ಹುಡುಕಿಕೊಂಡಿತು. ಅದೇ ಉತ್ಸವ ಸಂಪ್ರದಾಯ. ೧೮೫೧ರಲ್ಲಿ ಲಂಡನ್ನಿನಲ್ಲಿ ''ಬೃಹತ್ ಪ್ರದರ್ಶನ''ವೊಂದನ್ನು ಸಂಯೋಜಿಸಿ ದೇಶದ ಎಲ್ಲ ಭಾಗಗಳಿಂದ ಜನರನ್ನು ಅಲ್ಲಿಗೆ ಕರೆತರುವ ಏರ್ಪಾಟು ಮಾಡಲಾಯಿತು. ಎಂಥಾ ಅದ್ಭುತ ಎಂದು ಜನ ಮೂಗಿನ ಮೇಲೆ ಬೆರಳಿಟ್ಟುಕೊಂಡರಂತೆ. ಉತ್ಸವದ ಹಾವಳಿಯಲ್ಲಿ ಹೋರಾಟದ ಬಿಸಿ ಇಳಿದುಹೋಯಿತಂತೆ. ಈಗಲೂ ಲಂಡನ್ನಿನಲ್ಲಿರುವ 'ಹರಳುಗಳ ಅರಮನೆ' ಆ ಕಾಲದ್ದು. ಅದನ್ನು ನೋಡಿ ಮಂತ್ರಮುಗ್ಧರಾದಂತೆ ಜನ ತಮ್ಮ ಬವಣೆಯನ್ನು ಕೆಲಕಾಲ ಮರೆತು ಕ್ರಮೇಣ ಅದಕ್ಕೆ ಹೊಂದಿಕೊಂಡರಂತೆ. ಇದೇ ಪೂರ್ಣಸತ್ಯವಲ್ಲದಿರಬಹುದು. ಆದರೂ ನಮ್ಮ ಉತ್ಸವಗಳ ಹಿಂದೆ ಇಂತಹ ತಂತ್ರವೂ ಕೆಲಸ ಮಾಡುತ್ತಿರಬಹುದೇ? ಯೋಚಿಸಬೇಕಾದ ವಿಷಯ.

೦೦

ತಿಂಗಳ ಪತ್ರಿಕೆ
ಹೊಸತು
ನಿಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ : ೨೨೫೧೩೮೨
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - ೫೬೦ ೦೦೯ ☎ : ೨೮೭೨೩೮೫
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫೦೦೧ ☎ : ೪೪೧೦೦೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦೦೨೪ ☎ : ೪೪೪೮೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫೧೦೨ ☎ : ೨೪೩೦೨

### ಡಿಸೆಂಬರ್ ಸಂಚಿಕೆ

'ಹೊಸತು'ವಿನಲ್ಲಿರುವ ಲೇಖನಗಳಲ್ಲಿ ಯಾವುದು ಹೆಚ್ಚಿನದು ಎಂದು ಆಯ್ಕೆ ಮಾಡಲು ಆಗದ ರೀತಿಯಲ್ಲಿ ಉತ್ತಮ ಮಟ್ಟದ ಲೇಖನಗಳೇ ಬರುತ್ತವೆ. ಅದಕ್ಕೆ ಡಿಸೆಂಬರ್ '೯೯ರ ಸಂಚಿಕೆಯೇನೂ ಹೊರತಲ್ಲ. ಏಸುಕ್ರಿಸ್ತ - ಕ್ರಾಂತಿಕಾರಕ ಪುರುಷ (ಡಾ|| ಜಿ. ರಾಮಕೃಷ್ಣ) ಪೋಪರ ಆಗಮನ ಕಾಲದಲ್ಲಿ ಹೊಸಬೆಳಕನ್ನು ನೀಡುವ ಲೇಖನವಾಗಿದ್ದರೆ ''ಅಯೋಧ್ಯೆಯ ಮೊದಲ ಕೋಮು ಗಲಭೆ'' (ಕೆ. ಫಣಿರಾಜ್) ಲೇಖನ ಅಪರೂಪದ ದಾಖಲೆಯನ್ನು ನೀಡುತ್ತದೆ. ಬಾಬರಿ ಮಸೀದಿ ಸಂದರ್ಭದ ಹಿಂದೂ ಕೋಮುವಾದಿಗಳ ಭೀಕರ ವರ್ತನೆ-ಹಿಂಸೆ ಎದೆಯನ್ನು ನಡುಗಿಸುವಂತಹುದು. ಅದರ ಅರಿವೇ ನಮಗೆ ಇರಲಿಲ್ಲ. ಅದರಂತೆ ''ಉಳ್ಳವರ ಒಮ್ಮತದ ರಾಜಕೀಯ; ಮತೀಯವಾದ'' (ಜಿ. ರಾಜಶೇಖರ) ಲೇಖನ ದೇಶದಲ್ಲಿ ಕೋಮುವಾದ ಬೆಳದು ಬಂದುದರ ತರ್ಕಬದ್ಧ ಮತ್ತು ನಿಖರವಾದ ಬೆಳವಣಿಗೆಯನ್ನು ತಿಳಿಸುತ್ತದೆ. ಇವು ಅತ್ಯಂತ ಅಪೂರ್ವವಾದವುಗಳು.

ಹೊನ್ನಾವರ **ಡಾ|| ಆರ್. ವಿ. ಭಂಡಾರಿ**

ಶ್ರೀಮತಿ ಬಿ. ಎಸ್. ಶೈಲಜಾರವರ ನಭಾವ ಲೋಕನದಲ್ಲಿ ಡಿಸೆಂಬರ್ ೨೨ರಂದು ೧೬೦ ವರ್ಷಗಳಿಗೊಮ್ಮೆ ಚಂದ್ರ ಭೂಮಿಗೆ ಅತ್ಯಂತ ಸಮೀಪ ಬರುವ ದಿನದ ವಿಶೇಷದ ಬಗ್ಗೆ ಪ್ರಸ್ತಾಪವೇ ಇಲ್ಲ. ಇಂತಹ ಐತಿಹಾಸಿಕ ಘಟನೆ ಬಗ್ಗೆ ನಮಗೆ ಬೇರೆ ಯಾರೋ ಹೇಳಿದರು. ಆ ದಿನದಲ್ಲಿ ಬಹಳ ಮೋಡ ಮುಸುಕಿದ್ದರೂ ಮರುದಿನದ ಚಂದ್ರನನ್ನು ನೋಡಿದೆವು. ತುಂಬಾ ಸುಂದರವಾಗಿತ್ತು.

ಬೆಂಗಳೂರು **ಇಂದಿರಾ**

'ಹೊಸತು' ಹೊಸ ಅಭಿರುಚಿಯೊಂದಿಗೆ ಕಾಣಿಸಿಕೊಂಡಿದೆ. ವೈಚಾರಿಕ ಚಿಂತನೆಗಳನ್ನು ಅರಳಿಸುವ, ಕೆರಳಿಸುವ ಲೇಖನಗಳಿವೆ. ಇಂಥ ಪತ್ರಿಕೆಗಳ ಅಗತ್ಯವನ್ನು ಪೂರೈಸಿದ ನಿಮಗೆ ಧನ್ಯವಾದಗಳು.

ಚೆನ್ನೈ **ಪಾ. ಶ. ಶ್ರೀನಿವಾಸ**

### ನಾನೊಬ್ಬ ಸಮಾಜವಾದಿ

ತುಂಬಾ ಅರ್ಥಪೂರ್ಣ ಲೇಖನ. ಸಂಚಿಕೆ ಆಕರ್ಷಕವಾಗಿದೆ. ಬಿಸಿಲು ಮಳೆಗೆ ನೆನೆಯದೆ, ಬೇಯದೆ, ಸಿಂಹಾಸನದಲ್ಲಿ ಬೆಚ್ಚಗೆ ಕುಳಿತು ಆಳ್ವಿಕೆ ನಡೆಸುವವರ ಐಶಾರಾಮದ ಬದುಕಿನ ಕುರಿತ 'ಗಜಗಾತ್ರದ ಮಂತ್ರಿಮಂಡಲ' ಲೇಖನ ಓದಿ ಆಶ್ಚರ್ಯಚಕಿತನಾದೆ. ಜೊತೆಗೆ ವಿವಿಧ ರೀತಿಯ ವೇಷಗಳನ್ನು ಧರಿಸಿ ಸುದ್ದಿ ಸಂಗ್ರಹ ಕಾರ್ಯದಲ್ಲಿ ಪತ್ರಕರ್ತೆ ಅನಿತಾ ಪ್ರತಾಪ್‌ರ ಧೈರ್ಯ ಸಾಹಸಗಳನ್ನು ಮೆಚ್ಚಿದೆ.

ಶಿವಮೊಗ್ಗ **ಎನ್. ಡಿ. ತಿಪ್ಪೇಸ್ವಾಮಿ ಸೋನಾಲಿ**

### ವಿವೇಕ-ಆನಂದ

ವಿವೇಕಾನಂದರು ಹೇಳುವ ಹಾಗೆ ಆಧ್ಯಾತ್ಮ ಜನರ ನೋವಿಗೆ, ಬಡತನಕ್ಕೆ ಸ್ಪಂದಿಸಬೇಕು. ಜೀವಿಸಲು ಆಹಾರ ನೀಡದ ಆಧ್ಯಾತ್ಮ ನಮಗೆ ಬೇಡ. ಬಡವರ ಕಣ್ಣೀರು ಹರಿಸಿ, ಭಾವನೆಗಳೊಂದಿಗೆ ಚೆಲ್ಲಾಟವಾಡಿ ತಮ್ಮನ್ನು ಉದ್ಧರಿಸಿಕೊಳ್ಳುವ ಜನರ ನಡುವೆ ಎಚ್ಚರಗೊಂಡು ಪುನಃ ವಿವೇಕಾನಂದರ ವಾಣಿಗೆ ಮರಳಬೇಕು. 'ಏಳಿ ಎಚ್ಚರಗೊಳ್ಳಿರಿ ಗುರಿಮುಟ್ಟುವವರೆಗೆ ನಿಲ್ಲದಿರಿ'

ಶಿವಮೊಗ್ಗ ಜಿಲ್ಲೆ **ಶಿವರಾಮ್ ಕಾರಗಡಿ**

ಹೊಸ ವರುಷದ ಪ್ರಥಮ ಸಂಚಿಕೆಯಲ್ಲಿ ಸ್ವಾಮಿ ವಿವೇಕಾನಂದರ ಮುಖಪುಟ ನೋಡಿ ಸಂತೋಷವಾಯಿತು. ಸ್ವಾಮಿಯ ಬಗೆಗಿನ ಲೇಖನವೂ ಉತ್ತಮವಾಗಿತ್ತು. ೧೦೦ ವರ್ಷಗಳ ಹಿಂದೆಯೇ ಜಾತಿ ಮತ ಕಂದಾಚಾರಗಳನ್ನು ಖಂಡಿಸಿದ ಸ್ವಾಮಿಯವರನ್ನು ಮತಾಂಧರು ಕೇಸರೀಮಯ ಗೊಳಿಸಲು ಪ್ರಯತ್ನಿಸುತ್ತಿರುವ ಈ ಸಮಯದಲ್ಲೇ ಇಂತಹ ಲೇಖನ ಬಂದಿರುವುದು ಸಕಾಲಿಕ. ಇಂತಹ ಲೇಖನ ಇನ್ನಷ್ಟು ನಮ್ಮ 'ಹೊಸತು' ಪ್ರಕಟಿಸುವಂತಾಗಲಿ. ಲೇಖಕರಿಗೆ ಹೃತ್ಪೂರ್ವಕ ಧನ್ಯವಾದಗಳು.

ಮಂಗಳೂರು **ಗಣೇಶ್ ಕುಮಾರ್**




### ಅನಿತಾ ಪ್ರತಾಪ್

ಹೊಸ ವರುಷದ, ಸಹಸ್ರಮಾನದ, ಸಂಚಿಕೆಯ ಮುಖಪುಟ ಉತ್ತಮವಾಗಿತ್ತು. ವ್ಯಕ್ತಿ ವ್ಯಕ್ತ ಅಂಕಣದಲ್ಲಿ ಅನಿತಾ ಪ್ರತಾಪ್‌ರ ಸಾಹಸ ಕಂಡು ಹೆಮ್ಮೆ ಎನಿಸಿತು. ಮಹಿಳೆ ಇಂದು ನಾಲ್ಕು ಗೋಡೆಗಳ ಮಧ್ಯದಿಂದ ಹೊರಬರುತ್ತಿದ್ದಾಳೆ ಎನ್ನಲು ಇದು ಸಾಕ್ಷಿಯಾಗಿದೆ.

ಆನೆಗುಂಡಿ **ಎ. ಆರ್. ಸಾಲಿಯಾನ್**

ಭಾವೀ ಪ್ರಜೆಗಳಾದ ಮಕ್ಕಳ ಸರ್ವಾಂಗೀಣ ಬೆಳವಣಿಗೆ ಕುರಿತು 'ಪರಸ್ಪರ'ದಲ್ಲಿ ಅಮೂಲ್ಯ ವಿಚಾರಗಳನ್ನು ತಿಳಿಸಿದ್ದೀರಿ. ಅಲ್ಲದೆ ಟಿ.ವಿ.ಯನ್ನು ಮಕ್ಕಳು ಹೆಚ್ಚಾಗಿ ನೋಡಿದರೆ ಆಗುವ ಅಪಾಯವನ್ನು ಮಾರ್ಮಿಕವಾಗಿ ತಿಳಿಸಿದ್ದೀರಿ. ಈ ಎರಡೂ ಲೇಖನಗಳು, ಶಿಕ್ಷಕರಿಗೆ ಪಾಲಕರಿಗೆ ದಾರಿದೀಪ ಇದ್ದಹಾಗೆ.

ಹೂವಿನ ಹಡಗಲಿ **ಸುರೇಶ ಅಂಗಡಿ**

### ಸರಕಾರದ ಸೇಡಿನ ಕ್ರಮ

ಜೀವವಿಮೆ ಮತ್ತು ಇತರ ವಿಭಾಗಗಳಲ್ಲಿ ವಿದೇಶಿ ವಿಮಾ ಕಂಪೆನಿಗಳು ಭಾರತಕ್ಕೆ ಬಂದು ನಮ್ಮ ಜನರಿಗೆ ಸೌಲಭ್ಯ ಕಲ್ಪಿಸಬೇಕೆಂಬ ಕೇಂದ್ರ ಸರ್ಕಾರದ ನಿಲುವು ಅಪಾಯಕಾರಿಯೆಂದು ಸಾಮಾನ್ಯವಾಗಿ ತಿಳಿದಿತ್ತು. ಆ ಬಗ್ಗೆ ಶ್ರೀ ರವಿಕುಮಾರ್ ಸಾಕಷ್ಟು ಮಾಹಿತಿ ನೀಡಿ ವಿದೇಶಿ ವಿಮಾ ಕಂಪೆನಿಗಳ ವ್ಯವಹಾರಗಳನ್ನು ವಿವರಿಸಿದ್ದಾರೆ. ಸರ್ಕಾರಕ್ಕೆ ಇದೆಲ್ಲಾ ತಿಳಿಯದೆ ? ಅಥವಾ, ತಿಳಿದೂ ಅವಕ್ಕೆ ಸ್ವಾಗತ ಬಯಸುತ್ತಿದ್ದಾರೆಯೇ ? ಈ ಒಗಟನ್ನು ಬಿಡಿಸಲು ನನಗೆ ಸಾಧ್ಯವಾಗಿಲ್ಲ.

ಇತ್ತೀಚೆಗೆ ಪತ್ರಿಕೆಗಳಲ್ಲಿ ಪ್ರಕಟವಾಗಿರುವಂತೆ ಇದೇ ಮೇ ತಿಂಗಳ ವೇಳೆಗೆ ವಿದೇಶಿ ವಿಮಾ ಕಂಪೆನಿಗಳು ಭಾರತದಲ್ಲಿ ಕೆಲಸ ಆರಂಭಿಸುತ್ತವೆ. ಸರ್ಕಾರದ ನೀತಿ ಏನೇ ಇರಲಿ, ಜನ ಎಚ್ಚರ ವಹಿಸಿದರೆ ಆ ಕಂಪೆನಿಗಳು ನಮ್ಮ ಜುಟ್ಟನ್ನು ಹಿಡಿಯಲು ಬರುವುದಿಲ್ಲ. 'ಸ್ವದೇಶಿ' ನಿಯಮವನ್ನು ಗೌರವಿಸುವವರು ಯಾರೂ ವಿದೇಶಿ ವಿಮಾ ಕಂಪೆನಿಗಳ ವ್ಯವಹಾರದಲ್ಲಿ ಭಾಗಿಗಳಾಗಬಾರದು. ಆ ಕಡೆ ಓಡುವ ಜನರನ್ನು ತಡೆಯಲು ಅವರೊಡನೆ ಸಂವಾದ ನಡೆಸಿ ಮನವೊಲಿಸಬೇಕು. ಇದು ಗಾಂಧೀಜಿಯವರ ಮಾರ್ಗಕ್ಕೆ ಒಪ್ಪಿಗೆಯಾಗುವಂಥದು.

ಇದೇ ಸಂದರ್ಭದಲ್ಲಿ ಕೇಂದ್ರ ಸರ್ಕಾರದ ಈಚಿನ ಇನ್ನೊಂದು ಕ್ರಮವನ್ನೂ ವಿಮರ್ಶೆ ಮಾಡಿಕೊಳ್ಳಬೇಕು. ಸರ್ಕಾರಿ ವಲಯಗಳಲ್ಲಿ (ಬ್ಯಾಂಕ್, ಅಂಚೆ ಕಚೇರಿ, ಪ್ರಾವಿಡೆಂಟ್ ಫಂಡ್ ಮುಂತಾದವು) ಸಣ್ಣ ಉಳಿತಾಯ ಮಾಡುತ್ತಿರುವ ಸಾರ್ವಜನಿಕರನ್ನು ಖಾಸಗಿ ಕಂಪೆನಿಗಳ ಕಡೆ ನೂಕುವುದು ಸರ್ಕಾರದ ಆಸೆಯೆಂದು ಕಾಣುತ್ತದೆ. ಜನರು ತಮ್ಮ ಹಣವನ್ನು ಸುಭದ್ರವಾಗಿ ಇಟ್ಟುಕೊಳ್ಳುವ ಬದಲು ಷೇರುಪೇಟೆಯಲ್ಲಿ ತೊಡಗಿಸಿ ಖಾಸಗಿಯವರಿಗೆ ಒಪ್ಪಿಸಲಿ ಎನ್ನುವಂತಿದೆ ಈ ಉಪಾಯ. ಸರ್ಕಾರಿ ಕ್ಷೇತ್ರದಲ್ಲಿ ಉಳಿತಾಯಕ್ಕೆ ಬಡ್ಡಿ ಕಡಿಮೆ ಮಾಡುವುದು ಅದಕ್ಕೇ. ಜೊತೆಗೆ ಷೇರುಪೇಟೆಯ ಆಮಿಷ ಬಲವಾಗುವಂತೆ ಅಲ್ಲಿ ಕೃತಕವಾಗಿ ಬೆಲೆಗಳ ಹೆಚ್ಚಳವನ್ನು ತೋರಿಸಲಾಗುತ್ತಿದೆ. ಅದನ್ನು ವಿದೇಶಿ ವಿಮಾ ಕಂಪೆನಿಗಳೂ ಮಾಡುತ್ತವೆ. ಒಟ್ಟಿನಲ್ಲಿ ಜನ ಯಾವ ಸೌಲಭ್ಯವನ್ನೂ ಖಾತ್ರಿಯಾಗಿ ಪಡೆಯಲು ಸಾಧ್ಯವಾಗುವುದಿಲ್ಲ. ಅಲ್ಲದೆ ವೈದ್ಯಕೀಯದಂತಹ ಕ್ಷೇತ್ರಗಳಲ್ಲಿ ಸಾಮಾನ್ಯರಿಗೆ ಎಟುಕದಂತಹ ಪರಿಸ್ಥಿತಿ ಹುಟ್ಟಿಕೊಳ್ಳುತ್ತದೆ. ಜನಸಾಮಾನ್ಯರನ್ನು ಕಂಡರೆ ಕೇಂದ್ರ ಸರ್ಕಾರಕ್ಕೆ ಇಷ್ಟು ಉಪೇಕ್ಷೆ ಮತ್ತು ಸೇಡಿನ ಭಾವನೆ ಏಕೆ ಉಂಟಾಗಿದೆಯೋ ಅರ್ಥವಾಗುತ್ತಿಲ್ಲ.

ಮೈಸೂರು **ಕೆ. ಎಸ್. ವಿಶ್ವೇಶ್ವರ**

*ಜನವರಿ ೨೦೦೦ದ ಸಂಚಿಕೆಯನ್ನು ಡಿಸೆಂಬರ್ ೨೮ರಂದೇ ಅಂಚೆ ಕಚೇರಿಗೆ ಮುಟ್ಟಿಸಲಾಗಿತ್ತು. ಆದರೆ ಓದುಗರಿಗೆ ತಲುಪಲು ಬಹಳ ತಡವಾಗಿದೆ. ಕೆಲವರಿಗೆ ಜನವರಿ ೧೨ರ ತನಕ ಮುಟ್ಟಿರಲಿಲ್ಲ. ವರ್ಷಾಂತ್ಯದಲ್ಲಿ ಶುಭಾಶಯ ಪತ್ರಗಳು ಬಹಳವಿರುತ್ತವಾದ್ದರಿಂದ 'ಹೊಸತು' ಪತ್ರಿಕೆ ರವಾನಿಸುವುದರಲ್ಲಿ ಅಂಚೆ ಕಚೇರಿಗಳಲ್ಲಿ ತಡವಾಗಿರಬಹುದು. ಪ್ರತಿ ತಿಂಗಳ ಐದನೇ ತಾರೀಖಿನೊಳಗೆ ಪತ್ರಿಕೆ ಮುಟ್ಟದಿದ್ದರೆ ಚಂದಾದಾರರು ಅಂಚೆ ಕಚೇರಿಗಳಲ್ಲಿ ವಿಚಾರಿಸಬೇಕಾಗಿ ವಿನಂತಿ. ಪತ್ರಿಕೆಯ ಕಚೇರಿಗೆ ಅಂಚೆ ಕಾರ್ಡನ್ನು ಬರೆದು ತಿಳಿಸಿದರೆ ಅನುಕೂಲ.*

*ವ್ಯವಸ್ಥಾಪಕರು, 'ಹೊಸತು'.*



# ಸಾಯಲೊಲ್ಲದ, ಸಾಯಲರಿಯದ ಆಳಲರಿಯದ, ಗರಬಡಿದ.....



ಸ್ವಾತಂತ್ರ್ಯ ಸಂಗ್ರಾಮದಲ್ಲಿ ಗೆಲುವು ಬರಲು ಒಂದು ಮುಖ್ಯಕಾರಣ, ಗಾಂಧೀಜಿ ನಮ್ಮ ಜನಕ್ಕೆ ಅಗತ್ಯಬಿದ್ದರೆ ಸಾಯಲು ಸದಾ ಸಿದ್ಧವಾಗಿರುವುದನ್ನು ಕಲಿಸಿದ್ದು. ಅದು ಆಮರಣಾಂತ ಉಪವಾಸವಿರಬಹುದು. ಪೊಲೀಸರ ಗುಂಡಿನಿಂದ ಇರಬಹುದು. ತಾತ್ವಿಕವಾಗಿ ಗಾಂಧೀವಾದ ದಲ್ಲಿ ಈ ಕೆಚ್ಚು ಮೂಡುವುದು ಹೋರಾಟದ ಉದ್ದೇಶ ಅಚಲವಾದ ಸತ್ಯವೊಂದರಲ್ಲಿ ಬೇರೂರಿರುವುದರಿಂದ. ಆ ಸತ್ಯ ಅನ್ಯಾಯದ ವಿರುದ್ಧವಾದ ಮೌಲ್ಯ. ನಮ್ಮನ್ನು ಆಳುವವರಿಗೆ ಅಂಥ ಒಂದು ಸತ್ಯದಲ್ಲಿ ನಿಚ್ಚಳ ನಂಬಿಕೆ ಇದೆಯೇ ?

ಮೊನ್ನೆ ವಿಮಾನ ಅಪಹರಣ ಪ್ರಕರಣದಲ್ಲಿ ನಾವು ಅನುಭವಿಸಿದ ಸೋಲಿಗೆ ಕಾರಣ ಆಳುವ ವರ್ಗದವರಿಗೆ ಗರ ಬಡಿದ ಮರಣಭೀತಿ. ಪ್ರಯಾಣಿಕರಲ್ಲಿ ಇದ್ದವರು ಬಹುಪಾಲು ಆಳುವವರ, ಅಧಿಕಾರದಲ್ಲಿರುವವರ ಸಂತಾನವೇ. ವಿಶ್ವದ ಮಹಾನ್ ಪ್ರಭುತ್ವಗಳಿಗೆ ನೋಟುಗಳನ್ನು ಅಚ್ಚುಹಾಕಿಸುವ ಸ್ವಿಟ್ಜರ್‌ಲೆಂಡಿನ ನಿಗೂಢ ವ್ಯಕ್ತಿಯೊಬ್ಬ, ತನ್ನ ಸಂಗಾತಿಯೊಡನೆ ಇದ್ದನೆಂದೂ ಇತ್ತೀಚೆಗೆ ವರದಿಯಾಗಿದೆ. ನನಗೂ ನಿಮಗೂ ವಿಮಾನದಲ್ಲಿ ಪರದೇಶಕ್ಕೆ ಮಧುಚಂದ್ರಕ್ಕೆ ಹೋಗುವ ಸಾಮರ್ಥ್ಯ ಎಲ್ಲಿಂದ ಬರಬೇಕು ! ಒಬ್ಬಾಕೆ ಪ್ರಧಾನಿ ಯನ್ನು ಕೇಳಿದಳಂತೆ : ನಿಮ್ಮ ಮಕ್ಕಳು ಒತ್ತೆಯಾಳಾಗಿದ್ದರೆ ಹೀಗೆ ಮಾಡುತ್ತಿದ್ದಿರಾ ? ಅಂತಿಮವಾಗಿ ಸಮಸ್ಯೆ ಬಗೆಹರಿದ ರೀತಿ ಆಕೆಗೆ ಸಮಾಧಾನ ತಂದುಕೊಟ್ಟಿರಬೇಕು. ಬಿಡುಗಡೆಯಾದ ಆಕೆಯ ಸಂತಾನ ಪೊಲೀಸ್ ಇಲಾಖೆಗೆ, ಮಿಲಿಟರಿಗೆ ಸೇರುತ್ತಾರೋ ಕಾನೂನು ಪರಿಪಾಲನೆ ಚೆನ್ನಾಗಿರುವ ಯಾವುದಾದರೂ ದೇಶಕ್ಕೆ ವಲಸೆ ಹೋಗಿಬಿಡುತ್ತಾರೋ ನಮಗೆ ತಿಳಿಯದೆಯೇ ಹೋಗಬಹುದು. ಪ್ರಧಾನಿಯವರಿಗೂ, ಗೃಹಮಂತ್ರಿ ಗಳಿಗೂ ಅವರು ಬಳುವಳಿ ಕೊಟ್ಟ ಬಳೆಗಳು ಅಪ್ಪಟ ಚಿನ್ನದ್ದಿರಲಾರವು !

ಬೇರಾವ ದೇಶಕ್ಕೂ ವಲಸೆ ಹೋಗಲಾರದ, ಹೋಗುವ ಒಲವೂ ಇಲ್ಲದ, ಆದರೂ ಆಳುವ ಅವಕಾಶವೂ ದಕ್ಕದಿರುವ ಸಾಧಾರಣ ಜನಕ್ಕೆ ಈ ಹಗರಣದ ಅರ್ಥ ಆಗಲೇಬೇಕು. ನನ್ನ ಹಳ್ಳಿಯ ಮಾಧ್ಯಮಿಕ ಶಾಲೆಯ ಉಪಾಧ್ಯಾಯರು ನಮ್ಮ ಸಮಸ್ಯೆಗೆ ನಾವೇ ಹೊಣೆಗಾರರು ಎಂದು ತಿಳಿವಳಿಕೆ ನೀಡಲು ಮನದಟ್ಟಾಗುವ ಒಂದು ಮಾತು ಹೇಳುತ್ತಿದ್ದರು -''ಸಾ ! ನನ್ನ ಚಡ್ಡಿಯಲ್ಲಿ ಯಾರೋ ಎರಡ ಮಾಡಿಬಿಟ್ಟಿದ್ದಾರೆ !'' ಎಂಬ ಮುಗ್ಧನ ಮಾತು. ನಮ್ಮ ನಾಡಿನ ಕಾನೂನು ವ್ಯವಸ್ಥೆ ಅಪಾಯಕಾರಿ ಮಟ್ಟಕ್ಕೆ ಸಡಿಲಗೊಂಡಿರುವುದಕ್ಕೆ ಪಾಕಿಸ್ತಾನವೋ, ಅಮೆರಿಕವೋ, ಚೀನವೋ ನೇರವಾಗಿ ಕಾರಣವಲ್ಲ, ಅವರೆಲ್ಲ ನಮ್ಮ ಶೋಚನೀಯ ಪರಿಸ್ಥಿತಿಯ ಲಾಭ ಪಡೆಯುವವರಷ್ಟೆ.

ಜನತಾ ಸರ್ಕಾರದಲ್ಲಿ ಗೃಹಮಂತ್ರಿಯಾಗಿದ್ದ ಕಾಶ್ಮೀರದ ಮಫ್ತಿ ಮಹಮ್ಮದರ ಮಗಳನ್ನು ಅಪಹರಿಸಿದಾಗ, ಅಪಹರಿಸಿದವರು ಆಜ್ಞೆ ಮಾಡಿದಂತೆ ಕೆಲವು ಸೆರೆಯಾಳುಗಳನ್ನು ಬಿಡುಗಡೆ ಮಾಡಲಾಯ್ತು.(ಈಕೆ ಈಗ ಕಾಶ್ಮೀರದ ಲೋಕಸಭಾ ಸದಸ್ಯರು). ಆಕೆ ಬದುಕಿದಳು. ಆದರೆ ಅಂದು ಬಿಡುಗಡೆ ಮಾಡಿದ ಬಂದಿಗಳಿಂದ ಸಹಸ್ರಾರು ಸಾವುಗಳು ನಡೆದಿವೆ. ಸತ್ತವರೆಲ್ಲಾ ಸಾಧಾರಣ ಜನ. ಕಾನೂನನ್ನು ಕಾಯುವ ಗೃಹಮಂತ್ರಿಯೇ ಹೀಗೆ ಮಾಡಿದರೆ! ಅವರನ್ನು ಅಂದು ತರಾಟೆಗೆ ತೆಗೆದು ಕೊಂಡವರೇ ಇಂದು ಅಧಿಕಾರದಲ್ಲಿರುವವರು !

ಬಿಡುಗಡೆಯಾದ ಭಯೋತ್ಪಾದಕರು ತಮ್ಮ ಚಟುವಟಿಕೆಗಳನ್ನು ಇನ್ನೂ ಹತ್ತು ಪಟ್ಟು ಹೆಚ್ಚಿಸುತ್ತಾರೆ. ನಮ್ಮ ಸಮಸ್ಯೆ ಇನ್ನೂ ತೀವ್ರವಾಗುತ್ತದೆ ಬರಲಿರುವ ದಿನಗಳಲ್ಲಿ. ಪರಿಹಾರದ ಮಾರ್ಗದಲ್ಲಿ ಸಹಸ್ರಾರು ಸಾವು-ನೋವುಗಳಿಗೆ ಸಿದ್ಧವಿರಬೇಕಾಗುತ್ತದೆ. ರಾಷ್ಟ್ರದ ಸರಹದ್ದುಗಳಲ್ಲಿ ನಿಂತಿರುವ ಆ ಯೋಧರು, ಸಾಯಲು ಸಿದ್ಧರಿರುವ ಧೀರರು, ನಮ್ಮ ಹಳ್ಳಿಗಳ ಸಾಧಾರಣ ಜನರೆಂಬುದನ್ನು ಇಲ್ಲಿ ನೆನಪು ಮಾಡಿಕೊಳ್ಳಬೇಕು. ಆದರೆ ಈ ಸಾಧಾರಣ ಜನ ಪ್ರಭುತ್ವ ನಡೆಸುವ ಅವಕಾಶ ಪಡೆಯದಿರುವುದೇ ನಮ್ಮ ವ್ಯವಸ್ಥೆಯ ದುರಂತ. ಇದರ ಬಗ್ಗೆ ಯೋಚಿಸಬೇಕಾದುದೂ ಸಾಧಾರಣ ಜನತೆಯೇ.

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಕ್ರಿಯವಾಗಿ ಭಾಗವಹಿಸಿದ ಪ್ರತಿಯೊಬ್ಬರೂ ತಮ್ಮ ನಿಲುವಿನಿಂದಾಗಿ, ಕಾರ್ಯಭಾರದಿಂದಾಗಿ, ತಮ್ಮ ತಮ್ಮ ಕುಟುಂಬದವರಿಗೆ ಪ್ರಾಸಂಗಿಕವಾಗಿ ತಂದುಕೊಟ್ಟ ನೋವು, ಸಂಕಟ, ಹಿಂಸೆ ಅಪಾರವಾಗಿತ್ತು. ಎಷ್ಟೋ ಕುಟುಂಬಗಳು ನಿರ್ನಾಮ ವಾದುದುಂಟು. ಅವರ ವಯಸ್ಸಿಗೆ ಬಂದ ಮಕ್ಕಳು, ಬೀದಿಗಿಳಿದವರು, ಹಿಂದಿರುಗಿ ಮನೆಗೆ ಬರದೇ ಇದ್ದುದುಂಟು. ಅಂತಹ ಹಿರಿಯರ ಸಂತತಿ ಈಗ ಆಳುವ ವರ್ಗವಾಗಿದೆ, ಅಧಿಕಾರಿಗಳನ್ನು ತನ್ನ ಬಗಲಿಗೆ ಸೇರಿಸಿಕೊಂಡಿದೆ. ನಮ್ಮ ಹಿಂದಿನ ಹಿರಿಯರ ತ್ಯಾಗ ಬಲಿದಾನದಿಂದ ದಕ್ಕಿದ ಸ್ವಾತಂತ್ರ್ಯವನ್ನು ಆಳುವ ವರ್ಗದವರ ಹೇಡಿತನದಿಂದ ರಕ್ಷಿಸುವುದು ಮತ್ತೊಮ್ಮೆ ಸಾಧಾರಣ ಜನತೆಯ ಜವಾಬ್ದಾರಿಯೇ ಆಗುತ್ತಿದೆ.

ಪಾರ್ಥ
೭೧೩, ವಿಜಯ ಮ್ಯಾನ್‌ಷನ್, ವಿಜಯನಗರ, ಬೆಂಗಳೂರು - ೪೦

### ನಾವು, ನಮ್ಮ ಹಳೆಯ ಪದ್ಧತಿಗಳು

ಈಗ ನಮ್ಮ ದೇಶದಲ್ಲಿ ಸಾಕ್ರೆಟೀಸನ ಕಾಲದ ಗ್ರೀಸಿನಲ್ಲಿ ಹೇಗೋ ಹಾಗೆಯೇ ಹಳೆಯ ಪದ್ಧತಿಗಳೂ ಸಂಸ್ಥೆಗಳೂ ಹೀನಸ್ಥಿತಿಗೆ ಬಂದಿವೆ; ಹೊಸವು ಪೂರ್ಣರೂಪವನ್ನು ತಳೆದಿಲ್ಲ... ಒಂದು ನಿಶ್ಚಲವಾದ ನಂಬಿಕೆಯೂ ಗುರಿಯೂ ಇಲ್ಲದೆ ನಾವು ಬಿರುಗಾಳಿಗೆ ಸಿಕ್ಕಿದ ಹಡಗಿನಂತೆ ತೂರಿಕೊಂಡು ಹೋಗಿ ನಾಶಹೊಂದುವ ಸಂಭವವುಂಟು... ನಮಗೆ ಸಾಕ್ರೆಟೀಸನು ಎರಡು ಸಾವಿರದ ನಾನೂರು ವರ್ಷಗಳ ಮೋಡದ ಹಿಂದಿದ್ದರೂ ಕಾಂತಿಯುಡಗದೆ ಪ್ರಕಾಶಿಸುತ್ತಿರುವ ಧ್ರುವತಾರೆ. ಅದರ ಬೆಳಕಿನಿಂದ ನಾವು ದಿಗ್ಭ್ರಮೆಯನ್ನು ಕಳೆದುಕೊಂಡು ನಮ್ಮ ನಾವೆಯನ್ನು ಬಂದರಿನ ಕಡೆಗೆ ತಿರುಗಿಸಬಹುದು.

**ಎ. ಎನ್. ಮೂರ್ತಿರಾವ್**
'ಸಾಕ್ರೆಟೀಸ್‌ನ ಕೊನೆಯ ದಿನಗಳು' ಕೃತಿಯಿಂದ

# ಜಾಗತೀಕರಣ - ಒಂದು ಟಿಪ್ಪಣಿ

ಡಾ॥ ಕೆ. ಎಸ್. ಕೃಷ್ಣಸ್ವಾಮಿ

ಈಚೆಯ ಚುನಾವಣೆಯ ನಂತರ ಅಧಿಕಾರ ವಹಿಸಿಕೊಂಡಿರುವ ವಾಜಪೇಯಿ ಸರ್ಕಾರ ಬರುವ ವರ್ಷಗಳಲ್ಲಿ ತಾನು ಅನುಸರಿಸುವ ಆರ್ಥಿಕ ನೀತಿಯನ್ನು ಹಲವಾರು ವೇದಿಕೆಗಳಿಂದ ಘೋಷಿಸಿದೆ. ಎಲ್ಲಾ ಸಂದರ್ಭಗಳಲ್ಲೂ ಒತ್ತಿ ಹೇಳಿರುವ ಮುಖ್ಯಾಂಶ, ೧೯೯೧ರಲ್ಲಿ ಪಿ. ವಿ. ನರಸಿಂಹರಾಯರ ಸರ್ಕಾರ ಜಾರಿಗೆ ತಂದು, ತದನಂತರದ ಜನತಾದಳದ ಸರ್ಕಾರಗಳು ನಡೆಸಿಕೊಂಡು ಬಂದಿರುವ ಉದಾರೀಕರಣ, ಜಾಗತೀಕರಣ ಮತ್ತು ಖಾಸಗೀಕರಣಗಳನ್ನು ತ್ವರಿತವಾಗಿ ಮುಂದುವರೆಸುವುದು. ಅರ್ಥಮಂತ್ರಿ ಶ್ರೀ ಯಶವಂತ ಸಿನ್ಹಾರವರು ಈ ಕಾರ್ಯಕ್ರಮವನ್ನು ಎರಡನೇ ಹಂತದ ಸುಧಾರಣೆಗಳೆಂದೂ, ಇದರ ಅಂಗವಾಗಿ ಬರುವ ಲೋಕಸಭೆಯ ಅಧಿವೇಶನದಲ್ಲಿ ಹಲವಾರು ಶಾಸನಗಳನ್ನು ಮಂಡಿಸುವುದಾಗಿಯೂ ಹೇಳಿದ್ದಾರೆ.

ಶ್ರೀ ಸಿನ್ಹಾರವರು ಎರಡು ವಿಧವಾದ ಬದಲಾವಣೆಗಳಿಗೆ ಒತ್ತುಕೊಟ್ಟಿದ್ದಾರೆ. ಮೊದಲನೆಯದಾಗಿ, ಈಗ ಸರ್ಕಾರೀ ಕ್ಷೇತ್ರದಲ್ಲಿರುವ ಉದ್ಯಮಗಳಲ್ಲಿ ಖಾಸಗೀ ಸಂಸ್ಥೆಗಳ ಪಾತ್ರವನ್ನು ಹೆಚ್ಚು ಮಾಡುವುದು. ಎರಡನೆಯದಾಗಿ – ಅಲ್ಲದೆ ಖಾಸಗೀಕರಣಕ್ಕೆ ಸಹಾಯವಾಗಿ – ನಮ್ಮ ದೇಶದಲ್ಲಿ ಬಂಡವಾಳ ಹೂಡಲು ವಿದೇಶೀ ಸಂಸ್ಥೆಗಳಿಗೆ ಆಕರ್ಷಕ ಅನುಕೂಲಗಳನ್ನು ಒದಗಿಸುವುದು. ಈ ಎರಡು ಉದ್ದೇಶಗಳಿಗೆ ನೆರವಾಗುವಂತೆ ತೆರಿಗೆ ಬಡ್ಡಿ, ವಿದೇಶೀ ವಿನಿಮಯ, ಆಮದು ಮತ್ತು ರಫ್ತು ಇತ್ಯಾದಿಗಳಿಗೆ ಸಂಬಂಧಿಸಿದ ನೀತಿಗಳ ಮಾರ್ಪಾಟುಗಳನ್ನು ಮುಂದುವರಿಸುವ ಆಶ್ವಾಸನೆಗಳನ್ನು ಪ್ರಧಾನಿಗಳು ಮತ್ತು ಇತರ ಕೇಂದ್ರ ಮಂತ್ರಿಗಳೂ ಕೊಟ್ಟಿದ್ದಾರೆ.

ಜಾಗತೀಕರಣದ ಅಲೆ ಪ್ರಪಂಚದ ಎಲ್ಲಾ ಭಾಗಗಳಲ್ಲೂ ಜೋರಾಗಿರುವಾಗ ನಮ್ಮ ಸರ್ಕಾರವಾಗಲಿ, ಜನತೆಯಾಗಲಿ ಅದನ್ನು ತಡೆಗಟ್ಟುವುದು ಕಷ್ಟ. ಹಾಗೆಯೇ ಸರ್ಕಾರೀ ಕ್ಷೇತ್ರದಲ್ಲಿ ಅವಿರತವಾಗಿ ಬೆಳೆದಿರುವ ದುಂದುಗಾರಿಕೆ, ಲಂಚಕೋರತನ, ಮತ್ತು ಅದಕ್ಷತೆಗಳಿಂದ ರೋಸಿರುವ ಜನರಲ್ಲಿ ಖಾಸಗೀಕರಣಕ್ಕೆ ಅಂತಹ ವಿರೋಧವೇನೂ ವ್ಯಕ್ತವಾಗಿರಲಿಲ್ಲ. ಈ ಸನ್ನಿವೇಶದಲ್ಲಿ ಕಮ್ಯುನಿಸ್ಟ್ ಪಕ್ಷಗಳನ್ನು ಬಿಟ್ಟು ಉಳಿದ ಎಲ್ಲಾ ರಾಜಕೀಯ ಪಕ್ಷಗಳೂ ವಾಜಪೇಯಿ ಸರ್ಕಾರದ ಆರ್ಥಿಕ ಸುಧಾರಣೆಗಳಿಗೆ ಬೆಂಬಲ ಕೊಡುವುದು ಖಚಿತ. ತಮ್ಮ ಸ್ವಾಯತ್ತತೆಯನ್ನು ಉಳಿಸಿಕೊಳ್ಳಲು ಕೆಲವು ಪಕ್ಷಗಳು ಈ ಸುಧಾರಣೆಗಳಲ್ಲಿ ಸಣ್ಣಪುಟ್ಟ ಬದಲಾವಣೆಗಳನ್ನು ಸೂಚಿಸಬಹುದು. ಆದರೆ ಒಟ್ಟಾರೆ ಲೋಕಸಭೆಯಲ್ಲಿ ಜಾಗತೀಕರಣ ಮತ್ತು ಖಾಸಗೀಕರಣಗಳನ್ನು ಮುಂದುವರೆಸುವ ಶಾಸನಗಳಿಗೆ ಅನುಮೋದನೆ ದೊರಕುವುದರಲ್ಲಿ ಸಂಶಯವಿಲ್ಲ.

ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣಗಳ ಕರಡುಗಳು ತಯಾರಾದುದು ಅಭಿವೃದ್ಧಿ ಹೊಂದಿದ ಪಾಶ್ಚಿಮಾತ್ಯ ದೇಶಗಳಲ್ಲಿ; ಅದರಲ್ಲೂ ಅಮೆರಿಕಾ ಮತ್ತು ಬ್ರಿಟನ್‌ಗಳಲ್ಲಿ. ಇವೆಲ್ಲದರ ಮೂಲತತ್ತ್ವಗಳೆಂದರೆ ೧) ಉದಾರೀಕರಿಸಿದ ಮಾರುಕಟ್ಟೆಯಿಂದ ದೇಶದ ಸಂಪನ್ಮೂಲಗಳನ್ನು ಅತ್ಯಂತ ಲಾಭದಾಯಕವಾಗಿ ಉಪಯೋಗಿಸಲು ಸಾಧ್ಯವಾಗುತ್ತದೆ; ೨) ಖಾಸಗೀರಂಗದಲ್ಲಿರುವ ಸಂಸ್ಥೆಗಳಾಗಲಿ, ವ್ಯಕ್ತಿಗಳಾಗಲಿ ಮಾರುಕಟ್ಟೆಯನ್ನು ಸರ್ಕಾರೀ ಕ್ಷೇತ್ರದಲ್ಲಿರುವ ಸಂಸ್ಥೆಗಳಿಗಿಂತ ಉತ್ತಮವಾಗಿ ಉಪಯೋಗಿಸುತ್ತಾರೆ. ೩) ಮಾರುಕಟ್ಟೆಯ ವಿಸ್ತಾರವನ್ನು ಜಾಗತೀಕರಣದಿಂದ ಹೆಚ್ಚಿಸಿದರೆ ಪ್ರಪಂಚದ ಸಂಪನ್ಮೂಲಗಳಿಗೂ, ಬಂಡವಾಳಕ್ಕೂ ಮತ್ತು ತಂತ್ರಜ್ಞಾನಕ್ಕೂ ಎಲ್ಲಾ ದೇಶಗಳ ಸಂಪರ್ಕ ಉಂಟಾಗುವುದರಿಂದ ಅವುಗಳ ಉಪಯುಕ್ತತೆಯನ್ನು ಹೆಚ್ಚಿಸಲು ಸಾಧ್ಯವಾಗುತ್ತದೆ. ೪) ಈ ಎಲ್ಲಾ ಕಾರಣಗಳಿಂದ ಪ್ರಪಂಚದ ಸಮಗ್ರ ಉತ್ಪಾದನೆ ಮತ್ತು ವ್ಯಾಪಾರ ಹೆಚ್ಚುವಂತೆ ಮಾಡಬಹುದು; ೫) ಇವುಗಳಿಂದ ಎಲ್ಲಾ ದೇಶಗಳ ಬಡತನ ನಿರ್ಮೂಲನೆ ಮತ್ತು ನಿರುದ್ಯೋಗ ನಿವಾರಣೆಗಳಿಗೆ ಹೆಚ್ಚು ಅನುಕೂಲವಾಗಿ ಜನಜೀವನ ಮಟ್ಟವನ್ನು ಹೆಚ್ಚಿಸಲು ಸಾಧ್ಯವಾಗುತ್ತದೆ.

> *ಜಾಗತೀಕರಣವು ಆರ್ಥಿಕ ಕ್ಷೇತ್ರದ ಸರ್ವರೋಗ ನಿವಾರಕ ಮಂತ್ರ ಎಂಬಂತೆ ಪದೇಪದೇ ಉಚ್ಚಾರಣೆಗೆ ಬರುತ್ತಿದೆ. ಅದರ ಘೋಷಿತ ನಿರೀಕ್ಷೆಗಳು ವಾಸ್ತವಿಕ ವಿದ್ಯಮಾನಗಳನ್ನು ಮುಚ್ಚಿಹಾಕಲಾರವು. ಭಾರತದ ರಿಸರ್ವ್ ಬ್ಯಾಂಕ್‌ನ ಡೆಪ್ಯೂಟಿ ಗವರ್ನರ್ ಆಗಿದ್ದ ಶ್ರೀ ಕೆ. ಎಸ್. ಕೃಷ್ಣಸ್ವಾಮಿಯವರು ಅದನ್ನಿಲ್ಲಿ ವಿವೇಚಿಸಿದ್ದಾರೆ. ನಮ್ಮ ಮೂಲ ಆಶಯಗಳು ಏನಾಗಿರಬೇಕೆಂಬ ನೆಲೆಯಲ್ಲಿ ನಿಂತು ನಡೆಸುವ ಈ ಚರ್ಚೆ ಅತ್ಯಂತ ಪ್ರಮುಖವಾದ್ದು.*

೧೯೯೧ರಲ್ಲಿ ನರಸಿಂಹರಾಯರ ಸರ್ಕಾರ ಜಾರಿಗೆ ತಂದ ಸುಧಾರಣೆಗಳು ಈ ಆಧಾರಗಳ ಮೇಲೆ ಸ್ಥಾಪಿತವಾದವು. ವಿದೇಶೀ ವಿನಿಮಯದ ತೀವ್ರ ಅಭಾವ ಮತ್ತು ಭಾರತ ಸರ್ಕಾರದ ಬಜೆಟ್ ಕೊರತೆಗಳ ಹಿನ್ನೆಲೆಯಲ್ಲಿ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ ಮತ್ತು ವಿಶ್ವಬ್ಯಾಂಕ್‌ಗಳ ಸಲಹೆ-ಒತ್ತಡಗಳ ಮೇಲೆ ಆಗಿನ ಹಣಕಾಸು ಮಂತ್ರಿಗಳಾಗಿದ್ದ ಡಾ॥ ಮನಮೋಹನ ಸಿಂಗ್‌ರವರು ಸುಧಾರಣೆಗಳನ್ನು ಸಕ್ರಿಯವಾಗಿ ಆಚರಣೆಗೆ ತಂದರು. ಅದರಿಂದೀಚೆಗೆ ಆಗಿರುವ ಬದಲಾವಣೆಗಳನ್ನು ಗಣನೆಗೆ ತೆಗೆದುಕೊಂಡು ಅವುಗಳ ವ್ಯಾಪ್ತಿಯನ್ನು ವಿಷದೀಕರಿಸಲು ಶ್ರೀ ಸಿನ್ಹಾರವರು ಪ್ರಯತ್ನಿಸುತ್ತಿದ್ದಾರೆ.

ಈವರೆಗೆ ಆಗಿರುವ ಸುಧಾರಣೆಗಳಿಂದ ಕೈಗಾರಿಕೆ ಮತ್ತು ವಾಣಿಜ್ಯ ಉದ್ಯಮಗಳಿಗೆ ಹೆಚ್ಚು ಲಾಭವಾಗಿರುವುದರಿಂದ ಅವುಗಳ ಒಕ್ಕೂಟಗಳ ಬೆಂಬಲ ಎರಡನೆ ಹಂತದ ಸುಧಾರಣೆಗಳಿಗೆ ಸಾಕಷ್ಟು ಇದೆ. ಶ್ರೀ ಸಿನ್ಹಾರವರ ಲಕ್ಷ್ಯ ಈಗ ಹಣಕಾಸು ಕ್ಷೇತ್ರದ ಮಾರ್ಪಾಟಿನ ಮೇಲೆ ಕೇಂದ್ರೀಕೃತವಾಗಿದೆ.

ಜಾಗತೀಕರಣದಿಂದ ವಿಶ್ವದ ಸಂಪನ್ಮೂಲಗಳನ್ನು ಉತ್ಪಾದನೆಯ ಹೆಚ್ಚಳಕ್ಕೆ ಅಳವಡಿಸಿಕೊಳ್ಳಬಹುದೆಂಬುದರಲ್ಲಿ ಅನುಮಾನವಿಲ್ಲ. ಆದರೆ ಈ ಕ್ರಮದಿಂದ ಕೆಲವು ದುಷ್ಪರಿಣಾಮಗಳೂ ಉಂಟಾಗಬಹುದೆನ್ನುವುದೂ ಸರ್ವವೇದ್ಯ. ಈ ಲಾಭ-ನಷ್ಟಗಳ ಹಂಚಿಕೆ ಸಮನಾಗಿರುವುದಿಲ್ಲ; ಕೆಲವು ರಾಷ್ಟ್ರಗಳಿಗೆ ಲಾಭ ಹೆಚ್ಚಾದರೆ ಕೆಲವರ ಪಾಲಲ್ಲಿ ನಷ್ಟವೇ ಜಾಸ್ತಿಯಿರಬಹುದು. ಜಾಗತೀಕರಣದಿಂದ ದೊರಕುವ ಉತ್ಪಾದನೆಯ ಹೆಚ್ಚಳ ಅಂತರರಾಷ್ಟ್ರೀಯ ಅಸಮಾನತೆಗಳನ್ನು ಕಡಿಮೆ ಮಾಡುವುದರ ಬದಲು ಮತ್ತಷ್ಟು ಹೆಚ್ಚಿಸಿದೆ. ೧೯೬೦ರಲ್ಲಿ ಪ್ರಪಂಚದ ಜನತೆಯಲ್ಲಿ ಸಂಪದ್ಭರಿತ ರಾಷ್ಟ್ರಗಳಲ್ಲಿದ್ದ ಹೆಚ್ಚು ವರಮಾನ ಹೊಂದಿರುವ ೧/೫ ಭಾಗಕ್ಕೂ ಬಡರಾಷ್ಟ್ರಗಳಲ್ಲಿ ಕಡಿಮೆ ವರಮಾನವಿರುವ ೧/೫ ಭಾಗಕ್ಕೂ ಇದ್ದ ವ್ಯತ್ಯಾಸ ೩೦:೧; ಇದು ೧೯೯೦ರಲ್ಲಿ ೬೦:೧ಕ್ಕೂ ೧೯೯೭ರಲ್ಲಿ ೭೪:೧ಕ್ಕೂ ಏರಿತ್ತು. ಹಾಗೆಯೇ ಪ್ರಪಂಚದ ಸಮಗ್ರ ಉತ್ಪಾದನೆಯ ಶೇಕಡ ೮೬ರಷ್ಟು ಮೇಲ್ವರ್ಗದ ೧/೫ ಭಾಗಕ್ಕೆ ಸೇರಿದರೆ ಉಳಿದ ೪/೫ ಭಾಗಕ್ಕೆ ದೊರಕಿದ್ದು ಉತ್ಪನ್ನದ ಕೇವಲ ಶೇಕಡ ೧೪.[೧] ಮಾರುಕಟ್ಟೆ ನೀತಿಯಲ್ಲಿ ಈ ತರಹ ಅಸಮಾನತೆಗಳನ್ನು ನಿವಾರಿಸಲು ಯಾವ ರೀತಿಯ ಸಲಕರಣೆಯೂ ಇಲ್ಲ.

ಹೀಗಾಗಿ ಬರೀ ಉತ್ಪಾದನೆಯ ಗುರಿಯನ್ನು ಇಟ್ಟುಕೊಂಡಿರುವ ಜಾಗತೀಕರಣದಲ್ಲಿ ಬಡತನ ನಿವಾರಣೆ, ಪರಿಸರ ಸಂರಕ್ಷಣೆ, ಸಾಂಸ್ಕೃತಿಕ ಬೆಳವಣಿಗೆ, ಸಾರ್ವಜನಿಕ ವಿದ್ಯಾಭ್ಯಾಸ ಮತ್ತು ಆರೋಗ್ಯ ಮುಂತಾದವುಗಳಿಗೆ ಸಾಕಷ್ಟು ಗಮನವಾಗಲಿ, ಸಂಪನ್ಮೂಲಗಳಾಗಲಿ ದೊರಕುವುದಿಲ್ಲ.

ಮಾರುಕಟ್ಟೆಯ ದಿನಂಪ್ರತಿ ಬದಲಾವಣೆಗಳಿಗೆ ಹೊಂದಿಕೊಂಡು ಹೋಗುವ ಖಾಸಗೀ ವರ್ಗದವರಿಗೆ ಇತರರ ಯೋಗಕ್ಷೇಮದ ಪರಿವೆ ಇರುವುದಿಲ್ಲ. ತಮ್ಮ ತೀರ್ಮಾನಗಳಿಂದ ತಮಗೇನು ಲಾಭವಿದೆಯೆಂದು ನೋಡುತ್ತಾರೆಯೇ ವಿನಹ ಉಳಿದವರಿಗಾಗಲಿ, ಪರಿಸರಕ್ಕಾಗಲೀ ಆಗಬಹುದಾದ ಹಾನಿಯೇನಿರ ಬಹುದೆಂದು ಯೋಚಿಸುವುದೂ ಅಪರೂಪ. ಯೋಚಿಸಿದರೂ ಅದಕ್ಕೆ ಪರಿಹಾರ ಕಂಡುಹಿಡಿಯುವುದು ಸರ್ಕಾರ ಅಥವಾ ಸಮಾಜದ ಜವಾಬ್ದಾರಿಯೆಂದು ಭಾವಿಸುವುದು ಸಾಮಾನ್ಯ. ಜಾಗತೀಕರಣದಲ್ಲಿ ಭಾಗವಹಿಸುತ್ತಿರುವ ಎಲ್ಲಾ ದೇಶಗಳಲ್ಲೂ ಈ ತರಹ ಪ್ರಶ್ನೆಗಳು ಎದ್ದಿವೆ. ಅವುಗಳಿಗೆ ವಿಶ್ವವ್ಯಾಪ್ತಿ ಇರುವ ಕ್ಷಿಪ್ರಕಾಲದಲ್ಲಿ ಬಳಕೆಗೆ ತರಬಹುದಾದಂತಹ ಸಮಾಧಾನಗಳು ದೊರಕುವುದಿಲ್ಲ. ಪ್ರತಿಯೊಂದು ರಾಷ್ಟ್ರವೂ, ಸಮಾಜವೂ ತನ್ನ ಪರಿಸ್ಥಿತಿಗೆ ಸೂಕ್ತವಾದ ಉತ್ತರಗಳೇನೆಂದು ಕಂಡುಕೊಂಡು ಅವುಗಳಿಗೆ ಅನುಸಾರವಾಗಿ ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ನ್ಯಾಯಮಾರ್ಗಗಳನ್ನು ರೂಪಿಸಿಕೊಳ್ಳಬೇಕು. ಭಾರತ ಇದಕ್ಕೆ ಹೊರತಲ್ಲ.

-೨-

ಶ್ರೀ ಪಿ. ವಿ. ನರಸಿಂಹರಾಯರ ಸರ್ಕಾರ ಜಾರಿಗೆ ತಂದ ಸುಧಾರಣೆಗಳ ಫಲವಾಗಿ ನಮ್ಮ ದೇಶದ ಆರ್ಥಿಕ ವ್ಯವಸ್ಥೆಯಲ್ಲಿ ಸರ್ಕಾರೀ ಮತ್ತು ಖಾಸಗೀ ಕ್ಷೇತ್ರಗಳು ವಹಿಸಿದ್ದ ಪಾತ್ರಗಳಲ್ಲಿ ಸಾಕಷ್ಟು ಬದಲಾವಣೆಗಳಾದುವು. ಆವರೆಗೆ ಸರ್ಕಾರೀ ಸಂಸ್ಥೆಗಳಿಗಿದ್ದ ಪ್ರಾಮುಖ್ಯತೆ ೧೯೯೧ರಿಂದೀಚೆಗೆ ಖಾಸಗೀ ಸಂಸ್ಥೆಗಳಿಗೆ ದೊರಕಿದೆ. ಅದರಲ್ಲೂ ಕೈಗಾರಿಕೆ ಮತ್ತು ವಾಣಿಜ್ಯ ಕ್ಷೇತ್ರಗಳಲ್ಲಿ ಉದ್ಯಮಗಳಿಗಿದ್ದ ನಿರ್ಬಂಧಗಳನ್ನು ತೊಡೆದುಹಾಕಿ, ತೆರಿಗೆ ಮತ್ತು ಬಡ್ಡಿದರಗಳಲ್ಲಿ ರಿಯಾಯಿತಿ ಕೊಟ್ಟು ಹೂಡಿಕೆದಾರರನ್ನು ಉತ್ತೇಜಿಸಿ, ಸಾಲ ಮತ್ತು ವಿದೇಶೀ ವಿನಿಮಯಗಳು ಸುಲಭವಾಗಿ ದೊರಕುವಂತೆ ಮಾಡಿ, ತಂತ್ರಜ್ಞಾನ ಮತ್ತು ವಿದೇಶೀ ಬಂಡವಾಳಗಳ ಆಮದನ್ನು ಸಂಪಾದಿಸಲು ಅನುಕೂಲಗಳನ್ನು ಕಲ್ಪಿಸಿ, ಇನ್ನೂ ಅನೇಕ ತರಹ ಸಹಾಯ ಮಾಡಿ ಅವುಗಳ ಪ್ರಗತಿಯನ್ನು ಸರ್ಕಾರ ಬೆಂಬಲಿಸಿದೆ. ಇದರ ಪರಿಣಾಮವಾಗಿ ಕಳೆದ ಎಂಟು-ಹತ್ತು ವರ್ಷಗಳಲ್ಲಿ ಕೈಗಾರಿಕಾ ಕ್ಷೇತ್ರದ ಉತ್ಪಾದನೆಯಲ್ಲದೆ ಅದರಲ್ಲಿಯ ವೈವಿಧ್ಯತೆಯು ಹೆಚ್ಚಾಗಿ ದೇಶದ ಆರ್ಥಿಕ ಮಟ್ಟದಲ್ಲಿ ನಾನಾ ರೀತಿಯ ವ್ಯತ್ಯಾಸಗಳಾಗಿವೆ. ಮುಖ್ಯವಾಗಿ ದೇಶದ ಸಮಗ್ರ ಉತ್ಪಾದನೆ ಮತ್ತು ಒಟ್ಟಾರೆ ರಫ್ತು ಮೊದಲಿಗಿಂತ ವೇಗವಾಗಿ ಬೆಳೆಯಲು ಸಾಧ್ಯವಾಗಿದೆ. ಅದರೊಡನೆ ಕೆಲವು ರೀತಿಯ ಉದ್ಯೋಗಗಳು ಸಮಾಜದ ಕೆಲವು ಶ್ರೇಣಿಗಳ ವರಮಾನ, ಮಧ್ಯಮ ವರ್ಗ ಮತ್ತು ಹಣವಂತರ ಜೀವನಶೈಲಿ, ಪಟ್ಟಣಗಳಲ್ಲಿ ಸಾರ್ವಜನಿಕರ ಸೌಲಭ್ಯಗಳ ಮೇಲೆ ಒತ್ತಡ- ಎಲ್ಲವೂ ಹೆಚ್ಚಿವೆ. ಈ ಸ್ಥಿತಿಯಲ್ಲಿ ಶ್ರೀ ಸಿನ್ಹಾರವರು ಕೈಗೊಂಡಿರುವ ಎರಡನೆಯ ಹಂತ ನಮ್ಮ ಅರ್ಥಸ್ಥಿತಿ ಮತ್ತು ಸಮಾಜಗಳನ್ನು ಯಾವ ದಿಸೆಯಲ್ಲಿ ತಳ್ಳುತ್ತಿದೆ ? ಈ ಸುಧಾರಣೆಗಳು ದೇಶದ ಮುಖ್ಯ ಪ್ರಶ್ನೆಗಳಾದ ಬಡತನ, ಅನಕ್ಷರತೆ, ಅನಾರೋಗ್ಯ, ಹಿಂದುಳಿಕೆಗಳನ್ನು ಸಮಂಜಸವಾಗಿ ನಿವಾರಿಸುತ್ತವೆಯೇ ? ಸಮಾಜದಲ್ಲಿ ಬಲವಾಗಿ ಸ್ಥಾಪಿತವಾಗಿರುವ ಅನೇಕ ರೀತಿಯ ಅಸಮಾನತೆಗಳನ್ನು ನಿರ್ಮೂಲನ ಮಾಡಲು ಸಹಾಯ ಮಾಡುತ್ತವೆಯೇ ? ಪ್ರಕೃತಿ ಸಂಪನ್ಮೂಲಗಳನ್ನು ಕಾಪಾಡಿಕೊಂಡುಬರಲು ಸಾಧ್ಯವಾಗುವುದೇ ? ಈ ವಿಧವಾದ ಪ್ರಶ್ನೆಗಳು ದೇಶದ ಜನತೆಯಲ್ಲಲ್ಲದೆ ವಿಶ್ವಸಂಸ್ಥೆಯ ಅಂಗಗಳಿಂದಲೂ ಕೇಳಿಬರುತ್ತಿವೆ. ವಿಶ್ವಸಂಸ್ಥೆಯ ಅಭಿವೃದ್ಧಿ ಘಟಕದ (UNDP) ''ಮಾನವ ವಿಕಾಸ ವರದಿ'' (Human Development Report 1999) ಯು ಇವೆಲ್ಲವನ್ನು ಕೂಲಂಕಷವಾಗಿ ಚರ್ಚಿಸಿದೆ. ಜಾಗತೀಕರಣದಿಂದಲೇ ಬಡದೇಶಗಳ ಮೂಲ




ಪ್ರಶ್ನೆಗಳನ್ನು ನಿವಾರಿಸಲು ಸಾಧ್ಯವಾಗುವುದು ಅನುಮಾನ. ಆ ಕಾರಣ ಅದರ ಜೊತೆಗೆ ಬಡತನ, ಅನಕ್ಷರತೆ, ಅನಾರೋಗ್ಯ ಇತ್ಯಾದಿಗಳನ್ನು ನೇರವಾಗಿ ಎದುರಿಸುವ ಯೋಜನೆಗಳನ್ನು ಸರ್ಕಾರ ಮಾತ್ರವಲ್ಲದೆ ಸಮಾಜದ ಸಮಸ್ತ ಭಾಗಗಳೂ ಹಮ್ಮಿಕೊಳ್ಳಬೇಕು ಎಂದು ವರದಿ ಹೇಳಿದೆ. ವಿಶ್ವಬ್ಯಾಂಕಿನ ಅಧ್ಯಕ್ಷ ವುಲ್ಫೆನ್‌ಸನ್‌ರವರ ಅಭಿಪ್ರಾಯವೂ ಹೀಗೇ ಇದೆ.

ಈ ತರಹ ಜಿಜ್ಞಾಸೆಗಳಿಗೆ ಒತ್ತು ಕೊಡಲು ಈಚೆಗೆ ಶ್ರೀ ಪಿ. ವಿ. ನರಸಿಂಹರಾಯರೇ ಮುಂದೆ ಬಂದಿರುವುದು ಕುತೂಹಲಕರವಾಗಿದೆ.[೨] ಕಳೆದ ನವಂಬರ್ ಮೊದಲಲ್ಲಿ ಪ್ರಮುಖ ವಾಣಿಜ್ಯೋದ್ಯಮಗಳ ಒಕ್ಕೂಟ (Assocham) ವೊಂದರಲ್ಲಿ ಅವರು ಮಾಡಿದ ಭಾಷಣದ ಮುಖ್ಯ ಸಂದೇಶ, ಜಾಗತೀಕರಣದಿಂದ ಉಂಟಾಗುವ ಅಪಾಯಗಳನ್ನು ಎದುರಿಸುವ ಜವಾಬ್ದಾರಿಯನ್ನು ಸರ್ಕಾರದೊಡನೆ ಖಾಸಗೀ ಸಂಸ್ಥೆಗಳೂ ವಹಿಸಿಕೊಳ್ಳ ಬೇಕೆನ್ನುವುದು. ಬರಲಿರುವ ಶತಮಾನದಲ್ಲಿ ಮಾರುಕಟ್ಟೆಯ ಉದಾರೀಕರಣ ಇತ್ಯಾದಿಗಳನ್ನು ಸಾರ್ವಜನಿಕ ಪ್ರಯೋಜನಕ್ಕಾಗಿ ಉಪಯೋಗಿಸಿಕೊಳ್ಳುವಾಗ ನಮ್ಮ ಮುಂದೆ ಸದಾಕಾಲದಲ್ಲಿರಬೇಕಾದ ಗುರಿ, ಅಭಿವೃದ್ಧಿಯ ಫಲ ಅತ್ಯಂತ ಕೆಳಶ್ರೇಣಿಯಲ್ಲಿರುವ ಬಡವರಿಗೂ ಸಾಕಷ್ಟು ಪ್ರಮಾಣದಲ್ಲಿ ಸಿಕ್ಕುವಂತಾಗಬೇಕು. ಇದು ನಿಧಾನವಾಗಿ ಜಿನುಗಿ (trickle down) ಅವರಿಗೆ ತಲುಪುವಂತಾಗ ಬಾರದು. ಈ ಉದ್ದೇಶದಿಂದ ಪಂಚವಾರ್ಷಿಕ ಯೋಜನೆ ಗಳ ದಶಕಗಳಲ್ಲಿ ಸರ್ಕಾರ ಜನರ ಸಾಮರ್ಥ್ಯವನ್ನು ಹೆಚ್ಚಿಸುವುದಕ್ಕೂ ಆರ್ಥಿಕ ವ್ಯವಸ್ಥೆಯ ತಳಪಾಯಗಳನ್ನು ಭದ್ರಪಡಿಸುವುದಕ್ಕೂ ಹೆಚ್ಚು ಸಂಪನ್ಮೂಲಗಳನ್ನು ಅರ್ಪಿಸಿತು. ಇದರಿಂದ ಗಣನೀಯವಾಗಿ ಪ್ರಯೋಜನ ವಾಗಿದ್ದರೂ ಬಡಜನರಿಗೆ ನ್ಯಾಯವಾಗಿ ದೊರಕಬೇಕಾ ದಷ್ಟು ಫಲ ದೊರಕಲಿಲ್ಲ. ಈ ದಿಕ್ಕಿನಲ್ಲಿ ನಮ್ಮ ದೇಶ ಸಾಧಿಸಬೇಕಾದ ಕೆಲಸ ಭಾರಿಯಾಗಿದೆ. ಈಗ ಉದಾರೀಕರಣದ ನಂತರ, ಸರ್ಕಾರೀ ಕ್ಷೇತ್ರಕ್ಕೆ ಇರಬೇಕಾದ ಜವಾಬ್ದಾರಿ ಕಡಿಮೆಯಾಗೇನೂ ಇಲ್ಲ. ಆದರೆ ಈ ವಿಷಯಗಳಲ್ಲಿ ಖಾಸಗೀ ಉದ್ಯಮಗಳು ಈಗ ತಟಸ್ಥವಾಗಿರುವ ಹಾಗಿಲ್ಲ; ಅವರೂ ಮತ್ತು ಅವರ ಸಂಘ ಸಂಸ್ಥೆಗಳೂ ಸಕ್ರಿಯವಾಗಿ ಭಾಗವಹಿಸುವುದು ಅವರ ಸಾಮಾಜಿಕ ಕರ್ತವ್ಯವೆಂದು ನರಸಿಂಹರಾಯರು ಸೂಚಿಸಿದ್ದಾರೆ.

ಹೀಗೆ ಭಾಗವಹಿಸಬೇಕಾದರೆ ಉದ್ಯೋಗಗಳಿಂದ ತಮಗಾಗುವ ಲಾಭವನ್ನು ಮಾತ್ರ ಗುರಿಯಾಗಿಟ್ಟು ಕೊಳ್ಳುವುದು ಸರಿಯಲ್ಲವೆಂದು ರಾಯರು ಎಚ್ಚರಿಸಿದ್ದಾರೆ. ನೆಹರು ಅವರ ಕಾಲದಲ್ಲಿ ಸಮತಾವಾದವನ್ನು ನಮ್ಮ ದೇಶದ ಪರಿಸ್ಥಿತಿಗೆ ಹೇಗೆ ಅನುಗುಣವಾಗಿರುವಂತೆ ಅಳವಡಿಸಿ ಕೊಳ್ಳಲಾಗಿತ್ತೋ ಹಾಗೆಯೇ ಉದಾರೀಕರಣವನ್ನೂ ನಮ್ಮ ದೇಶಕ್ಕೆ ಸೂಕ್ತವಾಗುವಂತೆ ತಿದ್ದುಪಡಿ ಮಾಡಿಕೊಳ್ಳಬೇಕು. ಅಮೆರಿಕಾ ಮತ್ತು ಇತರ ದೇಶಗಳು ನಡೆದುಬಂದಿರುವ ದಾರಿಯಲ್ಲಿ ಕಣ್ಮುಚ್ಚಿ ನಡೆಯಬೇಕಾಗಿಲ್ಲ. ಅವರಂತೆ ವ್ಯಕ್ತಿ ಸುಖವನ್ನು ಮಾತ್ರ ಗ್ರಾಹಕತೆಯ ಅಳತೆಗೋಲನ್ನಾಗಿಟ್ಟು

ಕೊಳ್ಳಬೇಕಾಗಿಲ್ಲ. ಹಾಗೆಯೇ ಉತ್ಪನ್ನವನ್ನೇ ಕೈಗಾರಿಕೆ ಅಥವಾ ಇತರ ಉದ್ಯಮಗಳ ಏಕಾನೇಕ ಗುರಿಯಾಗಿಟ್ಟುಕೊಳ್ಳುವುದು ಸಮಾಜಕ್ಕೆ ಅಹಿತಕರವಾಗಬಹುದು. ನಮ್ಮಂತಹ ಬಡ ರಾಷ್ಟ್ರದಲ್ಲಿ ಉತ್ಪನ್ನದೊಡನೆ ಉದ್ಯೋಗಾವಕಾಶಗಳನ್ನು ಹೆಚ್ಚಿಸುವ ಗುರಿ ಇಟ್ಟುಕೊಳ್ಳಬೇಕು. ಏಕೆಂದರೆ ಜನಸಂಖ್ಯೆ ಮತ್ತು ಕಾರ್ಮಿಕರ ಸಂಖ್ಯೆಗಳು ಹೆಚ್ಚಾಗಿ, ಬಡತನ ಎದ್ದು ಕಾಣುತ್ತಿರುವ ಸಂದರ್ಭಗಳಲ್ಲಿ ಬಡತನದ ನಿರ್ಮೂಲನೆಗೆ ಅತ್ಯಂತ ಪರಿಣಾಮಕಾರಿಯಾಗುವುದು ಉದ್ಯೋಗಾವಕಾಶಗಳನ್ನು ಹೆಚ್ಚಿಸುವುದರಿಂದ. ಉತ್ಪನ್ನವನ್ನು ತ್ವರಿತವಾಗಿ ಏರಿಸುವ ತಂತ್ರಜ್ಞಾನಗಳನ್ನು ಆಯ್ಕೆ ಮಾಡುವಾಗ ಇದನ್ನು ಲಕ್ಷ್ಯದಲ್ಲಿಟ್ಟಿರಬೇಕು. ಇಲ್ಲದಿದ್ದರೆ ರಾಷ್ಟ್ರೀಯ ಉತ್ಪನ್ನ ಹೆಚ್ಚಿದರೂ ಬಡತನ ಕಡಿಮೆಯಾಗುವುದಿಲ್ಲ. ಅದರ ಬದಲು ಸಮಾಜದಲ್ಲಿನ ಆರ್ಥಿಕ ಅಸಮಾನತೆಗಳು ಉಲ್ಬಣಗೊಂಡು ಅಶಾಂತಿಗೆ ಕಾರಣವಾಗುವುದು ಖಚಿತ.

ಕೈಗಾರಿಕೋದ್ಯಮಿಗಳ ಸಭೆಯಲ್ಲಿ ಶ್ರೀ ನರಸಿಂಹರಾಯರು ಇದನ್ನೆಲ್ಲಾ ಒತ್ತಿ ಹೇಳಿದ್ದಾರೆ. ಅದರೊಡನೆ ಅಭಿವೃದ್ಧಿ ಕಾರ್ಯಗಳಲ್ಲಿ ತಂತ್ರಜ್ಞಾನಗಳನ್ನು ತೊಡಗಿಸಿಕೊಳ್ಳುವಾಗ ಅವುಗಳ ಪರಿಣಾಮ ಪರಿಸರದ ಮೇಲೆ ಹೇಗಿದೆ ಎನ್ನುವುದನ್ನು ಆಳವಾಗಿ ಯೋಚಿಸಬೇಕು. ಈ ಪರಿಣಾಮಗಳಲ್ಲಿ ಕೆಲವು ಮಾತ್ರ ಬೇಗ ಕಾಣಬಹುದು. ಇತರ ದುಷ್ಪರಿಣಾಮಗಳು ಹತ್ತಾರು ವರ್ಷಗಳ ಕಾಲಾನಂತರ ಗೋಚರವಾಗುತ್ತವೆ. ಭೌತಿಕ ಸಂಪನ್ಮೂಲಗಳನ್ನು ರೈತರಾಗಲಿ, ಕಾರ್ಖಾನೆಗಳ ಮಾಲಿಕರಾಗಲಿ, ಗ್ರಾಹಕರಾಗಲಿ ತಮ್ಮ ಸ್ವಂತಕ್ಕೆ ಬಳಸಿಕೊಳ್ಳುವಾಗ ತದನಂತರದ ಪರಿಣಾಮವೇನಿರಬಹುದೆಂದು ಯೋಚಿಸುವುದಿಲ್ಲ. ಆದರೆ ಆ ತರಹ ಬಳಕೆ ಅಸಂಖ್ಯಾತ ವ್ಯಕ್ತಿಗಳಿಂದಾದಾಗ ಪರಿಸರನಾಶ ಎದ್ದು ಕಾಣುತ್ತದೆ. ಇದರ ನಷ್ಟವನ್ನು ಚೆನ್ನಾಗಿ ಪರೀಕ್ಷಿಸಿ ಗಣನೆಗೆ ತಂದುಕೊಳ್ಳದಿದ್ದರೆ ಬರುವ ಪೀಳಿಗೆಗಳ ಸಂಪನ್ಮೂಲಗಳನ್ನು ದುರುಪಯೋಗಗೊಳಿಸಿಕೊಂಡಂತಾಗುತ್ತದೆ. ಈಗ ಅಭಿವೃದ್ಧಿ ಹೊಂದಿರುವ ದೇಶಗಳ ಜೀವನಶೈಲಿ ಇದನ್ನು ಕಡೆಗಣಿಸಿರುವುದು ವಿಶ್ವದಾದ್ಯಂತ ಅರ್ಥವಾಗಿದೆ. ಹಾಗಿದ್ದೂ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಅದೇ ತರಹದ ಜೀವನ ಶೈಲಿಯನ್ನು ಹಣವಂತರೂ ಮಧ್ಯಮ ವರ್ಗದವರೂ ಅನುಸರಿಸುತ್ತಿರುವುದು ಶೋಚನೀಯ. ಶ್ರೀ ನರಸಿಂಹರಾಯರು ಇದನ್ನು ಪ್ರಸ್ತಾಪಿಸುತ್ತಾ ಈಚೀಚೆಗೆ ನಾವು ಅವಶ್ಯ ವಸ್ತುಗಳಿಗೂ ಭೋಗವಸ್ತುಗಳಿಗೂ ಇರಬೇಕಾದ ವ್ಯತ್ಯಾಸವನ್ನು ಅಳಿಸುತ್ತಾ ಬಂದಿದ್ದೇವೆ, ಎಂದರು. ವ್ಯಾಪಾರ ಸಂಸ್ಥೆಗಳು ಮತ್ತು ಜಾಹೀರಾತು ಕಂಪೆನಿಗಳ ಒತ್ತಡಗಳಿಂದ ಹೊಸಹೊಸದಾಗಿ ಕೋರಿಕೆಗಳನ್ನು ಬೆಳೆಸಿಕೊಂಡು ಬರುತ್ತಿರುವುದನ್ನು ಅವರು ಖಂಡಿಸಿದ್ದಾರೆ. ಮಹಾತ್ಮ ಗಾಂಧಿಯವರು ''ವಿಶ್ವದ ಸಂಪನ್ಮೂಲ ಎಲ್ಲರ ಅವಶ್ಯಕತೆಗೂ ಸಾಕಷ್ಟಿದೆ, ದುರಾಸೆಗಲ್ಲ'' ಎಂದು ಹೇಳಿದ್ದರು; ನರಸಿಂಹರಾಯರು ಗಾಂಧೀಜಿಯವರ ಎಚ್ಚರಿಕೆ ಈಚೀಚೆಗೆ ಅನೇಕ ಕಡೆಗಳಿಂದ, ಅನೇಕ ಮುಂದಾಳುಗಳಿಂದ ಕೇಳಿಬರುತ್ತಿದೆ; ಇದನ್ನು ಮನಸ್ಸಿನಲ್ಲಿಟ್ಟುಕೊಂಡು ನಮ್ಮ ಮುಂದಿನ ಪ್ರಗತಿಯ ರೂಪುರೇಷೆಗಳನ್ನು ನಿರ್ಧರಿಸಿಕೊಳ್ಳಬೇಕಾಗಿದೆ, ಎಂದಿದ್ದಾರೆ.

ಶ್ರೀ ನರಸಿಂಹರಾಯರ ಹೇಳಿಕೆ ಸರಿಯಾದ ಸಮಯಕ್ಕೆ ಒದಗಿಬಂದಿದೆ. ಹೊಸ ಸುಧಾರಣೆಗಳನ್ನು ಆದಷ್ಟು ಬೇಗ ಆಚರಣೆಗೆ ತರಬೇಕೆಂದು ವಾಜಪೇಯಿ ಸರ್ಕಾರ ಆತುರವಾಗಿದೆ. ಶ್ರೀಮತಿ ಸೋನಿಯಾ ಗಾಂಧಿಯವರು ಇದಕ್ಕೆ ಕಾಂಗ್ರೆಸ್ ಪಕ್ಷದ ಬೆಂಬಲವನ್ನಾಗಲೇ ಸೂಚಿಸಿದ್ದಾರೆ. ಮೊದಲೇ ಹೇಳಿದಂತೆ ಅಂತರರಾಷ್ಟ್ರೀಯ ಒತ್ತಡ ಈ ತರಹದ ಸುಧಾರಣೆಗೆ ಇದ್ದೇ ಇದೆ. ಎಲ್ಲಕ್ಕಿಂತ ಹೆಚ್ಚಾಗಿ ಪಂಚವಾರ್ಷಿಕ ಯೋಜನೆಗಳನ್ನು ಕಾರ್ಯಗತ ಮಾಡುವುದರಲ್ಲಿ ಸರ್ಕಾರಿ ಕ್ಷೇತ್ರದ ಅಸಮರ್ಥತೆ ಕಟುವಾದ ಟೀಕೆಗಳಿಗೆ ಒಳಗಾಗಿದೆ. ರಾಷ್ಟ್ರ ಮತ್ತು ರಾಜ್ಯ ಸರ್ಕಾರಗಳಲ್ಲಿ ಜನರಿಗೆ ಮೊದಲಿದ್ದ ನಂಬಿಕೆ, ವಿಶ್ವಾಸಗಳಿಲ್ಲ. ಅದರ ಬದಲು ಮಾರುಕಟ್ಟೆ ಮತ್ತು ಖಾಸಗೀ ಸಂಸ್ಥೆಗಳ ಸಾಮರ್ಥ್ಯ ಮತ್ತು ನಿಪುಣತೆಗಳ ಬಗ್ಗೆ ವಿಶ್ವಾಸ ಬೆಳೆಯುತ್ತಿದೆ.

ಈ ಕಾರಣದಿಂದ ಅಭಿವೃದ್ಧಿ ಕಾರ್ಯದ ಜವಾಬ್ದಾರಿಯನ್ನೆಲ್ಲಾ ಖಾಸಗೀ ಕ್ಷೇತ್ರಕ್ಕಾಗಲಿ, ಮಾರುಕಟ್ಟೆಯ ಇತ್ಯರ್ಥಕ್ಕಾಗಲಿ ಬಿಡುವುದು ಸಾಧ್ಯವೂ ಇಲ್ಲ, ಸೂಕ್ತವೂ ಅಲ್ಲ. ಆಳವಾಗಿ ಪರಿಶೀಲಿಸಿದರೆ ನಮ್ಮಲ್ಲಿರುವ ಖಾಸಗೀ ವಲಯದಲ್ಲಿಯೂ ಸರ್ಕಾರದಲ್ಲಿರುವ ದೋಷಗಳು ಕಂಡುಬರುತ್ತವೆ. ಅಭಿವೃದ್ಧಿ ಯಶಸ್ವಿಯಾಗಿ ಸಿದ್ಧಿಸಬೇಕಾದರೆ ಸರ್ಕಾರ ಮತ್ತು ಖಾಸಗೀ ಕ್ಷೇತ್ರಗಳೆರಡೂ ಸಮರ್ಥವಾಗಿ ಮತ್ತು ಪ್ರಾಮಾಣಿಕವಾಗಿ ದುಡಿಯಬೇಕು. ಎರಡು ವಲಯಗಳಲ್ಲೂ ಆಡಳಿತ ಕ್ರಮವನ್ನು ಸುಧಾರಿಸಬೇಕಾದ ಅವಶ್ಯಕತೆಯಿದೆ. ಶ್ರೀ ನರಸಿಂಹರಾಯರು ಇದನ್ನು ಒತ್ತಿ ಹೇಳಿರುವುದು ಈಗಿನ ಸಂದರ್ಭಕ್ಕೆ ಅನುಗುಣವಾಗಿದೆ. ಅಭಿವೃದ್ಧಿ ಕಾರ್ಯಗಳ ಗುಣ ಏನಿರಬೇಕು, ಅದನ್ನು ಸಾಧಿಸುವ ಮಾರ್ಗಗಳೇನು, ಜನಜೀವನದ ಶೈಲಿಯ ಪರಿವರ್ತನೆಯಲ್ಲಿ ಯಾವುದು ಸರಿ, ಯಾವುದು ತಪ್ಪು ಮುಂತಾದ ವಿಷಯಗಳನ್ನು ತಜ್ಞರ ಚರ್ಚೆಗೆ ಮಾತ್ರ ಬಿಡದೆ ಸಾರ್ವತ್ರಿಕವಾಗಿ ಎಲ್ಲರೂ ಚಿಂತಿಸಬೇಕಾದುದು ಅತ್ಯವಶ್ಯಕ.

- ೩ -

ನೊಬೆಲ್ ಬಹುಮಾನಿತ ಪ್ರೊ|| ಅಮರ್ತ್ಯ ಸೇನ್‌ರವರ ಅಭಿಪ್ರಾಯದಲ್ಲಿ ಸಮಾಜದ ಪ್ರಗತಿಯನ್ನು ಯಾವೊಂದು ಕ್ಷೇತ್ರಕ್ಕೂ ಮೀಸಲಿಡಲು ಸಾಧ್ಯವಿಲ್ಲ.[೩] ಆರ್ಥಿಕ ಅಭಿವೃದ್ಧಿಯ ಜೊತೆ ಜನತೆಯ ಜೀವನಶೈಲಿ ಬದಲಾಗುವುದು ಅನಿವಾರ್ಯ. ಉಂಟಾಗುವ ಪರಿವರ್ತನೆಗಳು ಅದನ್ನು ಉತ್ತಮಗೊಳಿಸುವಂಥವುಗಳಾಗಿರಬೇಕು. ವ್ಯಕ್ತಿ ಸ್ವಾತಂತ್ರ್ಯಕ್ಕೆ ಅನೇಕ ಮುಖಗಳಿವೆ. ಇವುಗಳಲ್ಲಿ ರಾಜಕೀಯ ಸ್ವಾತಂತ್ರ್ಯ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯಗಳಿಗೆ ಮಾತ್ರ ಪ್ರಾಮುಖ್ಯತೆ ಕೊಟ್ಟರೆ ಸಾಲದು. ಬಡತನದ ಹಿಡಿತದಲ್ಲಿ ಸಿಕ್ಕಿರುವವರಿಗೆ, ಜಾತಿ ಮತ್ತು ಲಿಂಗಭೇದಗಳಿಂದ ನರಳುತ್ತಿರುವವರಿಗೆ, ಮೌಢ್ಯ ಮತ್ತು ಕಂದಾಚಾರಗಳಿಂದ ತೊಳಲುತ್ತಿರುವವರಿಗೆ ಈ ಸ್ವಾತಂತ್ರ್ಯಗಳನ್ನು ಅನುಭವಿಸಲು ಅನೇಕ ಸಲ ಸಾಧ್ಯವಾಗುವುದಿಲ್ಲ. ಅಂತಹವರಿಗೂ ರಾಜಕೀಯ, ಸಾಮಾಜಿಕ ಅಥವಾ ಅಭಿವ್ಯಕ್ತಿ ಸ್ವಾತಂತ್ರ್ಯಗಳು ಪೂರ್ಣವಾಗಿ ದೊರಕಬೇಕಾದರೆ ಆರ್ಥಿಕ ಅಭಿವೃದ್ಧಿಗೂ ಅನೇಕ ಮುಖಗಳಿರಬೇಕು. ಸಮಾಜದ ದೃಷ್ಟಿಯಿಂದ ಇದನ್ನು ಅವಲೋಕಿಸಿ ಅಭಿವೃದ್ಧಿ ನೀತಿಯನ್ನೂ, ಕಾರ್ಯಗಳನ್ನೂ ಹಮ್ಮಿಕೊಳ್ಳಬೇಕು.

ಅಮರ್ತ್ಯ ಸೇನ್‌ರವರ ಪ್ರಕಾರ ಆರ್ಥಿಕ-ಸಾಮಾಜಿಕ ಅಭಿವೃದ್ಧಿ ಮತ್ತು ವ್ಯಕ್ತಿ ಸ್ವಾತಂತ್ರ್ಯಗಳು ಜೊತೆಗೂಡಿ ಬೆಳೆಯಬೇಕೇ ಹೊರತು ಬೇರೆ ಬೇರೆಯಾಗಲ್ಲ. ಆದ್ದರಿಂದ ಬಡತನ, ನಿರುದ್ಯೋಗ, ಅನಕ್ಷರತೆ, ಅನಾರೋಗ್ಯ, ಲಿಂಗಭೇದ ಮುಂತಾದವುಗಳನ್ನು ವ್ಯಕ್ತಿ ಸ್ವಾತಂತ್ರ್ಯಕ್ಕಲ್ಲದೆ ಅಭಿವೃದ್ಧಿ ಕಾರ್ಯಕ್ಕೂ ಅಡಚಣೆಗಳೆಂದು ಭಾವಿಸಬೇಕು. ಖಾಸಗೀ ಸಂಸ್ಥೆಗಳು ಇದನ್ನು ಅರ್ಥಮಾಡಿಕೊಳ್ಳುವುದಲ್ಲದೆ ಮೇಲಿನ ಅಡಚಣೆಗಳನ್ನು ನಿವಾರಿಸುವುದು ಉತ್ಪನ್ನತೆಯ ಒಂದು ಭಾಗವೆಂದು ಅರಿತುಕೊಳ್ಳಬೇಕು. ಕೈಗಾರಿಕೆಗಳನ್ನು ಸ್ಥಾಪಿಸಿರುವ ಕ್ಷೇತ್ರಗಳ ಸುತ್ತಮುತ್ತಿನಲ್ಲಿ ಮೇಲಿನ ಸಾಮಾಜಿಕ ಜವಾಬ್ದಾರಿಗಳಲ್ಲಿ ಭಾಗವಹಿಸಲು ಆಸಕ್ತರಾಗಬೇಕು. ಹಾಗೆಯೇ ತಾವು ಉಪಯೋಗಿಸುವ ತಂತ್ರಜ್ಞಾನದ ಪರಿಣಾಮವಾಗಿ ಉದ್ಯೋಗವಕಾಶಗಳು ನಿವ್ವಳವಾಗಿ ಹೆಚ್ಚುವಂತೆ ನೋಡಿಕೊಳ್ಳಬೇಕು.

ಜಾಗತೀಕರಣದ ಫಲವಾಗಿ ನಮ್ಮ ದೇಶದ ಕೈಗಾರಿಕೆ, ವ್ಯವಸಾಯ ಮತ್ತು ಸೇವೆಯ ವಿಭಾಗಗಳ ಮಾರುಕಟ್ಟೆಯ ವಿಸ್ತಾರ ಹೆಚ್ಚುವುದರಿಂದ ಉದ್ಯಮಿಗಳು ಎರಡು ವಿಧದ ಬದಲಾವಣೆಗಳಿಗೆ ಹೊಂದಿಕೊಳ್ಳಬೇಕು. ಮೊದಲನೆಯದಾಗಿ ಹೊರದೇಶಗಳಲ್ಲಿ ಮೊದಲಿಗಿಂತ ಹೆಚ್ಚು ಅನುಕೂಲವಾಗಿ ವ್ಯಾಪಾರ ಮಾಡಲು ಅನುಕೂಲವಾಗುತ್ತದೆ. ಹಾಗೆಯೇ ನಮ್ಮ ದೇಶದ ಮಾರುಕಟ್ಟೆಗಳಲ್ಲಿ ಪರದೇಶದಲ್ಲಿ ಸ್ಥಾಪಿತವಾದ ಕೈಗಾರಿಕೆ-ವಾಣಿಜ್ಯ ಸಂಸ್ಥೆಗಳಿಂದ ಪೈಪೋಟಿ ಹೆಚ್ಚುತ್ತದೆ. ಈ ಸನ್ನಿವೇಶದಲ್ಲಿ ಸ್ವದೇಶೀ ಸಂಸ್ಥೆಗಳು ತಾವು ಎದುರಿಸಬೇಕಾದ ಪೈಪೋಟಿಯನ್ನು ತಗ್ಗಿಸಲು ಪರದೇಶದ ಸಂಸ್ಥೆಗಳೊಡನೆ ಒಪ್ಪಂದಗಳನ್ನು ಮಾಡಿಕೊಳ್ಳಲು ಪ್ರಯತ್ನಿಸುತ್ತವೆ. ಬಹುರಾಷ್ಟ್ರೀಯ ಕಂಪೆನಿಗಳೊಡನೆ ಇಂತಹ ಒಪ್ಪಂದ ಮಾಡಿಕೊಂಡ ದೇಶೀಯ ಕಂಪೆನಿಗಳು ಕೆಲವು ಕಾಲಾನಂತರ ಅವುಗಳಿಗೆ ಅಧೀನರಾಗುವುದು ಕಂಡುಬರುತ್ತಿದೆ. ಎರಡನೆಯದಾಗಿ, ಇಂತಹ ಬೆಳವಣಿಗೆಯಿಂದ ಆರ್ಥಿಕ ಅಸಮಾನತೆಗಳಲ್ಲದೆ ರಾಜಕೀಯ ಅಸಮಾನತೆಗಳೂ ಉದ್ಭವವಾಗುವ ಅಪಾಯವಿದೆ. ಅಭಿವೃದ್ಧಿಶೀಲ ರಾಷ್ಟ್ರಗಳು ಜಾಗತೀಕರಣ ಇತ್ಯಾದಿಗಳ ಫಲವನ್ನು ಸಂಪೂರ್ಣವಾಗಿ ಅನುಭವಿಸಲು ಇವೆಲ್ಲಾ ಅಡಚಣೆಗಳಿವೆ.

ಪರದೇಶಗಳಿಂದ ಉಂಟಾಗುವ ಮಾರುಕಟ್ಟೆಯ ಒತ್ತಡವನ್ನು ಸಮರ್ಪಕವಾಗಿ ನಿಭಾಯಿಸಲು ನಮ್ಮಲ್ಲಿರುವ ಜನಶಕ್ತಿ ಮತ್ತು ಇತರ ಸಂಪನ್ಮೂಲಗಳ ಉತ್ಪನ್ನ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಬೇಕಾಗಿದೆ. ಸೂಕ್ತವಾದ

*(ಮುಂದಿನ ಪುಟಕ್ಕೆ)*

# ಜಾಗತೀಕರಣ ಮತ್ತು ಸಾಂಸ್ಕೃತಿಕ ಪಲ್ಲಟ

ಪ್ರೊ|| ಕೆ. ಜಿ. ನಾಗರಾಜಪ್ಪ

ಜಗತ್ತಿನ ಬಹುತೇಕ ರಾಷ್ಟ್ರಗಳು ಆರ್ಥಿಕ ಹಿಂಜರಿತ ಅನುಭವಿಸುತ್ತಿವೆ. ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಂತೂ ಅಧಿಕ ಸಾಲದ ಬಡ್ಡಿ ಕಟ್ಟಲು ಹಣವಿಲ್ಲದೆ ಒದ್ದಾಡುತ್ತಿವೆ. ಸಾಲಕ್ಕೆ ಬಡ್ಡಿ ಸೇರಿಸಿ, ಅದಕ್ಕೆ ಮತ್ತಷ್ಟು ಹೊಸ ಸಾಲ ಸೇರಿಸಿ ಸಾಲ ಮಂಜೂರು ಮಾಡಿ, ಇಲ್ಲವೇ ಬಡ್ಡಿ ಸಮೇತ ಸಾಲವನ್ನೇ ಮನ್ನಾ ಮಾಡಿ ಎಂದು ಅಭಿವೃದ್ಧಿ ಹೊಂದಿದ ರಾಷ್ಟ್ರಗಳ ಮುಂದೆ ಸೆರಗೊಡ್ಡಿ ಅಂಗಲಾಚುತ್ತಿವೆ. ಇಂಥ ಯಾವ ಬೇಡಿಕೆಗೂ ಸೊಪ್ಪು ಹಾಕದ ಬಲಿಷ್ಠ ಬಂಡವಾಳ ರಾಷ್ಟ್ರಗಳು, ರಷ್ಯಾದ ಆರ್ಥಿಕ ಪತನಕ್ಕೆ ಬೀಗುತ್ತ, ಮತ್ತಷ್ಟು 'ಅಹಂ'ನಿಂದ, ಸಾಲಗಾರ ರಾಷ್ಟ್ರಗಳ ಕುತ್ತಿಗೆಯ ನೇಣನ್ನು ಐ.ಎಂ.ಎಫ್. ಮುಂತಾದ ಅಂತರರಾಷ್ಟ್ರೀಯ ಸಂಘ ಸಂಸ್ಥೆಗಳ ಮೂಲಕ ಮತ್ತಷ್ಟು ಬಿಗಿಗೊಳಿಸಿ, ಹಿಂದುಳಿದ ರಾಷ್ಟ್ರಗಳನ್ನು ನಿಯಂತ್ರಿಸುತ್ತ ಹಿಂಸಿಸುತ್ತಿವೆ. ಅನೇಕ ರಾಷ್ಟ್ರಗಳು ಐ.ಎಂ.ಎಫ್.ನ ಜಿಗಿ ನಿಲುವಿನಿಂದ ನೆಲ ಕಚ್ಚಿವೆ. ಭ್ರಷ್ಟ ರಾಜಕಾರಣಿಗಳ ಕೈಗೆ ತಮ್ಮ ದೇಶಗಳ ಆಡಳಿತ ಸೂತ್ರ ಕೊಟ್ಟ ಶ್ರೀಸಾಮಾನ್ಯರು ತಮ್ಮ ನಿಸ್ಸಹಾಯಕತೆಗೆ ತಾವೇ ಮರುಗುತ್ತಿದ್ದಾರೆ. ಅವರನ್ನು ಸಂಕಟದಿಂದ ಪಾರಾಗಿಸಲು ತಲತಲಾಂತರದಿಂದ ಬಂದಿರುವ ಆರ್ಥಿಕ ಮಾರ್ಕೆಟ್ಟುಗಳಾಗಲಿ, ಸಂಪ್ರದಾಯದ ಸಾಂಸ್ಕೃತಿಕ ಮೌಲ್ಯಗಳಾಗಲಿ ಅಸಮರ್ಥವಾಗಿವೆ. ಸಾಮ್ರಾಜ್ಯಶಾಹಿ, ವಸಾಹತುಶಾಹಿ ಮತ್ತು ಅಧಿಕಾರಶಾಹಿಯ ಕಪಿಮುಷ್ಟಿಯಿಂದ, ಹೋರಾಡಿ ಬಿಡುಗಡೆಯಾದಾಗ ಸಿಕ್ಕ ಸುಖ ಮತ್ತು ಸೌಲಭ್ಯಗಳು ತಾತ್ಕಾಲಿಕವಾದವು ಎಂಬ ಅರಿವಾಗಿ ಜನರು ಮತ್ತಷ್ಟು ಸಂಕಟ, ನೋವು, ತಳಮಳಕ್ಕೆ ಪ್ರಜಾಪ್ರಭುತ್ವದಲ್ಲಿಯೂ ಸಿಕ್ಕಿದುದಂತೂ ಒಂದು ದುರಂತ.



ಸ್ಥಿತ್ಯಂತರದ ಚಾರಿತ್ರಿಕ, ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆ ಶ್ರೀಸಾಮಾನ್ಯರ ಸ್ಥಿತಿಗತಿಯನ್ನೇನೂ ಅಷ್ಟಾಗಿ ಉತ್ತಮಪಡಿಸಲಿಲ್ಲ. ಕುಡಿಯಲು ನೀರು, ತಿನ್ನಲು ಅನ್ನ, ಉಸಿರಾಡಲು ಶುದ್ಧ ಗಾಳಿ, ಓಡಾಡಲು ರಸ್ತೆ, ನೆಲಕ್ಕೆ ತಲೆ ಕೊಡಲು ಒಂದು ಸೂರು, ನಿಂತು ನೋಡಲು ಶುದ್ಧ ಪರಿಸರ ಇಲ್ಲದೆ ಶ್ರೀಸಾಮಾನ್ಯರು ಅನೇಕ ಸಾಂಕ್ರಾಮಿಕ ರೋಗಗಳಿಗೆ ತುತ್ತಾಗಿ ನರಳುತ್ತಿದ್ದಾರೆ. ನಗರಗಳಿಗಿಂತ ಗ್ರಾಮೀಣರ ಬದುಕು ಮತ್ತಷ್ಟು ಹದಗೆಟ್ಟು, ಗಂಭೀರಸ್ಥಿತಿ ಮುಟ್ಟಿದೆ; ಕೊಳ್ಳುವ ಸಾಮರ್ಥ್ಯವೇ ಗ್ರಾಮೀಣರಿಗೆ ಇಲ್ಲವಾಗಿದೆ.

## ದಿವಾಳಿಯಾಗುತ್ತಿರುವ ದೇಶ

ಆರ್ಥಿಕ ಮತ್ತು ಸಾಂಸ್ಕೃತಿಕ ಅಸ್ತವ್ಯಸ್ತತೆಯಿಂದ ದೇಶ ದಿವಾಳಿಯಾಗುತ್ತಿದೆ. ಅನೇಕ 'ಸ್ಕಾಮ್'ಗಳಿಗೆ ಸಿಕ್ಕಿರುವ ರಾಜಕಾರಣಿಗಳಿಂದಾಗಲಿ, ಭ್ರಷ್ಟ ಅಧಿಕಾರಿಗಳಿಂದಾಗಲಿ, ದೋಷಪೂರಿತ ಯೋಜನೆಗಳಿಂದಾಗಲಿ, ಕೇವಲ ಓಟುಗಳಿಗಾಗಿ ಜಾತಿಗೆ ಜೋತುಬಿದ್ದು, ಮೀಸಲಾತಿಯನ್ನು ಶಾಶ್ವತಗೊಳಿಸುವ ರಾಜಕಾರಣಿ ಜಾತಿವಾದಿಗಳಿಂದಾಗಲಿ, ಬದ್ಧತೆ ಇಲ್ಲದ ಹಗಲುಗನಸು ಕಾಣುವ ಬರಹಗಾರರಿಂದಾಗಲಿ, ಮೂಲಭೂತವಾದಿಗಳಾಗಿರುವ ಫ್ಯಾಸಿಸ್ಟರಿಂದಾಗಲಿ, ದೇಶವನ್ನು ಸದ್ಯ ಸ್ಥಿತಿಯಿಂದ ಪಾರುಮಾಡಲು ಸಾಧ್ಯವೇ ಇಲ್ಲ. ದೇಶ ಬದ್ಧತೆಯುಳ್ಳ, ಏಕನಿಷ್ಠೆಯಿಂದ ದುಡಿಯುವ, ಕನಿಷ್ಠವಾದ ನೈತಿಕ ಮೌಲ್ಯಗಳನ್ನಾದರೂ ಎತ್ತಿ ಹಿಡಿವ, ಮಾಡಿದ ತಪ್ಪಿಗಾಗಿ ಪಶ್ಚಾತ್ತಾಪ ಪಡುವ, ವಾಸ್ತವ ದೃಷ್ಟಿಯ ಸಾಮಾನ್ಯರನ್ನು ದೇಶ ಬಯಸುತ್ತಿದೆ. ಬಂಗಾರದ ರಥ, ವಜ್ರದ ಕಿರೀಟ, ಬೆಳ್ಳಿ ಪಲ್ಲಕ್ಕಿ ಬಯಕೆಯ ದೇವರು, ಪೀಠಾಧಿಪತಿಗಳು ಮತ್ತು ಭಕ್ತರ ಅಗತ್ಯ ಈಗ ದೇಶಕ್ಕಿಲ್ಲ. ಅಥವಾ ಪ್ರಸ್ತುತವಲ್ಲದ ಪುರಾಣ ಮತ್ತು ಸಾಧು ಸಂತರ ಸುಧಾರಣಾ ವ್ಯಾಖ್ಯಾನ ತತ್ತ್ವಗಳ ಪ್ರಚಾರಕ್ಕೆ ನರರೋಗಿಗಳ ಅಗತ್ಯವೂ ಇಲ್ಲ. ವಾಸ್ತವಿಕ ಜೀವನದ ಪ್ರಾಮಾಣಿಕ ಸಂವೇದನೆ ಭಾವನಾತ್ಮಕವಾದಾಗ ಹೆಚ್ಚು ವೈಚಾರಿಕವಾಗಿರುತ್ತದೆ ಮತ್ತು ಅದು ಶ್ರೀಸಾಮಾನ್ಯನೊಂದಿಗೆ ಸಂವಾದಕ್ಕೆ ಸಹಕಾರಿಯಾಗುತ್ತದೆ. ಆಗಲೇ ಆರ್ಥಿಕ ಮತ್ತು ಸಂವೇದನಾತ್ಮಕ ಸಾಂಸ್ಕೃತಿಕ ಸಾಮರಸ್ಯದಿಂದ ಮಾನವ ಪ್ರಗತಿ ಸಾಧ್ಯವಾಗುತ್ತದೆ.

ಶ್ರೀಸಾಮಾನ್ಯರ ಅನಕ್ಷರತೆ, ಮೌಢ್ಯ ಮತ್ತು ಬಡತನಕ್ಕಿಂತ, ಶ್ರೀಮಂತರ ಮತ್ತು ವಿದ್ಯಾವಂತರ ವೈಜ್ಞಾನಿಕ ಮೌಢ್ಯಗಳು, ಧಾರ್ಮಿಕ ವಿಧಿಗಳ ವೈಭವಾಚರಣೆಗಳು, ಮಿತಿಮೀರಿದ ಆಮೋದ ಪ್ರಮೋದಗಳು ಹೆಚ್ಚು ಅಪಾಯಕಾರಿಗಳು. ಶ್ರೀಸಾಮಾನ್ಯರಿಗಿಂತ ವಿದ್ಯಾವಂತರನ್ನೇ ಒತ್ತಡಗಳು ಮಾನಸಿಕ ಹಿಂಜರಿಕೆಗೆ ಗುರಿಮಾಡುತ್ತಿವೆ. ಇಂದಿನ ಮತಾಚರಣೆಗಳು ಮತ್ತು ಧಾರ್ಮಿಕ ವಿಧಿಗಳು ಅಂತರಂಗದ ಆತ್ಮಸಾಧನೆಗಿಂತ, ಬಹಿರಂಗದ ಪ್ರತಿಷ್ಠೆಯ ಪ್ರದರ್ಶನಕ್ಕೆ ಸಾಧನವಾಗಿ, ಭ್ರಷ್ಟ ಬದುಕಿಗೆ ರಕ್ಷಣೆಯಾಗಿವೆ ಮತ್ತು ಇಬ್ಬಂದಿತನಕ್ಕೆ ಕಾರಣವಾಗಿವೆ. ಯಾವಾಗಲೂ ದೇವರ ಪ್ರಭುತ್ವ ಒಪ್ಪಿದ (theocracy) ಸಿದ್ಧಾಂತ

---

ತಂತ್ರಜ್ಞಾನ, ಅದಕ್ಕೆ ಅನುಗುಣವಾದ ತರಬೇತಿ, ಸಾರ್ವಜನಿಕ ವಿದ್ಯಾಭ್ಯಾಸದ ಏಳಿಗೆ, ಜನರಿಗೆ ಬೇಕಾದ ಆರೋಗ್ಯ ಸೇವೆಗಳು, ಮಾಹಿತಿ ಮತ್ತು ಸಂಪರ್ಕ ವಿಧಾನಗಳಲ್ಲಿ ನವೀನತೆ, ಆಡಳಿತ ಕ್ರಮದಲ್ಲಿ ಸುಧಾರಣೆ– ಇವೆಲ್ಲವನ್ನೂ ಅಳವಡಿಸಿಕೊಳ್ಳುವುದರಲ್ಲಿ ಮಾರುಕಟ್ಟೆಯ ವ್ಯಾಪ್ತಿಯಿಂದ ದೊರಕುವ ಪ್ರಯೋಜನಗಳಲ್ಲಿ ಉತ್ಪನ್ನದೊಡನೆ ಸಮಾಜ ಮತ್ತು ವ್ಯಕ್ತಿಸ್ವಾತಂತ್ರ್ಯಗಳನ್ನು ಬಲಪಡಿಸುವುದರ ಬಗ್ಗೆ ಗಮನವಿರಬೇಕು. ವ್ಯಾಪಕವಾಗಿ ಮತ್ತು ದೀರ್ಘಕಾಲದ ಫಲವನ್ನು ನೀಡುವಂತಹ ಯೋಜನೆಗಳನ್ನು ಹಮ್ಮಿಕೊಳ್ಳಬೇಕು. ಇದರ ಬದಲು ವಿಶ್ವವ್ಯಾಪಿಯಾದ ಮಾರುಕಟ್ಟೆಯಲ್ಲಿ ಪಾಶ್ಚಾತ್ಯದೇಶಗಳು ಅನುಸರಿಸುತ್ತಿರುವ ಬಂಡವಾಳಶಾಹಿ ವ್ಯವಸ್ಥೆಯನ್ನು ನಾವೂ ಅನುಸರಿಸಿ ನಮ್ಮಲ್ಲಿರುವ ದೀರ್ಘಕಾಲದ ಸಮಸ್ಯೆಗಳು ತಾವೇ ತಾವಾಗಿ ಪರಿಹಾರಗೊಳ್ಳುವುವೆಂದು ಭಾವಿಸುವುದು ವಂಚನೆಯಾದೀತು.

ಮೂಲಗಳು

1. UNDP *Human Development Report.* 1999. Oxford University Press, Jaisingh Road, New Delhi-110 001, 1999. p.3
2. P. V. Narasimha Rao : J.R.D. Tata Memorial Lecture. Delivered at a meeting of Associated Chambers of Commerce and Industry (ASSOCHAM), India, on Nov. 1. 1999 at New Delhi.
3. Prof. A.K. Sen. *Development as Freedom.* Alfred A Knopf, New York. 1999. ch. 2. "The Ends and Means of Development". pp 35-53.

ಡಾ|| ಕೆ. ಎಸ್. ಕೃಷ್ಣಸ್ವಾಮಿ
ಸಿ-೬೦೧, 'ಆದರ್ಶ ಗಾರ್ಡನ್ಸ್', ಜಯನಗರ ೯ನೇ ಬ್ಲಾಕ್,
೪೭ನೇ ಕ್ರಾಸ್, ಬೆಂಗಳೂರು - ೫೬೦ ೦೬೯

ಬಂಡವಾಳದ ಬೆಂಬಲವಾಗಿರುತ್ತದೆ. ಅದು ಸಮಾನತೆಯ ಮುಖವಾಡದಲ್ಲಿ ಅಸಮಾನತೆಯ ವಿಷ ಬೀಜ ಬಿತ್ತುತ್ತಿರುತ್ತದೆ. ಅದನ್ನೇ ಧರ್ಮ ಯಾವ ರೂಪದಲ್ಲಿ ಯಾವಾಗ ಬಂದರೂ 'ಧರ್ಮ ಸುಲಿಗೆ' ಎಂದು ವಿಚಾರವಂತರು ಸಾರಿರುವುದು. 'ಸಹನಾವವತು' ಶ್ಲೋಕಕ್ಕೆ ಕಮ್ಯುನಿಸ್ಟ್ ತತ್ತ್ವದ ವ್ಯಾಖ್ಯಾನ ಮಾಡಿ ಧರ್ಮ ಮತ್ತು ಕಮ್ಯುನಿಸ್ಟ್ ತತ್ತ್ವ ಎರಡೂ ಒಂದೇ ಎಂದು ಕೆಲವರು ಸಾರುತ್ತಾರೆ. ಆರ್ಥಿಕ ಮತ್ತು ಸಾಮಾಜಿಕ ವ್ಯಾಖ್ಯಾನದಲ್ಲಿ ಧರ್ಮ ಭಾವನಾತ್ಮಕ ದಾರಿ ಹಿಡಿಯಿತು. ಆದರೆ ಮಾರ್ಕ್ಸ್‌ವಾದ ಕ್ರಿಯಾತ್ಮಕ ದಾರಿ ಹಿಡಿದು ಹಿಂಜರಿಕೆ ಅನುಭವಿಸಿತು. ಅದರಿಂದ ಜಾತಿ ಮತ್ತು ವರ್ಗ ಸಮಸ್ಯೆಗಳು ಧರ್ಮದಿಂದ ಬಗೆಹರಿದವು ಎಂದಂತಾಗಲಿಲ್ಲ. ಬಂಡವಾಳಶಾಹಿಯಿಂದ ಇಡೀ ದೇಶ ದೇಶಗಳೇ 'ಸ್ಲಮ್'ಗಳಾಗಿ ಪರಿವರ್ತಿತವಾಗುತ್ತಿವೆ. ಧಾರ್ಮಿಕ ವಲಯದ ಆರ್ಥಿಕ ನೀತಿ ತೋಳ-ಕುರಿಮರಿ ಸಂಬಂಧವಾಗಿದ್ದು ಶೋಷಿತ ಶೋಷಕನಾಗುವ ಸ್ವರೂಪದ್ದು. ಸದ್ಯ ಸ್ಥಿತಿಗೆ ಧರ್ಮ ಮತ್ತು ಮಾರ್ಕ್ಸ್ ಸಿದ್ಧಾಂತಗಳು ಅಪ್ರಸ್ತುತವಾದವು ಎನ್ನುವಂತಿಲ್ಲ. ಅದಕ್ಕೆ 'ಯೂರೋ ಕಮ್ಯುನಿಸ್ಟರು' ಮಾರ್ಕ್ಸ್ ತತ್ತ್ವ ಪರಿಷ್ಕರಿಸಿ ಸಮಾಜವಾದದ ಪ್ರಜಾಪ್ರಭುತ್ವ ತತ್ತ್ವವನ್ನು ಅಳವಡಿಸಿಕೊಂಡರು. ಅಂತೂ ಜಗತ್ತಿನಲ್ಲಿ ಮೊತ್ತ ಮೊದಲಿಗೆ ಮಾರ್ಕ್ಸ್ ಆರ್ಥಿಕ ರಹಸ್ಯ ಕೋಣೆಯ ಬೀಗದ ಕೀಲಿಕೈ ಆದನು ಎನ್ನುವುದನ್ನು ನಿರಾಕರಿಸುವಂತಿಲ್ಲ.

## ಅಮೇರಿಕದ ಮದ್ದು

ಆರ್ಥಿಕ ಸಂಕಟಕ್ಕೆ ಸಿಕ್ಕಿರುವ ದೇಶಗಳನ್ನು ಕಾಪಾಡಲು ಅಮೇರಿಕ ಒಂದು ಆರ್ಥಿಕ ತತ್ತ್ವವನ್ನು ರೂಪಿಸಿತು. ಅಂಥ ಒಂದು ತತ್ತ್ವವೇ ಜಾಗತೀಕರಣ. ಆರ್ಥಿಕ ದುಸ್ಥಿತಿಯಿಂದ ಚೇತರಿಕೆಗೆ ಜಾಗತೀಕರಣ ಒಂದು ಸಂಜೀವಿನಿ ಎಂದು ಸಾರುತ್ತಿದೆ. ಅದು ಎಲ್ಲ 'ಇಸಂ'ಗಳಿಂದ ಮುಕ್ತವಾದ ಶುದ್ಧ ಆರ್ಥಿಕ ಸಿದ್ಧಾಂತ. ಜಾಗತೀಕರಣ ತತ್ತ್ವ ಕನಸಲ್ಲ, ಕಲ್ಪನೆಯಲ್ಲ; ಪ್ರಯೋಗಾತ್ಮಕವಾದುದು, ವಾಸ್ತವಿಕ ವಾದುದು, ಹೆಚ್ಚು ಲಾಭದಾಯಕವಾದುದು, ಖಾಸಗೀಕರಣದಿಂದ ಕಾರ್ಯರೂಪಿಯಾಗುವುದು. ಜಾಗತೀಕರಣಕ್ಕೆ ಹೈಟೆಕ್ ಮಾಹಿತಿ ಕೇಂದ್ರದ ರಕ್ಷಣೆಯಿದೆ. ಜಾಗತೀಕರಣವೆಂದರೆ ಅಧಿಕ ಬಂಡವಾಳ ಹೂಡಿಕೆ, ಅಧಿಕ ಉತ್ಪಾದನೆ, ಗ್ರಾಹಕರ ಅಭಿರುಚಿಗೆ ಆದ್ಯತೆ. ಜಗತ್ತಿನ ಮುಕ್ತ ಮಾರುಕಟ್ಟೆಯು ಗುಣಮಟ್ಟದ ಶಿಕ್ಷಣ, ಪರಿಸರ ರಕ್ಷಣೆ, ಉನ್ನತ ಮಟ್ಟದ ಜೀವನ, ಅಧಿಕ ಉದ್ಯೋಗ ಸೃಷ್ಟಿ, ಉತ್ತಮ ಆರೋಗ್ಯ, ಸಂಸ್ಕೃತಿಯ ವೈವಿಧ್ಯ ಮತ್ತು ಬಹು ಸಂಸ್ಕೃತಿಯ ಅಧಿಕೃತ ಮಾನ್ಯತೆ, ಸ್ಥಳೀಯ ಸಂಸ್ಕೃತಿಯ ಸಂರಕ್ಷಣೆ - ಇನ್ನೂ ಮುಂತಾದ ಆರ್ಥಿಕ ಯೋಜನೆಯ ಸುಂದರ ಕನಸಿನ ಮಾಯಾಬಜಾರು ! ಮಾನವನ ಎಲ್ಲಾ ಕೊರತೆಗಳನ್ನೂ ನಿವಾರಿಸುವ ಪರಿಕಲ್ಪನೆಯೇ ಜಾಗತೀಕರಣ. ಅದರಲ್ಲಿ ಜಾಹೀರಾತು ಪ್ರಧಾನ ಪಾತ್ರ ವಹಿಸುತ್ತದೆ ಮತ್ತು ಗ್ರಾಹಕರನ್ನು ಸಮೂಹ ಸನ್ನಿಗೆ ಒಳಗು ಮಾಡುತ್ತದೆ.

> ಜಾಗತೀಕರಣವು ಅಭಿವೃದ್ಧಿಯ ಪ್ರಕ್ರಿಯೆಯೆಂದು ಹೇಳುವಾಗ ಅದರ ಇತರ ಮಗ್ಗುಲುಗಳನ್ನು ಉಪೇಕ್ಷಿಸಲಾಗುತ್ತದೆ. ಸಾಂಸ್ಕೃತಿಕ ಕ್ರಿಯಾಶಾಲಿತ್ವ ಹಾಗೂ ವ್ಯಕ್ತಿತ್ವಗಳ ಮೇಲೆ ಸಹ ಜಾಗತೀಕರಣದ ಪ್ರಭಾವ ಇರಲು ಶಕ್ಯವಿದೆ. ಆ ಬಗ್ಗೆ ಸಮಗ್ರ ವಿಶ್ಲೇಷಣೆ ಮತ್ತು ಎಚ್ಚರಿಕೆ ಅವಶ್ಯಕವಿದೆ. ಅಂತಹ ಪ್ರಯತ್ನವನ್ನು ಕನ್ನಡ ಪ್ರಾಧ್ಯಾಪಕ ಶ್ರೀ ನಾಗರಾಜಪ್ಪನವರು ಮಾಡಿದ್ದಾರೆ.

ಜಾಗತೀಕರಣದಲ್ಲಿ ಸಾಂಸ್ಕೃತಿಕ ಜೀವನಕ್ಕೆ ಆರ್ಥಿಕ ಯೋಜನೆಗಳೇ ತಳಹದಿ. ಅದಕ್ಕೆ ಆರ್ಥಿಕವೇ ಪ್ರಧಾನ, ಸಂಸ್ಕೃತಿ ಗೌಣ. ಸಂಸ್ಕೃತಿಯ ಮೇಲೆ ಆರ್ಥಿಕ ಸಂಸ್ಕೃತಿಯ ಪ್ರಭಾವ ಮುಖ್ಯವಾಗಿರುತ್ತದೆ. ತಂತ್ರಜ್ಞಾನದ ಮಾಹಿತಿ ಕೇಂದ್ರ, ಆರ್ಥಿಕ ಸಂಸ್ಕೃತಿ ಮತ್ತು ಸಂಸ್ಕೃತಿ - ಈ ಮೂರೂ ಉತ್ಪಾದನೆ ಸಂಸ್ಕೃತಿಯ ಸ್ವರೂಪವನ್ನು ನಿಶ್ಚಯಿಸುತ್ತವೆ. ಇವೆಲ್ಲವನ್ನೂ ಅಂತಿಮವಾಗಿ ಬಂಡವಾಳ ನಿಯಂತ್ರಿಸುತ್ತದೆ. ಬಂಡವಾಳ ಸಂಸ್ಕೃತಿಯ ಯಾಜಮಾನಿಕೆ ಸ್ಥಾಪಿತವಾಗುತ್ತದೆ. ಜಾಗತೀಕರಣ ಜನಪ್ರಿಯ ಸಂಸ್ಕೃತಿಯನ್ನು ಹುಟ್ಟುಹಾಕಿದೆ. ಜನಪ್ರಿಯ ಸಂಸ್ಕೃತಿ ಪಾಶ್ಚಾತ್ಯರಲ್ಲಿ ಕಟುಟೀಕೆಗೆ ಒಳಗಾಗಿತ್ತು. ಅದರಲ್ಲಿಯೂ ತತ್ತ್ವಶಾಸ್ತ್ರಜ್ಞರು ಜನಪ್ರಿಯ ಸಂಸ್ಕೃತಿಯನ್ನು ಗಂಭೀರವಾಗಿ ಪರಿಗಣಿಸುತ್ತಿರಲಿಲ್ಲ. ನಮ್ಮಲ್ಲಿಯೂ ಜನಪ್ರಿಯ ಸಂಸ್ಕೃತಿಗೆ ಶಿಷ್ಟರ ವಿರೋಧವಿತ್ತು. ಬೌದ್ಧಿಕ ವಲಯದಲ್ಲಿಯೂ ಜನಪ್ರಿಯ ಸಂಸ್ಕೃತಿಗೆ ಮೆಚ್ಚುಗೆ ಇರಲಿಲ್ಲ. ಸಂಸ್ಕೃತಿ ವಸ್ತುಗಳ ಉತ್ಪಾದನೆಯಲ್ಲಿ ಜನಪ್ರಿಯ ಸಂಸ್ಕೃತಿ ಪ್ರಧಾನವಾಯಿತು. ಇದರಿಂದ ಶಿಷ್ಟ ಸಂಸ್ಕೃತಿ ಮತ್ತು ಜಾನಪದ ಸಂಸ್ಕೃತಿಗಳ ಸ್ಥಾನಪಲ್ಲಟವಾಯಿತು ಮತ್ತು ಮುಖಬೆಲೆ ಕಳೆದುಕೊಂಡವು. ಕೈಗಾರಿಕಾ ಪೂರ್ವದಲ್ಲಿ ಶಿಷ್ಟ ಸಂಸ್ಕೃತಿ ಶ್ರೀಮಂತರು ಮತ್ತು ಪ್ರತಿಷ್ಠಿತರಿಗೆ ಮೀಸಲಾಗಿತ್ತು. ಶಿಷ್ಟ ಸಂಸ್ಕೃತಿ ಭಾವನಾತ್ಮಕವಾದುದು; ಪ್ರತಿಭೆಯಿಂದ ಕೂಡಿದ್ದು ಸ್ಫೂರ್ತಿ ಮತ್ತು ಸೃಜನಶೀಲವಾದುದು. ಆದರೆ ಜನಪ್ರಿಯ ಸಂಸ್ಕೃತಿ ಕೈಗಾರಿಕೆಯ ಉತ್ಪಾದನೆಯ ಸಂಸ್ಕೃತಿಯಾಯಿತು. ಜಾನಪದ ಸಂಸ್ಕೃತಿ ಜನಸಾಮಾನ್ಯರ ಆಚಾರ ವಿಚಾರಗಳನ್ನು ಒಳಗೊಂಡಿದೆ. ಸಾಮಾನ್ಯವಾಗಿ ಶಿಷ್ಟ ಸಂಸ್ಕೃತಿ ಏಕ ಸಂಸ್ಕೃತಿಯನ್ನು ಎತ್ತಿ ಹಿಡಿಯುತ್ತದೆ. ಜಾನಪದ ಸಂಸ್ಕೃತಿ ಬಹು ಸಮಾಜ ಮತ್ತು ಬಹು ಸಂಸ್ಕೃತಿಯನ್ನು ಒಳಗೊಂಡಿರುತ್ತದೆ. ಜಾಗತೀಕರಣದ ಜನಪ್ರಿಯ ಸಂಸ್ಕೃತಿ ಈ ಎರಡೂ ಸಂಸ್ಕೃತಿಗಳನ್ನೂ ನಾಶಮಾಡುವ ಗುರಿ ಹೊಂದಿದೆ. ಸಂಸ್ಕೃತಿಯ ವ್ಯಾಪಾರೀಕರಣವೇ ಅದರ ಗುರಿ. ಜನಪ್ರಿಯ ಸಂಸ್ಕೃತಿ, ವೈವಿಧ್ಯತೆ ಇಲ್ಲದ ಏಕರೂಪತೆಯನ್ನು ತಂದು ಸಾಂಸ್ಕೃತಿಕ ವಸ್ತು ಉತ್ಪಾದನೆಯನ್ನು ಯಾಂತ್ರಿಕಗೊಳಿಸುತ್ತದೆ. ಡಿಸ್ಕ್‌ಗಳು, ಜನಪ್ರಿಯ ಸಂಗೀತ, ಹಾಲಿವುಡ್ ಫಿಲಂಗಳು, ಟೆಲಿವಿಷನ್ ಪ್ರೋಗ್ರಾಂಗಳು - ಸಾಂಸ್ಕೃತಿಕ ಉತ್ಪಾದನೆಗಳು ಏಕಕಾಲದಲ್ಲಿ ಬಹುರಾಷ್ಟ್ರೀಯ ಸಂಸ್ಕೃತಿ ಮತ್ತು ವಾಣಿಜ್ಯ ವಸ್ತುಗಳೂ ಆಗಿರುತ್ತವೆ. ಸಾಮ್ರಾಜ್ಯಶಾಹಿ ವ್ಯವಸ್ಥೆಯಲ್ಲಿ ಸಂಸ್ಕೃತಿಯ ಮೇಲೆ ಬಹಿರಂಗ ನಿಯಂತ್ರಣವಿತ್ತು. ಈಗ ಅಂಥ ನಿಯಂತ್ರಣ ಅಂತರಂಗವಾಗಿ, ಸಂಸ್ಕೃತಿಯ ವಿಷಯವಾಗಿ ಜನರು ತಮಗೆ ತಾವೇ ನಿಯಂತ್ರಿಸಿಕೊಳ್ಳಬೇಕಿದೆ. ಗ್ರಾಹಕನ ಅಭಿರುಚಿಗನುಗುಣವಾಗಿ ಸಾಂಸ್ಕೃತಿಕ ವಸ್ತುಗಳನ್ನು ಉತ್ಪಾದಿಸಬೇಕಿದೆ. ಜನಪ್ರಿಯ ಸಂಸ್ಕೃತಿಯಲ್ಲಿ ಗ್ರಾಹಕ ಮತ್ತು ಉತ್ಪಾದಕರ ಸಂಬಂಧ ಬಹಳ ನಿಕಟವಾಯಿತು. ಉತ್ಪಾದಕರಲ್ಲಿ ತೀವ್ರ ಸ್ಪರ್ಧೆ ಉಂಟಾಗಿ ಸಾಂಸ್ಕೃತಿಕ ಉತ್ಪಾದನೆಯ ಗುಣಮಟ್ಟವೂ ಹೆಚ್ಚುವಂತಾಯಿತು. ಜನಪ್ರಿಯ ಸಂಸ್ಕೃತಿಯ ಉತ್ಪಾದನೆಯ ವಸ್ತುಗಳು ಬಂಡವಾಳಗಾರ ರಾಷ್ಟ್ರಗಳಿಗೆ ಕೋಟಿ ಕೋಟಿ ಡಾಲರುಗಳನ್ನು ಗಳಿಸಿಕೊಡುತ್ತದೆ. ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಜನಪ್ರಿಯ ಸಂಸ್ಕೃತಿಯ ಸಂಗೀತ ಮತ್ತು ಫ್ಯಾಷನ್ ವಸ್ತುಗಳಿಗೆ ಅಧಿಕ ಬೇಡಿಕೆ ಇದೆ. ಇಟಲಿಯಲ್ಲಿ ಕಾರು ತಯಾರಿಸುವ ಕಾರ್ಖಾನೆಗಳಿಗಿಂತ ಫ್ಯಾಷನ್ ವಸ್ತುಗಳ ತಯಾರಿಕೆಯ ಕಾರ್ಖಾನೆಗಳು ಬೃಹತ್ತಾಗಿ ಬೆಳೆಯುತ್ತಿವೆ. ಜನಪ್ರಿಯ ಸಂಸ್ಕೃತಿಯ ಹೊಡೆತದಿಂದ ಶಿಷ್ಟ ಮತ್ತು ಜಾನಪದ ಸಂಸ್ಕೃತಿಗಳು ತಮ್ಮ ಐಡೆಂಟಿಟಿಯನ್ನು ಕಳೆದುಕೊಳ್ಳುತ್ತಿವೆ ಮತ್ತು ವಿಕೃತಗೊಳ್ಳುತ್ತಿವೆ.

ಯಾವ ದೇಶವಾದರೂ ಜಾಗತೀಕರಣವನ್ನು ಒಪ್ಪಲಿ, ಬಿಡಲಿ, ಯಾರ ಅರಿವಿಲ್ಲದೇ ಅದು ಹಬ್ಬುತ್ತದೆ. ಹೀಗೆ ತೀವ್ರವಾಗಿ ಹಬ್ಬಿ ಜಗತ್ತು ಒಂದು ಜಾಗತಿಕ ಹಳ್ಳಿಯಾಗಿ ರೂಪುಗೊಳ್ಳುತ್ತಿದೆ. ಜಾಗತೀಕರಣ ತನಗೆ ತಾನೇ ಪರಿಪೂರ್ಣವಾದುದಲ್ಲ. ಅದಕ್ಕೂ ಮಿತಿಗಳಿದ್ದು, ದೋಷಪೂರಿತವಾಗಿದೆ. ಜಾಗತೀಕರಣದ ಪ್ರತಿಪಾದನೆಯಲ್ಲಿ ಅಮೇರಿಕ ತನಗೆ ಅನುಕೂಲವಾಗುವಂತೆ ನಿಯಮಗಳನ್ನು ರೂಪಿಸಿಕೊಳ್ಳುತ್ತದೆ. ಎಂದೂ ತನ್ನ ಹಿತಕ್ಕೆ ಧಕ್ಕೆ ಒದಗದಂತೆ ನೋಡಿಕೊಳ್ಳುತ್ತದೆ. ಅದು ಮೇಲೆ ಬಹು ಸಮಾಜ ಮತ್ತು ಬಹು ಸಂಸ್ಕೃತಿಯ ತತ್ತ್ವ ಹೇಳುತ್ತಿದ್ದರೂ, ಅಂತರ್ಯದಲ್ಲಿ ಅಮೇರಿಕಾ ಯಜಮಾನಿಕೆಯ ಏಕ ಸಂಸ್ಕೃತಿಯನ್ನು ಸ್ಥಾಪಿಸುವುದೇ ಅದರ ಗುರಿಯಾಗಿರುತ್ತದೆ. ಅದು ಆರ್ಥಿಕ ಸಂಸ್ಕೃತಿಯ ಸಾಮ್ರಾಜ್ಯಶಾಹಿಯಾಗಿ ಬಡದೇಶಗಳ ರಾಜಕೀಯ ಸ್ವರೂಪವನ್ನೇ ಬದಲಿಸಿ, ಅವುಗಳನ್ನು ತಮ್ಮ ಸೂತ್ರಗಳಿಗೆ ಒಗ್ಗಿಸಿಕೊಳ್ಳುತ್ತದೆ. ಅಂತರರಾಷ್ಟ್ರೀಯ ಆರ್ಥಿಕ ಸಂಘ ಸಂಸ್ಥೆಗಳು ಮತ್ತು ಮಾರ್ಕೆಟ್ಟುಗಳ ಮೂಲಕ ಅಭಿವೃದ್ಧಿ ದೇಶಗಳಲ್ಲಿ ಏಕಸ್ವಾಮ್ಯದ ಹಕ್ಕನ್ನು ಪಡೆಯುತ್ತದೆ. ತಮ್ಮನ್ನು ವಿರೋಧಿಸುವ ದೇಶಗಳು ಮುಂದುವರೆಯದಂತೆ ನೋಡಿಕೊಳ್ಳುತ್ತದೆ. ಅಮೇರಿಕ ಜಗತ್ತಿಗೇ ದೊಡ್ಡಣ್ಣನಂತೆ ವರ್ತಿಸುತ್ತಿರುವುದಕ್ಕೆ ಇರಾಕ್, ಯುಗೋಸ್ಲಾವಿಯಾ ಮತ್ತಿತರ ರಾಷ್ಟ್ರಗಳಲ್ಲಿ ಅದು ನಡೆಸುತ್ತಿರುವ ಚಟುವಟಿಕೆಗಳೇ ಸಾಕ್ಷಿ. ಅಲ್ಲದೆ ಭಾರತದ ಮೇಲೆ ಹೊರಿಸಿರುವ ಆರ್ಥಿಕ ದಿಗ್ಬಂಧನವೂ ಹೊರತಲ್ಲ. ಅದಕ್ಕೆ ಜಪಾನ್, ಬ್ರಿಟನ್ ಮತ್ತಿತರ ದೇಶಗಳೂ ಬೆಂಬಲವಾಗಿವೆ. ಜಾಗತೀಕರಣದ ಆರ್ಥಿಕ ಸಂಸ್ಕೃತಿಯ ಮುಖವಾಡದಲ್ಲಿ ಅನ್ಯ ದೇಶದ ಸಂಸ್ಕೃತಿಯ ನಾಶವನ್ನೂ ಮಾಡುತ್ತಿದೆ.

ಜಾಗತೀಕರಣಕ್ಕೆ ಒಪ್ಪಿದ ಅನೇಕ ರಾಷ್ಟ್ರಗಳು ಯಾವ ಯಶಸ್ಸನ್ನೂ ಕಾಣದೆ ವಿಫಲವಾಗಿವೆ. ಇದರಿಂದಾಗಿ ಕಾರ್ಮಿಕರು ಮತ್ತು ಶ್ರೀಸಾಮಾನ್ಯರ ಜೀವನಾವಶ್ಯಕ ವಸ್ತುಗಳ ಬೆಲೆ ಅಧಿಕಗೊಂಡು ಸಂಕಷ್ಟಗಳಿಂದ ನರಳುತ್ತಿದ್ದಾರೆ. ಜನಾಂಗೀಯ ಸಂಘರ್ಷಗಳಿಂದ ದೊಡ್ಡ ದೊಡ್ಡ ದೇಶಗಳೇ 'ಸ್ಲಂ'ಗಳಾಗಿವೆ. ಜನಪ್ರಿಯ ಸಂಸ್ಕೃತಿಯ ವಸ್ತುಗಳ ಪ್ರಭಾವದಿಂದ ತರುಣ ಜನಾಂಗ ದಾರಿತಪ್ಪಿ ಸಂಪ್ರದಾಯದ ಧಾರ್ಮಿಕ ಮತ್ತು ಸಾಂಸ್ಕೃತಿಕ ಜೀವನದ ವಿರುದ್ಧ ತಿರುಗಿಬಿದ್ದಿದ್ದಾರೆ. ಜಾಗತೀಕರಣದ ದುಷ್ಪರಿಣಾಮಗಳು ಗಂಭೀರವಾಗಿ ತೀವ್ರ ಸ್ವರೂಪ ಹೊಂದುತ್ತಿವೆ. ತಮ್ಮ ಧಾರ್ಮಿಕ ಮತ್ತು ಸಾಂಸ್ಕೃತಿಕ ಮೌಲ್ಯಗಳಿಗೆ ಒದಗಿರುವ ಧಕ್ಕೆಯನ್ನು ಸಹಿಸದ ಇಸ್ಲಾಂ ಧರ್ಮೀಯ ಮೂಲಭೂತವಾದಿಗಳು ಜಾಗತೀಕರಣದ ವಿರುದ್ಧ ತಿರುಗಿಬಿದ್ದಿದ್ದಾರೆ. ಧಾರ್ಮಿಕ ಅಶಿಸ್ತನ್ನು ಸಹಿಸದ ಕ್ರಿಶ್ಚಿಯನ್ ಮೂಲಭೂತವಾದಿಗಳೂ ಸುಮ್ಮನೆ ಕೈ ಕಟ್ಟಿ ಕುಳಿತಿಲ್ಲ; ತಮ್ಮ ಸಂಸ್ಕೃತಿಗಳು ಪಲ್ಲಟಗೊಳ್ಳುತ್ತಿರುವ ಭಯದಿಂದ ತೀವ್ರ ಹೋರಾಟ ನಡೆಸುತ್ತಿದ್ದಾರೆ. ಇಂಥ ಹೋರಾಟ ಅಮೆರಿಕಾಕ್ಕೆ ತಲೆನೋವಾಗಿದೆ. ಮೂಲ ಭೂತವಾದಿಗಳು ಸಶಸ್ತ್ರ ಪಡೆಯ ಉಗ್ರಗಾಮಿಗಳ ಗುಂಪನ್ನೇ ಪೋಷಿಸುತ್ತಿದ್ದಾರೆ. ಅಮೆರಿಕ ಜಾಗತೀಕರಣದ ಸಾಮ್ರಾಜ್ಯಶಾಹಿಯೊಂದಿಗೆ ಹೋರಾಟ ನಡೆಸಲು ಗೆರಿಲ್ಲಾ ತಂತ್ರವನ್ನೇ ಬಳಸುತ್ತಿದೆ. ಜಗತ್ತಿನಲ್ಲಿ ಧರ್ಮ ವಿರೋಧಿ ಚಟುವಟಿಕೆಗಳು ಹೆಚ್ಚುತ್ತಿರುವುದರಿಂದ ಜಗತ್ತು ಪ್ರಳಯವನ್ನು ಕಾಣಬೇಕಾದೀತೆಂದು ಮೂಲಭೂತ ವಾದಿಗಳು ಎಚ್ಚರಿಸುತ್ತಿದ್ದಾರೆ. ಜಾಗತೀಕರಣದ ವಿರುದ್ಧ ತೀವ್ರ ಹೋರಾಟ ನಡೆಸಿದ ಚಳುವಳಿಗಾರರೆಂದರೆ ಮೆಕ್ಸಿಕೋದ ಚೈಪಾಸ್ ಪ್ರಾಂತ್ಯದ ಜಪಾಟಿಸ್ಟ್ ಪಂಥದ ಉಗ್ರಗಾಮಿಗಳು ಮತ್ತು ಜಪಾನಿನ ಓಂಷಿಂ ಕ್ರಿಯಾ ಪಂಥದ ಉಗ್ರಗಾಮಿಗಳು. ಉಗ್ರಗಾಮಿಗಳ ಹೋರಾಟದಲ್ಲಿ ಭಾರತವೂ ಹಿಂದೆ ಬಿದ್ದಿಲ್ಲ. ಕರ್ನಾಟಕದಲ್ಲಿಯೂ ರೈತ ಚಳುವಳಿಗಳು ಕೆಲವೊಮ್ಮೆ ಶಾಂತವಾಗಿ, ಕೆಲವೊಮ್ಮೆ ಉಗ್ರ ಸ್ವರೂಪದಲ್ಲಿ ಜಾಗತೀಕರಣದ ವಿರುದ್ಧ ನಡೆಯುತ್ತಾ ಬಂದಿವೆ. ದೋಷಪೂರಿತ ಬೀಜಗಳ ಸರಬರಾಜಿನಿಂದ ಹತ್ತಿ ಬೆಳೆ ನಾಶವಾಗಿ, ನಷ್ಟ ಅನುಭವಿಸಿದ ರೈತರು ರಾಯಚೂರು, ಬಿಜಾಪುರ ಜಿಲ್ಲೆಗಳಲ್ಲಿ ಆತ್ಮಹತ್ಯೆ ಮಾಡಿಕೊಂಡರು. ಶಿರಾದ ಶೇಂಗಾ ಮಾರುಕಟ್ಟೆಯಲ್ಲಿ ನಡೆದ ಸಾವುಗಳು, ಬೀಜರಹಿತ ಹತ್ತಿ ಬೆಳೆಯ ನಾಶ- ಮುಂತಾದವು ರೈತ ಸಂಘದ ಪ್ರತಿಭಟನೆಗೆ ಸಾಕ್ಷಿ. ಜಾಗತೀಕರಣ ಜಗತ್ತಿನಾದ್ಯಂತ ತೀವ್ರ ಪ್ರತಿಭಟನೆಯನ್ನು ಎದುರಿಸುತ್ತಿದೆ. ಆದರೆ ಆಡಳಿತ ನಡೆಸುವ ನವವಸಾಹತುಶಾಹಿಗಳು, ಜಾಗತೀಕರಣ ಯೋಜನೆಗಳಿಗೆ ಬೆಂಬಲವಾಗಿ ನಿಂತು ಎಲ್ಲಾ ಚಳುವಳಿಗಳನ್ನೂ ಮಿಲಿಟರಿ ಸಹಾಯದಿಂದ ಬಗ್ಗು ಬಡಿಯುತ್ತಿವೆ.

### ಸಂಭವಿಸಿರುವ ಕೇಡು

ಸಮಾಜಶಾಸ್ತ್ರಜ್ಞರು ಈಗಾಗಲೇ ಜಾಗತೀಕರಣದ ಕೇಡುಗಳನ್ನು ಅರಿತು ಜನಗಳ ಗಮನಕ್ಕೆ ತಂದಿದ್ದಾರೆ: ಅನಕ್ಷರಸ್ಥ ಕಾರ್ಮಿಕರ ಸಂಖ್ಯೆ ಅಧಿಕಗೊಳ್ಳುತ್ತದೆ, ಸ್ಥಳೀಯ ಸಂಸ್ಕೃತಿಗಳ ನಾಶ, ಅದರಲ್ಲಿಯೂ ಬುಡಕಟ್ಟು ಜನಾಂಗಗಳ ಸಂಸ್ಕೃತಿಗಳು ಹೇಳ ಹೆಸರಿಲ್ಲವಾಗುತ್ತವೆ. ಅಭಿವೃದ್ಧಿ ಹೊಂದುತ್ತಿರುವ ದೇಶಗಳ ಪ್ರತಿಭಾವಂತರು ಪಲಾಯನ ಮಾಡುವುದರಿಂದ ಬೌದ್ಧಿಕ ದಾರಿದ್ರ್ಯ, ವಲಸಿಗರ ಸಮಸ್ಯೆಗಳು, ಪ್ರಕೃತಿ ಸಂಪತ್ತಿನ ಲೂಟಿಯಿಂದ ಪರಿಸರ ಮಾಲಿನ್ಯ, ಫಲವಾಗಿ ತೀವ್ರವಾದ ಸಾಂಕ್ರಾಮಿಕ ರೋಗಗಳು, ಶಿಕ್ಷಣ ವೆಚ್ಚ ಅಧಿಕವಾಗಿ ಬಡವರು ಮತ್ತು ಮಧ್ಯಮ ವರ್ಗ ಉನ್ನತ ಶಿಕ್ಷಣದಿಂದ ವಂಚಿತರಾಗಿ ಹೊಸ ವರ್ಗ ಸಮಸ್ಯೆ ಸೃಷ್ಟಿ. ಪುರುಷರ ಕೈ ಮೇಲಾಗಿ ಸ್ತ್ರೀಯರ ಪ್ರಭಾವ ಕುಗ್ಗಿ ಶೋಷಣೆಗೆ ತುತ್ತಾಗುವರು. ಯುವ ಜನಾಂಗದಲ್ಲಿ ಹಿಂಸಾ ಪ್ರವೃತ್ತಿ ಹೆಚ್ಚುವುದು, ಜನಪ್ರಿಯ ಸಂಸ್ಕೃತಿಯ ಏಕರೂಪದ ಯಾಂತ್ರಿಕತೆಯಿಂದ ಮಾನಸಿಕ ಕುಗ್ಗುವಿಕೆಗೆ ಜನರು ಬಲಿಯಾಗುವರು, ಗಂಡು ಹೆಣ್ಣಿನ ಪ್ರೀತಿ ವಿಶ್ವಾಸ ಕೇವಲ ವ್ಯಾಪಾರೀಕರಣಗೊಳ್ಳುವುದು, ಕುಟುಂಬಗಳ ಸೌಹಾರ್ದ ಮುರಿದು ಬೀಳುವುದು, ಮಾನವ-ಮಾನವರ ಸಂಬಂಧ ನಾಶವಾಗುವುದು, ಮನುಷ್ಯನೂ ವ್ಯಾಪಾರದ ವಸ್ತುವಾಗಿಬಿಡುವನು, ಜಾಗತೀಕರಣದ ಹೆಸರಿನಲ್ಲಿ ಮತ್ತೆ ಸಾಮ್ರಾಜ್ಯಶಾಹಿ ತಲೆ ಎತ್ತುವುದು ಇತ್ಯಾದಿ.

ಅದರಲ್ಲಿಯೂ ಕಲೆ, ಸಾಹಿತ್ಯ, ಸಂಗೀತ ಮತ್ತು ಸಂಸ್ಕೃತಿಗಳ ಮೇಲೆ ಜಾಗತೀಕರಣ ತೀವ್ರ ಪರಿಣಾಮ ಬೀರುತ್ತದೆ. ಪ್ರತಿಭಾವಂತ ಬರಹಗಾರರ ಸೃಜನಶೀಲ ಶಕ್ತಿಯನ್ನು ಜನಪ್ರಿಯ ಸಾಹಿತ್ಯ ಸೃಷ್ಟಿಗೆ ಒಗ್ಗಿಸಿ, ಗ್ರಾಹಕ ಓದುಗರ ಅಭಿರುಚಿಗೆ ತಕ್ಕಂತೆ ಸಾಹಿತ್ಯ ಉತ್ಪಾದಕರನ್ನಾಗಿಸುತ್ತದೆ. ಸಾಹಿತ್ಯವು ಮಾರುಕಟ್ಟೆಯ ಸರಕಾಗುತ್ತದೆ. ಅಂತರರಾಷ್ಟ್ರೀಯ ಜೀವನಮಟ್ಟ ರೂಪಿಸಿಕೊಳ್ಳುವ ಪ್ರಲೋಭನೆಯಿಂದ ಬರಹಗಾರರು ಮತ್ತು ಕಲಾವಿದರು ವಿದೇಶಿ ಏಜಂಟರಾಗಿಬಿಡುವ ಸಂಭವವೇ ಹೆಚ್ಚು. ವಿದೇಶಿ ಹಣ ಪಡೆದು ಗುಪ್ತ ಕಾರ್ಯಗಳಲ್ಲಿ ತೊಡಗುವ ಲೇಖಕರ ಸಂಖ್ಯೆ ಹೆಚ್ಚುತ್ತಿದೆ ಎಂಬ ಮಾತಿದೆ. ದೇಶಭಕ್ತಿಯ ಮುಖವಾಡದಲ್ಲಿ ದೇಶದ್ರೋಹ ಬೌದ್ಧಿಕ ವಲಯದಲ್ಲಿ ಹೆಚ್ಚುತ್ತಿರುವುದಂತೂ ಅಕ್ಷಮ್ಯ ಅಪರಾಧವೇ ಸರಿ. ಇಂಥ ಇಬ್ಬಂದಿತನದ ಬದುಕಿನಿಂದ ಬರಹಗಾರರು ತಮ್ಮ ಬದುಕು ಮತ್ತು ಬರಹಗಳ ಮುಖಬೆಲೆಯನ್ನು ಕಳೆದುಕೊಳ್ಳುತ್ತಾರೆ. ಬಂಡವಾಳ ಪರವಾದ ಬರಹಗಾರರ ಸಮಾಜವಾದದ ಮಾತುಗಳು, ಬಂಡಾಯ-ದಲಿತರ ದುರಾಸೆಯ ಸಂಪತ್ತಿನ ಗಳಿಕೆ ಸಾರ್ವಜನಿಕ ಟೀಕೆಯ ವಸ್ತುವಾಗುತ್ತಿವೆ. ಕನ್ನಡ ಶ್ರೇಷ್ಠ ಬರಹಗಾರರು ಮತ್ತು ಶ್ರೇಷ್ಠ ಕೃತಿಗಳು ಅಂತರರಾಷ್ಟ್ರೀಯ ಸಾಹಿತ್ಯ ಮಾರುಕಟ್ಟೆಗೆ ಅರ್ಹವಾಗಲು ಸಾಧ್ಯವೇ ? ಎಂಬ ಪ್ರಶ್ನೆ ಕಾಡುತ್ತದೆ. ಬರಹಗಾರರ ಬೌದ್ಧಿಕ ಹಿಪೋಕ್ರಸಿಯಿಂದ ನಿಷ್ಠಾವಂತ ಓದುಗರು ಬೇಸತ್ತಿದ್ದಾರೆ.

**ಪ್ರೊ॥ ಕೆ. ಜಿ. ನಾಗರಾಜಪ್ಪ**

೯೮ ಇ, ೧೫ನೇ ಮುಖ್ಯರಸ್ತೆ, ಇಂಡಸ್ಟ್ರೀ ಅಂಡ್ ಕಾಮರ್ಸ್ ಲೇ ಔಟ್, ವಿಜಯನಗರ, ಬೆಂಗಳೂರು - ೪೦

## ಶ್ರದ್ಧಾಂಜಲಿ



ಶ್ರೀ ದು. ನಿಂ. ಬೆಳಗಲಿಯವರು (೧೯೩೧-೨೦೦೦) ಶತಮಾನವೊಂದು ಮುಗಿದುಬಿಡಲಿ ಎಂದು ಕಾಯುತ್ತಿದ್ದವರಂತೆ, ಜನವರಿ ಮೊದಲವಾರದಲ್ಲಿ ಏನೋ ತುರ್ತು ಕಾರ್ಯ ನೆನಪಿಸಿಕೊಂಡವರಂತೆ ಎದ್ದು ನಡೆದೇಬಿಟ್ಟರು.

ಕಾದಂಬರಿ, ಸಣ್ಣಕಥೆ, ಪ್ರಬಂಧ, ಮಕ್ಕಳ ಕಥೆ- ಈ ಎಲ್ಲ ಕ್ಷೇತ್ರಗಳಲ್ಲಿ ಕ್ರಿಯಾಶೀಲರಾಗಿ ತೊಡಗಿಕೊಂಡಿದ್ದ ಬೆಳಗಲಿಯವರು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ ಸೇರಿದಂತೆ ಹಲವು ಪ್ರಶಸ್ತಿಗಳನ್ನು ಗಳಿಸಿದವರು. ಮೆಲು ಮಾತಿನ ಸರಳ ಜೀವಿ. ಬಡಜನರ ಪರ. ಬದುಕಿನ ಒಳಿತನ್ನು ಗ್ರಹಿಸುವ ಒಲವು. ದೇವದಾಸಿಯರ ಪುನರ್ವಸತಿಯಂಥ ಸಾಮಾಜಿಕ ಕಳಕಳಿಯ ಕಾರ್ಯದಲ್ಲಿ ಆಸಕ್ತಿ. ಒಳ್ಳೆಯ ಮಾಸ್ತರ, ರಾಷ್ಟ್ರೀಯ ಪ್ರಶಸ್ತಿ ಪಡೆದ ಶಿಕ್ಷಕ. ಅಸ್ತಮಾ ಜನ್ಮಕ್ಕಂಟಿದ ಮಿತ್ರ. ಇತ್ತೀಚೆಗೆ ಜೊತೆಗೂಡಿದ್ದು ರಕ್ತ ಕ್ಯಾನ್ಸರ್.

ನವಕರ್ನಾಟಕ ಪ್ರಕಟಿಸಿರುವ ಅವರ 'ಮೌನಕ್ರಾಂತಿ' ದೂರದರ್ಶನಕ್ಕೆ ಧಾರಾವಾಹಿಯಾಗಿ ಚಿತ್ರಣಗೊಳ್ಳಲು ಆಯ್ಕೆಯಾಗಿರುವ ವಿಷಯ ತಿಳಿಸಿದ್ದರು. ಬೆಂಗಳೂರಿಗೆ ಬಂದಾಗಲೆಲ್ಲ ನವಕರ್ನಾಟಕಕ್ಕೆ ಭೇಟಿ, ಚಹಾ ಸೇವನೆ, ಹಿಂದಿ-ಮರಾಠಿ ಸಾಹಿತ್ಯ ಕ್ಷೇತ್ರದಲ್ಲಿನ ಬೆಳವಣಿಗೆಯ ಚರ್ಚೆ ತಪ್ಪದೆ ನಡೆಯಬೇಕು. ಮರಾಠಿಯಿಂದ 'ಅಕ್ರಮ ಸಂತಾನ' ಹಾಗೂ 'ಗಬಾಳ'ಗಳಂಥ ದಲಿತ ಆತ್ಮಕಥೆಗಳನ್ನು ಸಮರ್ಥ ರೀತಿಯಲ್ಲಿ ಅನುವಾದಿಸಿಕೊಟ್ಟರು. ನವಕರ್ನಾಟಕಕ್ಕಾಗಿ ಕೊನೆಯದಾಗಿ ಅನುವಾದಿಸಿದ್ದು ಭೀಷ್ಮ ಸಹಾನಿಯವರ ಮಹತ್ವದ ಕೃತಿಯಾದ 'ಮೈಯಾ ದಾಸ್ ಕಿ ಮಾಡಿ'. ಇದರಲ್ಲಿ ಬರುವ ಪಂಜಾಬಿ ಪದ್ಯಗಳನ್ನು ಬೀದರಿನಲ್ಲಿರುವ ತಮ್ಮ ಪಂಜಾಬಿ ಮಿತ್ರರ ಸಹಕಾರ ಪಡೆದು ಅನುವಾದಿಸುವ ಪ್ರಯತ್ನ ನಡೆಸಿದ್ದರು. ಅನುವಾದ ಕನ್ನಡಕ್ಕೆ ಒಪ್ಪುವಂತಿರಬೇಕು, ಮನಸ್ಸಿಗೆ ತೃಪ್ತಿ ತರುವಂತಿರಬೇಕು ಎಂಬುದು ಅವರ ನಿಲುವು. 'ಹೊಸತು' ಪತ್ರಿಕೆಗೆ ಸ್ಪೇನಿನ ಒಂದು ಮೌಲಿಕವಾದ ಜಾನಪದ ಕತೆಯನ್ನು ಅನುವಾದಿಸಿಕೊಟ್ಟಿದ್ದು ಇನ್ನೂ ಹಲವನ್ನು ದೊರಕಿಸಿಕೊಡುವ ಆಶ್ವಾಸನೆಯನ್ನು ನೀಡಿದ್ದರು. ನವಕರ್ನಾಟಕದ ಸನ್ಮಿತ್ರ, ಹಿತೈಷಿ ದು. ನಿಂ. ಬೆಳಗಲಿಯವರಿಗೆ ನಮನ.

# ಅರ್ಥಶಾಸ್ತ್ರವನ್ನು ಮಾನವೀಯಗೊಳಿಸಿದ ಅಮರ್ತ್ಯ ಸೇನ್

**ನೊಬೆಲ್** ಪ್ರಶಸ್ತಿ ವಿಜೇತ ಅಮರ್ತ್ಯ ಸೇನ್‌ರವರು ಅರ್ಥಶಾಸ್ತ್ರಕ್ಕೆ ನೀಡಿದ ಕೊಡುಗೆ ಒಂದು ರೀತಿಯಲ್ಲಿ ಅನನ್ಯವಾದುದೆಂದೇ ಹೇಳಬೇಕು. ಅರ್ಥಶಾಸ್ತ್ರದಲ್ಲಿ ಎದುರಾಗುವ ಕೆಲವು 'ಅಸಾಧ್ಯತೆ'ಗಳನ್ನು ಪರಿಹರಿಸುವಲ್ಲಿ ನೈತಿಕತೆಯನ್ನು ಮತ್ತೆ ಒದಗಿಸಿಕೊಡುವ ಮೂಲಕ ಅವರು ಆ ಶಾಸ್ತ್ರಕ್ಕೆ ಮಾನವೀಯತೆಯನ್ನು ತುಂಬಿದುದು ಅನ್ಯಾದೃಶವಾದುದು. ತನ್ಮೂಲಕ ಅವರು ಜನಹಿತ ಗುರಿಯ ಅರ್ಥಶಾಸ್ತ್ರದಲ್ಲಿ ಸರ್ವವ್ಯಾಪಿಯಾಗಿ ಬೆಳೆದಿದ್ದ ನಿರಾಕರಣ ಮನೋಭಾವವನ್ನು ತೊಡೆದು ಹಾಕಿದರು. ಬೆಳವಣಿಗೆಯ ಅರ್ಥಶಾಸ್ತ್ರದಲ್ಲಿ ಕ್ರಿಯಾ ಶೀಲತೆಗೆ ಸಹಜ ಸೈದ್ಧಾಂತಿಕ ಅಡಿಪಾಯ ಹಾಕಿಕೊಟ್ಟರು. ಮಾನವ ಕಲ್ಯಾಣಕ್ಕಾಗಿ ಯಥೋಚಿತ ಕ್ರಮಗಳನ್ನು ರೂಪಿಸಿ ಕೊಟ್ಟರು. ನೈತಿಕ ಆಧಾರಸೂತ್ರಗಳು, ಪ್ರಾಮಾಣಿಕ ಸಿದ್ಧಾಂತ, ಸಂಕ್ಷೇಮದ ಸಮಗ್ರ ಹಾಗೂ ಅಂತರ್ವಿಷ್ಟ ಮಾಪನ, ಸಾರ್ವಜನಿಕರಿಗೆ (ಪೌರ ಸಮಾಜಕ್ಕೂ, ರಾಜ್ಯಕ್ಕೂ) ಕ್ರಿಯಾಶೀಲರಾಗುವಂತೆ ಮನವಿ - ಇವೆಲ್ಲವುಗಳನ್ನೂ ಒಂದುಗೂಡಿಸಿದುದು ಅಮರ್ತ್ಯ ಸೇನ್‌ರ ಸಾಧನೆಯ ಹೆಗ್ಗಳಿಕೆ. ಈ ಎಲ್ಲ ಸ್ವರೂಪಗಳನ್ನೂ ಸ್ಥೂಲವಾಗಿ ವಿವೇಚಿಸುವುದು ಈ ಕಿರುಲೇಖನದ ಉದ್ದೇಶ.

ನೈತಿಕ ತತ್ವಶಾಸ್ತ್ರದಿಂದಲೇ ಉದ್ಭವಿಸಿದ ಅರ್ಥಶಾಸ್ತ್ರ ಬಹುಬೇಗನೆಯೇ ಈ ಶಾಸ್ತ್ರಕ್ಕೂ ನೈತಿಕ ಭಾವನೆಗಳಿಗೂ ಏನೇನೂ ಸಂಬಂಧವಿಲ್ಲ, ಇದೊಂದು ತೀರ ಲೌಕಿಕವಾದ ಶಾಸ್ತ್ರ ಎಂಬ ಕುಖ್ಯಾತಿಗೊಳಗಾಯಿತು. ಮಾಲ್ಥಸ್‌ನ ''ಜನಸಂಖ್ಯೆಯ ಕುರಿತು ಒಂದು ಪ್ರಬಂಧ'' ಎಂಬ ಗ್ರಂಥವನ್ನು ಓದಿದನಂತರ ಕಾರ್ಲೈಲ್ ರಾಜಕೀಯ ಅರ್ಥಶಾಸ್ತ್ರವನ್ನು 'ಒಂದು ಉತ್ಸಾಹಶೂನ್ಯ ವಿಜ್ಞಾನ'ವೆಂದು ಕರೆದಿದ್ದ. ಆನಂತರದ ವರ್ಷಗಳಲ್ಲಿ ಅರ್ಥಶಾಸ್ತ್ರ ಪರಿಶೀಲಿಸಿದ ಕಾಳಜಿಗಳು ಈ ನಿರುತ್ಸಾಹಕರ ಖ್ಯಾತಿಗೆ ಮತ್ತಷ್ಟು ಇಂಬು ಕೊಟ್ಟವು. ಜೆ. ಎಸ್. ಮಿಲ್ ರಾಜಕೀಯ ಅರ್ಥಶಾಸ್ತ್ರ ಕ್ಷೇತ್ರ ಪ್ರವೇಶಿಸಿದಾಗಲೂ, ಅದು ಸದ್ಭಾವದ ಉಲ್ಲಾಸದ ವ್ಯಕ್ತಿಗಳನ್ನು ಆಕರ್ಷಿಸದಂಥ ವಿಜ್ಞಾನ ಎಂದೇ ಭಾವಿಸಲಾಗಿತ್ತು. ಹಾಗಾಗಿ ಮಿಲ್‌ನ ಸಮಕಾಲೀನನೊಬ್ಬ ಹೀಗೆ ಬರೆದಿದ್ದ (ಅಮರ್ತ್ಯ ಸೇನ್‌ರೂ ನೈತಿಕತೆಯ ಕುರಿತ ತಮ್ಮ ಗ್ರಂಥದಲ್ಲಿ ಈ ಮಾತುಗಳನ್ನು ಉದ್ಧರಿಸಿದ್ದಾರೆ):

*ಜಾನ್ ಸ್ಟುವರ್ಟ್ ಮಿಲ್‌ರು*
*ಬಹು ಭಾರಿ ಸಂಕಲ್ಪ ಶಕ್ತಿಯಿಂದ*
*ತಮ್ಮ ಸಹಜ ಸೌಹಾರ್ದತೆಯನ್ನೂ ಅದುಮಿಟ್ಟು*
*ಬರೆದರು ತಮ್ಮ ''ರಾಜಕೀಯ ಅರ್ಥಶಾಸ್ತ್ರ ಸೂತ್ರಗಳು'' ಗ್ರಂಥವ.*

ಕಳೆದ ನೂರು ವರ್ಷಗಳಲ್ಲಂತೂ ಅರ್ಥಶಾಸ್ತ್ರ ವಲಯದಲ್ಲಿ ಅತ್ಯಂತ ಕೆಡುಕಿನ ಸಂಗತಿಗಳು ನಡೆದಿವೆ. ತಮ್ಮ ವಿಷಯವನ್ನು 'ವಸ್ತುನಿಷ್ಠ' ಹಾಗೂ 'ಧನಾತ್ಮಕ' ವಿಜ್ಞಾನವನ್ನಾಗಿ ಮಾಡಲು ಯತ್ನಿಸುತ್ತ ಅರ್ಥಶಾಸ್ತ್ರಜ್ಞರು [illegible] [illegible]ಪುಷ್ಕೃತ ಪ್ರಮೇಯಗಳನ್ನು ಅನುಸರಿಸಿದ [illegible]ದರೆ [illegible] ಆ ವಿಜ್ಞಾನವನ್ನು ಅಮಾನವೀಕರಿಸಿ ಅದನ್ನು ನಿಜಕ್ಕೂ ಒಂದು ನಿರುತ್ಸಾಹದಾಯಕ ವಿಜ್ಞಾನವನ್ನಾಗಿ ಮಾಡಿತು. ಆ ಹಲವಾರು ಪ್ರಮೇಯಗಳಲ್ಲಿ ಮೂರು ಮುಖ್ಯವಾದುವು. ಅವುಗಳನ್ನಾಧರಿಸಿಯೇ 'ನವ ಅಭಿಜಾತ ಅರ್ಥಶಾಸ್ತ್ರ'ದ ಪ್ರಧಾನ ಹೊನಲು ನಿರ್ಮಿತವಾಗಿರುವುದು. ಅವೆಂದರೆ,

1. ಪ್ರತಿಯೊಬ್ಬ ವ್ಯಕ್ತಿಯೂ ಸ್ವಾರ್ಥದಿಂದ ಪ್ರೇರಿತನಾದವ. ಇಂಥ ಸ್ವಾರ್ಥ ವ್ಯಕ್ತಿ ಯಾವತ್ತೂ ತನ್ನ ಗಳಿಕೆಗಳನ್ನು ಗರಿಷ್ಠಗೊಳಿಸಲು, ತನ್ನ ಯತ್ನವನ್ನು ಕನಿಷ್ಠಗೊಳಿಸಲು ಯತ್ನಿಸುತ್ತಾನೆ (ರ್‍ಯಾಷನಾಲಿಟಿ ಆರ್ಗ್ಯುಮೆಂಟ್ ಅಥವಾ ತರ್ಕಸಮ್ಮತ ವಾದ).
2. ಅರ್ಥಶಾಸ್ತ್ರವೊಂದು ಧನಾತ್ಮಕ ವಿಜ್ಞಾನ. ಪ್ರಮಾಣಕ ಅಥವಾ ನೈತಿಕ ಅಥವಾ ಮೌಲ್ಯಯುತ ತೀರ್ಮಾನಗಳಿಗೆ ಇದರಲ್ಲಿ ಸ್ಥಳವಿಲ್ಲ (ಮೌಲ್ಯಮುಕ್ತ ವಾದ; ವ್ಯಾಲ್ಯೂ-ಫ್ರೀ ಆರ್ಗ್ಯುಮೆಂಟ್).
3. ಜನರ ವ್ಯಕ್ತಿಗತ ಸಂಕ್ಷೇಮಗಳ ಪರಸ್ಪರ ಹೋಲಿಕೆ ಸಲ್ಲ. ಏಕೆಂದರೆ ಸಂಕ್ಷೇಮಗಳು ಜನರ ವ್ಯಕ್ತಿನಿಷ್ಠ ಭಾವನೆಗಳನ್ನು ಆಧರಿಸಿರುತ್ತವೆ. (ಸಂಕ್ಷೇಮ ಹೋಲಿಕೆ ವಾದ - ವೆಲ್‌ಫೇರ್ ಕಂಪಾರಿಸನ್ ಆರ್ಗ್ಯುಮೆಂಟ್).

ಅಮರ್ತ್ಯ ಸೇನ್‌ರ ಮಹೋನ್ನತ ಕಾಣಿಕೆಯೆಂದರೆ ಈ ಮೂರು ಪ್ರಮೇಯಗಳು ಎಷ್ಟು ಪೊಳ್ಳು ಹಾಗೂ ಆಳವಿಲ್ಲದವು ಎಂಬುದನ್ನು ತೋರಿಸಿಕೊಟ್ಟುದು. ಹಾಗೆ ಮಾಡಿ ಅವರು ಅರ್ಥಶಾಸ್ತ್ರ ಸಿದ್ಧಾಂತದ ಅಡಿಪಾಯವನ್ನು ವಿಶಾಲಗೊಳಿಸಿದರು. ಅದಕ್ಕೆಂದು ಬಹುವಿಸ್ತಾರದ ಚೌಕಟ್ಟನ್ನು ಒದಗಿಸಿದರು. ಅದರಲ್ಲಿ 'ಸಂಕ್ಷೇಮ ಅರ್ಥಶಾಸ್ತ್ರ' ಹಾಗೂ 'ಬೆಳವಣಿಗೆಯ ಅರ್ಥಶಾಸ್ತ್ರ' ಎರಡೂ ಮೇಳೈಸಿ ಸಾರ್ವತ್ರಿಕ ಆರ್ಥಿಕ ವಿಜ್ಞಾನದ ಅವಿಭಾಜ್ಯ ಅಂಗಗಳಾದವು.

ಅರ್ಥಶಾಸ್ತ್ರದ 'ತರ್ಕಸಮ್ಮತ ವಾದ'ದ ಅಡಿಪಾಯ ಎಷ್ಟು ಸಂಕುಚಿತ ಎಂಬುದನ್ನು ಅಮರ್ತ್ಯ ಸೇನ್ ಲಘು ಪರಿಹಾಸ್ಯ ಹಾಗೂ ಪ್ರಬಲ ತಾತ್ವಿಕ ಆಧಾರಗಳೊಂದಿಗೆ ಬಯಲು ಮಾಡಿದರು. ತಮ್ಮ ಆರಂಭಿಕ ಬರವಣಿಗೆಗಳಲ್ಲೇ ಅವರು ಈ 'ತರ್ಕಸಮ್ಮತ ವಾದ' ಪ್ರಮೇಯವನ್ನು ತೀವ್ರವಾಗಿ ವಿರೋಧಿಸಿದರು. ''ಸಾಂಪ್ರದಾಯಿಕ ಅರ್ಥಶಾಸ್ತ್ರದಲ್ಲಿ ಸುತ್ತಮುತ್ತಲಿಂದ ಪ್ರತ್ಯೇಕಗೊಂಡು ದ್ವೀಪವಾಸಿಯಂತಿರುವ ಸ್ವಾರ್ಥ ಸಾಧಕ ಆರ್ಥಿಕ ವ್ಯಕ್ತಿಯ ಬಗೆಗೆ ಬಹಳಷ್ಟು ಹೇಳಲಾಗಿದೆ. ಇವನು ಬೇರೆಲ್ಲ ಪರಿಗಣನೆಗಳಿಂದಲೂ ತನ್ನನ್ನು ಪ್ರತ್ಯೇಕಗೊಳಿಸಿಕೊಂಡು ಸ್ವಹಿತವನ್ನಷ್ಟೆ ಸಾಧಿಸುವಂಥವನು ಎಂಬ ಕಲ್ಪನೆ ಇದೆ. ಆದರೆ ಸಾಮಾಜಿಕ ಆಯ್ಕೆಯ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳಲು ಇಂಥ ಭಾವನೆ ಎಷ್ಟು ಮಾತ್ರವೂ ಉಪಯುಕ್ತವಲ್ಲ'' ಎಂದು ಅಮರ್ತ್ಯ ಸೇನ್ ಭಾವಿಸುತ್ತಾರೆ (ಸೇನ್, 1970, ಪು. 6). ಈ 'ತರ್ಕಸಮ್ಮತ ವಾದ'ದಿಂದ ಅನುಗಮಿತವಾದ 'ಪೇರೆಟೊ-ಆಪ್ಟಿಮಾಲಿಟಿ' (ಆರ್ಥಿಕ ದಕ್ಷತೆ)ಗೆ ಸಂಬಂಧಿಸಿಯೂ ಸೇನ್ ವಿರೋಧವಿದ್ದರು. ಅದರಲ್ಲವರು ಗಹನವಾದ ಅಂತಸ್ಸಾಕ್ಷಿ ಸಮಸ್ಯೆ ಕಂಡರೆಂಬುದು ಸುಸ್ಪಷ್ಟ. ಬೇರೊಬ್ಬರ ಉಪಯುಕ್ತತೆಯನ್ನು ಕಡಿಮೆ ಮಾಡದೆಯೇ ಮತ್ತು ಹಾಗೆ ಮಾಡದಿರುವ ಮೂಲಕವಷ್ಟೆ, ಯಾರೋ ಒಬ್ಬರ ಉಪಯುಕ್ತತೆಯನ್ನು ಹೆಚ್ಚಿಸುವುದು ಸಾಧ್ಯವಿಲ್ಲ ಎಂದಾಗಲಷ್ಟೆ ಅಂತಹ ಆರ್ಥಿಕತೆ 'ಪೇರೆಟೊ-ಆಪ್ಟಿಮಲ್' ಆಗುತ್ತದೆ. ಈ 'ಪೇರೆಟೊ-ಆಪ್ಟಿಮಲ್' ಸಮಸ್ಯೆಯ ಬಗೆಗೆ ಅವರು ಎಷ್ಟೋ ಭಾವೋದ್ರಿಕ್ತರಾಗಿ ಬರೆದಿದ್ದಾರೆಂಬುದನ್ನು ಕಂಡಾಗ ಅವರು ಅದರ ಬಗೆಗೆ ತೀವ್ರವಾಗಿ ಮಂಥನ ನಡೆಸುತ್ತ ಎಷ್ಟೋ ನಿದ್ರಾರಹಿತ ರಾತ್ರಿಗಳನ್ನು ಕಳೆದಿರಬೇಕು ಎಂಬ ಭಾವನೆ ಮೂಡದಿರದು. ''ಕೆಲವು ಜನರು ಸುಖಸಂಪತ್ತುಗಳಲ್ಲಿ ಹೊರಳಾಡುತ್ತಿದ್ದು ಇತರರು ಹೆಚ್ಚು ಕಡಿಮೆ ಉಪವಾಸ ಸ್ಥಿತಿಯಲ್ಲಿದ್ದಾಗ, ಶ್ರೀಮಂತರ ಸುಖಸಂತೋಷಗಳಲ್ಲಿ ಕಡಿತ ಮಾಡದೆಯೇ ಉಪವಾಸ ಸ್ಥಿತಿಯಲ್ಲಿರುವವರ ಸ್ಥಿತಿಯನ್ನು ಎಲ್ಲಿಯವರೆಗೆ ಉತ್ತಮಗೊಳಿಸಲು ಸಾಧ್ಯವಿಲ್ಲವೋ ಅಲ್ಲಿಯವರೆಗೆ ಅಂತಹ ಆರ್ಥಿಕತೆಯನ್ನು ಪೇರೆಟೊ-ಆಪ್ಟಿಮಲ್ ಎನ್ನಲಾಗುತ್ತದೆ'' ಎಂದು ಹೇಳಿ ಸೇನ್ ಒಂದು ಉದಾಹರಣೆ ಕೊಡುತ್ತಾರೆ. ''ರೋಮ್ ನಗರವನ್ನು ಸುಟ್ಟುಹಾಕುವುದನ್ನು ತಪ್ಪಿಸಲು ಚಕ್ರವರ್ತಿ ನೀರೋನ ಸ್ಥಿತಿಯನ್ನು ಅವನತಿಗೊಳಿಸಬೇಕಾಗಿದ್ದಲ್ಲಿ ಆಗ ರೋಮ್ ನಗರವನ್ನು ಸುಟ್ಟುಹಾಕಲು ಅವನಿಗೆ ಬಿಟ್ಟುಕೊಡುವುದೇ 'ಪೇರೆಟೊ-ಆಪ್ಟಿಮಲ್' ಆಗುತ್ತದೆ. ಸ್ವಲ್ಪದರಲ್ಲಿ ಹೇಳುವುದಾದರೆ, ಸಮಾಜವೊಂದು ಅಥವಾ

### ಮೌಢ್ಯ

ಶವವನ್ನೆತ್ತುವುದಕ್ಕೂ
ನೋಡುತ್ತಾರೆ
ರಾಹುಕಾಲವನ್ನು !
ಬೇರೆ ಕಾಲದಲ್ಲೆತ್ತಿದರೆ
ಸತ್ತವರು ಏಳುತ್ತಾರೆಯೇ ?
ರಾಹುಕಾಲದಲ್ಲೆತ್ತಿದರೆ
ಮತ್ತೆ ಸಾಯುತ್ತಾರೆಯೇ ?



- ಪಿ. ಪಿ. ಕೆ.

ಆರ್ಥಿಕತೆಯೊಂದು ಪೇರೆಟೊ-ಆಪ್ಟಿಮಲ್ ಆಗಿರಬಹುದು, ಅದೇ ಹೊತ್ತಿನಲ್ಲೂ ಪರಿಪೂರ್ಣವಾಗಿ ಅಸಹ್ಯಕರವೂ ಆಗಿರಬಲ್ಲದು'' (ಸೇನ್, 1970, ಪುಟ. 6.) ''ತರ್ಕಸಮ್ಮತ ಮೂರ್ಖರು...'' ಎಂಬ ತಮ್ಮ 'ಹರ್ಬರ್ಟ್ ಸ್ಪೆನ್ಸರ್ ಉಪನ್ಯಾಸ'ದಲ್ಲಿ ಅವರು ತರ್ಕಸಮ್ಮತಿಯ ವಿರುದ್ಧ ಇಮ್ಮುಖ ದಾಳಿ ನಡೆಸುತ್ತಾರೆ. ಒಂದು ಕಡೆ ತರ್ಕಸಮ್ಮತಿಯು ಮಾನವನ ತರ್ಕಸಮ್ಮತ ಲಕ್ಷಣವನ್ನು 'ಬದ್ಧತೆ'ಯನ್ನಾಗಿ ಪುನರ್‌ಸ್ಥಾಪಿಸ ಯತ್ನಿಸುತ್ತದೆ. ಮತ್ತೊಂದು ಕಡೆ ಸ್ವ-ಹಿತವನ್ನಷ್ಟೆ ಗಣನೆಗೆ ತಂದುಕೊಳ್ಳುವುದು ಅ-ತಾರ್ಕಿಕ ಎಂದು ಸಾಧಿಸುತ್ತದೆ.

ಸೀಸರ್‌ನ ಹೆಸರು ಕೈಸರ್ ಅಲ್ಲ ಎಂಬುದು ಎಷ್ಟು ನಿಜವೋ, ಅರ್ಥಶಾಸ್ತ್ರಜ್ಞನೊಬ್ಬನು ಎಂದೂ ವಿವೇಕಿಯಲ್ಲ ಎಂಬುದು ಅಷ್ಟೇ ನಿಜ, ಎಂದು ಸೇನ್‌ರವರು ರಾಬರ್ಟ್ ಫ್ರಾಸ್ಟ್‌ರ ವಾಕ್ಯವೊಂದನ್ನು ಉಲ್ಲೇಖಿಸಿ, ಮೇಲಿನಂತಹ ತರ್ಕಸಮ್ಮತ ಭಾವನೆಯನ್ನು ಪರಿಹಾಸ್ಯ ಮಾಡುತ್ತಾರೆ.

ಸೇನ್‌ರ ಮೂಲಭೂತ ಕಾಣಿಕೆ ಇರುವುದು 'ಸಂಕ್ಷೇಮ ಆರ್ಥಿಕತೆ' (ವೆಲ್‌ಫೇರ್ ಎಕನಾಮಿಕ್ಸ್) ಯಲ್ಲಿ ಎಂಬುದರಲ್ಲೂ ಎಷ್ಟು ಮಾತ್ರವೂ ಸಂಶಯವಿಲ್ಲ. **ಸಾಮೂಹಿಕ ಆಯ್ಕೆ ಹಾಗೂ ಸಾಮಾಜಿಕ ಸಂಕ್ಷೇಮ** (1970), **ಆರ್ಥಿಕ ಅಸಮಾನತೆ** (1973) - ಇವು ಅವರು ನೀಡಿರುವ ಸರ್ವವ್ಯಾಪಿ ಕಾಣಿಕೆಗಳಿಗೆ ಅಡಿಪಾಯ. **ಹೊಸ ಸಂಕ್ಷೇಮ ಅರ್ಥಶಾಸ್ತ್ರ** (1939-1950)ವನ್ನು ಮೌಲ್ಯ-ಮುಕ್ತ ಅರ್ಥಶಾಸ್ತ್ರ ಶೋಧನೆಯ ಅಂಶವನ್ನಾಗಿ ಯಾವ ಕಾರಣಕ್ಕಾಗಿ ಪರಿವರ್ತಿಸಲಾಯಿತೋ ಸ್ಪಷ್ಟವಾಗಿಲ್ಲ ಎಂದವರು ಅನೇಕ ಬಾರಿ ತಿಳಿಸಿದ್ದಾರೆ. ಸಂಕ್ಷೇಮ ಅರ್ಥಶಾಸ್ತ್ರವು ಮೌಲ್ಯಮುಕ್ತವಾಗಿರಲು ಸಾಧ್ಯವೇ ಇಲ್ಲ, ಏಕೆಂದರೆ, ಅದು ಸಾಧಿಸಬೇಕೆಂದಿರುವ ಗುರಿಗಳೇ ಮೌಲ್ಯಯುತ ತೀರ್ಮಾನಗಳಾಗಿರುತ್ತವೆ, ಎಂದು ಸೇನ್ ಒತ್ತಿ ಹೇಳುತ್ತಾರೆ. ಮೌಲ್ಯ-ಮುಕ್ತವಾಗಿರುವುದು, ಅಥವಾ 'ನೀತಿ-ಮುಕ್ತ'ವಾಗಿರುವುದು, ಎಂದರೆ ವ್ಯಕ್ತಿಗಳ ನಡುವೆ ಘರ್ಷಣೆಗಳಿಂದ ಮುಕ್ತವಾಗಿದ್ದಂತೆ ಎಂದು ಬಹುವೇಳೆ ಹೇಳಲಾಗುತ್ತದೆ. ಇದಕ್ಕೆ ನೀಡುವ ಕಾರಣ ಅಸ್ಪಷ್ಟ. ''ಮೌಲ್ಯ ತೀರ್ಮಾನವನ್ನು ಎಲ್ಲರೂ ಒಪ್ಪಿಕೊಂಡಲ್ಲಿ ಆಗ ಅದು ಎಷ್ಟು ಮಾತ್ರವೂ ಮೌಲ್ಯ ತೀರ್ಮಾನ (ವ್ಯಾಲ್ಯೂ ಜಡ್ಜ್‌ಮೆಂಟ್) ಆಗಿರುವುದೇ ಇಲ್ಲ, ಬದಲು ಪರಿಪೂರ್ಣವಾಗಿ 'ವಸ್ತುನಿಷ್ಠ'ವಾಗಿರುತ್ತದೆ, ಎಂಬುದು ಇಲ್ಲಿ ಅಂತರ್ಗತವಾದ ಭಾವನೆಯೆಂದು ಕಂಡುಬರುತ್ತದೆ'' ಎಂದು ಸೇನ್ ಹೇಳುತ್ತಾರೆ (ಸೇನ್, 1970, ಪು. 57). ಆಧುನಿಕ ಅರ್ಥಶಾಸ್ತ್ರ ಬಹುಮಟ್ಟಿಗೆ ಆದಾಯ ವಿತರಣೆಯ ಕುರಿತು ಎಷ್ಟು ಮಾತ್ರವೂ ತೀರ್ಮಾನ ನೀಡಹೋಗದೆ, ವಿವಿಧ ವ್ಯಕ್ತಿ, ಗುಂಪು ಅಥವಾ ವರ್ಗಗಳ ನಡುವೆ ಘರ್ಷಣೆ ಇಲ್ಲದಂಥ ವಿಷಯಗಳ ಮೇಲಷ್ಟೆ ಗಮನ ಕೇಂದ್ರೀಕರಿಸುತ್ತದೆ, ಎಂದು ಸೇನ್ ಟೀಕಿಸುತ್ತಾರೆ. ಸಾಮಾಜಿಕ ಸಂಕ್ಷೇಮ ಕ್ರಿಯೆಯು ಬಿಡಿ ವ್ಯಕ್ತಿಗಳ ದರ್ಜೆಗಳನ್ನು ಅವಲಂಬಿಸಿರುತ್ತದೆ, ವ್ಯಕ್ತಿ-ವ್ಯಕ್ತಿಗಳ ನಡುವಿನ



ಹೋಲಿಕೆಗಳನ್ನಲ್ಲ, ಇಲ್ಲೇ ತೊಂದರೆ ಅಡಗಿರುವುದು. ಸೇನ್‌ರವರು ಸಂಕ್ಷೇಮ ಆರ್ಥಿಕತೆಯ ಚೌಕಟ್ಟನ್ನು ವಿಸ್ತರಿಸಿ ಅದು ವ್ಯಕ್ತಿ-ವ್ಯಕ್ತಿಗಳ ನಡುವಿನ ಹೋಲಿಕೆಗಳನ್ನು ಒಳಗೊಳ್ಳುವಂತೆ ಮಾಡಿದ್ದಾರೆ. ಇದರಿಂದಾಗಿ ''ಅವಶ್ಯಕತೆಗಳೂ'' ಈ ಚೌಕಟ್ಟಿನ ಒಳಕ್ಕೆ ಬರುವಂತಾಗಿದೆ. ಆರ್ಥಿಕ ಅಸಮಾನತೆಯ ಮಾಪನಕ್ಕೆ ಸಂಬಂಧಿಸಿದ ಅವರ ಕೃತಿಯ ಅಡಿಪಾಯ ಇದುವೇ ಆಗಿದೆ. ಸೇನ್‌ರವರು 'ದುರ್ಬಲ ನ್ಯಾಯ ಸೂತ್ರ' ('ಅವಶ್ಯಕತೆಗಳ ಸೂತ್ರ') ಎನ್ನುವಂತಹ ಒಂದು ಸೂತ್ರವನ್ನು ಜಾರಿಗೆ ತಂದಿದ್ದಾರೆ. ಒಟ್ಟು ಆದಾಯದಲ್ಲಿ ಹೆಚ್ಚಿನ ಪಾಲು ಏಕಪ್ರಕಾರವಾಗಿ ಕಡಿಮೆ ಸಂಕ್ಷೇಮಕ್ರಿಯೆಯ ವ್ಯಕ್ತಿಗೆ, ಅಂದರೆ ಹೆಚ್ಚಿನ ಆವಶ್ಯಕತೆಗಳಿರುವ ವ್ಯಕ್ತಿಗೆ, ಹೋಗಬೇಕು, ಎಂದು ಅವರ ಈ ಸೂತ್ರ ಶಿಫಾರಸ್ಸು ಮಾಡುತ್ತದೆ (ಸೇನ್, 1973, ಪು. 73). ಅರ್ಥಶಾಸ್ತ್ರದ ಅಡಿಪಾಯಗಳನ್ನು ಪುನರ್ ನಿರೂಪಿಸಯತ್ನಿಸುತ್ತ ಸೇನ್‌ರವರ ಕೃತಿ ತತ್ವಶಾಸ್ತ್ರ, ಆರ್ಥಿಕ ಸಿದ್ಧಾಂತ ಹಾಗೂ ಗಣಿತಶಾಸ್ತ್ರೀಯ ವಿಶ್ಲೇಷಣೆಯ ಅನ್ವಯ - ಇವುಗಳಲ್ಲಿನ ಈಚೆಗಿನ ಬೆಳವಣಿಗೆಗಳನ್ನು ಸೂಕ್ತ ಹಾಗೂ ಅವಶ್ಯ ಎಂದು ಕಂಡು ಬಂದೆಡೆಗಳಲ್ಲೆಲ್ಲಾ ವಿಪುಲವಾಗಿ ಬಳಸಿಕೊಂಡಿದೆ. ವಿಕಾಸ ಪ್ರಕ್ರಿಯೆಯ ಮುಖ್ಯವಾಹಿನಿಯಿಂದ ಹೊರಗುಳಿದಿರುವಂಥವರ ಹಿತಗಳಿಗೆ ಸೇನ್‌ರವರ ದೃಢಬದ್ಧತೆಯು ಅವರು ಸಾಧಿಸಿರುವ ಸೈದ್ಧಾಂತಿಕ ಔನ್ನತ್ಯಗಳಿಗೆ ಸರಿಸಾಟಿಯಾಗಿದೆ. ತತ್ಫಲವಾಗಿ ಅವರು ಅರ್ಥಶಾಸ್ತ್ರಕ್ಕೆ ನೀಡಿರುವ ಕೊಡುಗೆಗಳು ಏಕೀಕೃತ ಪೂರ್ಣತೆಯ ಲಕ್ಷಣ ಪಡೆದುಕೊಂಡಿವೆ. ಅವು ''ಸಾಮಾಜಿಕ ಆಯ್ಕೆಯ ಸರ್ವಸಮ್ಮತ ಸಿದ್ಧಾಂತದಿಂದ ಹಿಡಿದು, ಸಂಕ್ಷೇಮ ಹಾಗೂ ಬಡತನ ಸೂಚ್ಯಂಕಗಳ ನಿರೂಪಣೆಗಳಿಂದ ಹಿಡಿದು, ಕ್ಷಾಮಗಳ ಅನುಭವಜನ್ಯ ಅಧ್ಯಯನಗಳವರೆಗೆ'' ವ್ಯಾಪಿಸಿವೆ.

ಅಸಮಾನತೆ ಸಮಸ್ಯೆ ಕಡೆಗೆ ಅವರು ಹೆಚ್ಚಿನ ಗಮನ ನೀಡಿದರು. ತಲಾ ಆದಾಯ (ಪರ್‌ಕ್ಯಾಪಿಟ ಇನ್‌ಕಮ್)ದಂಥ ಸೂಚ್ಯಂಕಗಳ ಆಧಾರದ ಮೇಲೆ ವಿವಿಧ ಸಮಾಜಗಳ ಸಂಕ್ಷೇಮದ ಹೋಲಿಕೆಯು ಸರಾಸರಿ ಪರಿಸ್ಥಿತಿಗಳನ್ನಷ್ಟೆ ಗಮನಕ್ಕೆ ತಂದುಕೊಳ್ಳುತ್ತದೆ. ಸೇನ್‌ರವರು ಇದಕ್ಕೆ ಬದಲಾಗಿ ಸಂಕ್ಷೇಮದ ಮತ್ತೊಂದು ಸೂಚ್ಯಂಕವನ್ನು ವಿಕಾಸಗೊಳಿಸಿದರು. ಅದು ಆದಾಯ ವಿತರಣೆಯನ್ನೂ ಗಮನಕ್ಕೆ ತಂದುಕೊಳ್ಳುತ್ತದೆ. ಕೇವಲ ಪದಾರ್ಥಗಳಷ್ಟೆ ಸಂಕ್ಷೇಮ ಸೃಷ್ಟಿಸುವುದಿಲ್ಲ, ಆದರೆ ಈ ಪದಾರ್ಥಗಳಿಂದ ಜನ ಏನು ಪಡೆಯುತ್ತಾರೆ ಎಂಬುದು ಸಂಕ್ಷೇಮವನ್ನು ನಿರ್ಧರಿಸುತ್ತದೆ ಎಂದವರು ಒತ್ತಿ ಹೇಳುತ್ತಾರೆ (ಸೇನ್, 1985). ಸಂಕ್ಷೇಮದ ಪ್ರತ್ಯಾಮ್ನಾಯ ಸೂಚಿಗಳಿಗೆ ಸಂಬಂಧಿಸಿದ ಅವರ ಕೃತಿಯು ಮೌಲ್ಯಗಳು, ಸ್ವಾತಂತ್ರ್ಯ ಹಾಗೂ ಜೀವನ ಲಕ್ಷಣಗಳು - ಇವೆಲ್ಲವನ್ನೂ ಗಣನೆಗೆ ತಂದುಕೊಂಡು 'ಮಾನವ ವಿಕಾಸ ಸೂಚ್ಯಂಕ'ವನ್ನು ನಿರೂಪಿಸುವುದರಲ್ಲಿ ನೆರವಾಗಿವೆ. ಬಡತನ ಸೂಚ್ಯಂಕ ನಿರ್ಧರಿಸುವ ಅವರ ವಿಧಾನವು ಬಡತನ ರೇಖೆಯ ಕೆಳಗಿರುವವರೆಲ್ಲರ ಎಣಿಕೆ ಮಾಡುವ ಸಾಂಪ್ರದಾಯಿಕ ವಿಧಾನವನ್ನೂ ದಾಟಿಹೋಗಿ, ಕಡು ಬಡವರಿಗೂ ಸಾಮಾನ್ಯ ಬಡವರಿಗೂ ನಡುವಿನ ಅಂತರವನ್ನೂ ಗಣನೆಗೆ ತಂದುಕೊಳ್ಳುತ್ತದೆ. ಹಾಗೆ ಅದು ತಳಸ್ತರದ ಜನರ ಕಡೆಗೆ ಹೆಚ್ಚಿನ ಗಮನ ನೀಡಲು ಸಾಧ್ಯ ಮಾಡಿಕೊಡುತ್ತದೆ.

ಹಸಿವು, ಬಡತನ, ಕ್ಷಾಮಗಳ ಬಗೆಗಿನ ಅವರ ಕೃತಿಯು ಸುವಿಖ್ಯಾತವಾಗಿದೆ. ಕ್ಷಾಮ ಎಂದರೆ ಆಹಾರದ ಅಭಾವ ಎಂಬ ಸಾಮಾನ್ಯ ಭಾವನೆಯನ್ನವರು ಪ್ರಶ್ನಿಸುತ್ತಾರೆ (ಸೇನ್, 1981). ಕ್ಷಾಮಗಳ ಸಮಯದಲ್ಲಿ ಅಪಾರ ಸಂಖ್ಯೆಯಲ್ಲಿ ಸಾವು ಸಂಭವಿಸುವುದಕ್ಕೆ ಆಹಾರದ ಅಭಾವ ಕಾರಣವಲ್ಲ, ಆದರೆ ಆದಾಯ ಸಂಪಾದನೆಗೆ ಅವಕಾಶಗಳು ಲಭ್ಯವಿಲ್ಲದಿರುವುದೇ ಕಾರಣ [ಇದನ್ನು ಸೇನ್‌ರವರು 'ಆದಾಯ ಸಂಪಾದನೆಯ ಹಕ್ಕು' (ಎಂಟೈಟಲ್‌ಮೆಂಟ್ಸ್) ಎಂದು ಕರೆಯುತ್ತಾರೆ] ಎಂದು ಅವರು 1943ರ ಬಂಗಾಳದ ಕ್ಷಾಮದಿಂದ ಆರಂಭಿಸಿ 1976ರ ಬಾಂಗ್ಲಾದೇಶದ ಕ್ಷಾಮ ಹಾಗೂ ಸಾಹೆಲ್ (ಇಥಿಯೋಪಿಯ)ದಲ್ಲಿನ ಕ್ಷಾಮಗಳವರೆಗೆ ಅನೇಕ ಕ್ಷಾಮ ಪರಿಸ್ಥಿತಿಗಳನ್ನು ಅಭ್ಯಸಿಸಿದನಂತರ ತೀರ್ಮಾನಕ್ಕೆ ಬಂದಿದ್ದಾರೆ. ಕ್ಷಾಮಗಳಿಗೆ ಪ್ರಜಾಪ್ರಭುತ್ವವೇ ಅತ್ಯುತ್ತಮ ಪರಿಹಾರ, ಏಕೆಂದರೆ ಪ್ರಜಾಪ್ರಭುತ್ವದಲ್ಲಿ ಮುಕ್ತ ಪತ್ರಿಕಾರಂಗ ಹಾಗೂ ರಾಜಕೀಯ ಒತ್ತಡಗಳು ಜನರಿಗೆ ಪರಿಹಾರ ಹಾಗೂ ರಕ್ಷಣಾ ಕಾರ್ಯಗಳ ಮೂಲಕ ಆದಾಯ ಸಂಪಾದನೆಯ ಹಕ್ಕನ್ನು ಒದಗಿಸಿಕೊಡಲು ಶ್ರಮಿಸುತ್ತವೆ ಎಂಬ ತೀರ್ಮಾನಕ್ಕೆ ಅವರು ಬರುತ್ತಾರೆ.

ಅತ್ಯಂತ ತೊಡಕಿನ ಸಮಸ್ಯೆಗಳಿಗೆ ಅತ್ಯಂತ ಸರಳವೆಂದು ಕಾಣುವಂಥ ಪರಿಹಾರಗಳನ್ನು ಸೂಚಿಸಿರುವುದು ಸೇನ್‌ರವರ ಕೊಡುಗೆಯ ವಿಶಿಷ್ಟ ಲಕ್ಷಣಗಳಲ್ಲೊಂದಾಗಿದೆ. ಸರಳವೆಂದು ಕಂಡುಬಂದರೂ ಅವರು ಸೂಚಿಸುವ ಪರಿಹಾರಗಳು ಪ್ರಬಲವಾದ ತತ್ವಶಾಸ್ತ್ರೀಯ ಹಾಗೂ ಬಹುವೇಳೆ ತೊಡಕಿನ ಗಣಿತಶಾಸ್ತ್ರೀಯ ವಿಶ್ಲೇಷಣೆಯ ತಳಹದಿಯ ಮೇಲೆ

ನಿಂತಿವೆ. ಉದಾಹರಣೆಗೆ, ವ್ಯಕ್ತಿಗತ ಆಯ್ಕೆಯನ್ನು (ಇಂಡಿವಿಜುಯಲ್ ಛಾಯ್ಸ್) ಸಮಷ್ಟಿಯೊಂದಿಗೆ ಸರಿಹೊಂದಿಸುವ 'ಅಸಾಧ್ಯತೆಯ ಸಮಸ್ಯೆ'ಗೆ ಪರಿಹಾರ ವನ್ನು ಅವರು ಬೆರಗುಗೊಳಿಸುವಷ್ಟು ಸರಳ ಪ್ರತಿಪಾದನೆ ಯಿಂದ ಸಾಧಿಸಿದ್ದಾರೆ. ವ್ಯಕ್ತಿ-ವ್ಯಕ್ತಿಗಳ ನಡುವಿನ ಸೌಲಭ್ಯಗಳು ಹೋಲಿಸಲು ಅಸದಳ ಎಂಬ ಸಾಂಪ್ರದಾಯಿಕ ಭಾವನೆಯನ್ನವರು ತಲೆಕೆಳಗು ಮಾಡಿ ಸೌಲಭ್ಯಗಳು ನಿಜಕ್ಕೂ ಹೋಲಿಸಬಹುದಾದಂಥವು ಎಂಬುದಕ್ಕೆ ಅನೇಕ ವರ್ಷಗಳ ಸತತ ಪರಿಶ್ರಮದ ಮೂಲಕ ಸಾಧನೆಗಳನ್ನು ಒದಗಿಸಿದ್ದಾರೆ. ಅದೇ ರೀತಿ, ಕ್ಷಾಮಗಳಂಥ ಸಂಕಷ್ಟ ಪರಿಸ್ಥಿತಿಗಳಲ್ಲಿ ಜನರು ಕೊಳ್ಳುವ ಶಕ್ತಿಯ ಅಭಾವದಿಂದ ಸಾಯುತ್ತಾರೆ, ಆದ್ದರಿಂದ ಜನರಿಗೆ ಆದಾಯ ಸಂಪಾದನೆಯ ಹಕ್ಕನ್ನು ಶಾಸನಬದ್ಧವಾಗಿ ಖಾತರಿಗೊಳಿಸಿಕೊಡಬೇಕು. ಶಿಕ್ಷಣ ಹಾಗೂ ಆರೋಗ್ಯ ಸೌಲಭ್ಯಗಳು ಜನರ ಕಾರ್ಯ ಸಾಮರ್ಥ್ಯಗಳನ್ನು ಸುಧಾರಿಸಿ ಲಭ್ಯವಿರುವ ಪರಿಸ್ಥಿತಿಗಳಲ್ಲೇ ಹೆಚ್ಚಿನ ಪ್ರತಿಫಲ ಪಡೆಯಲು ಸಾಧ್ಯಮಾಡಿಕೊಡುತ್ತವೆ. ಮಹಿಳೆಯರಿಗೂ ಸೂಕ್ತ ನ್ಯಾಯ ಒದಗಿಸಿಕೊಡಬೇಕು. ಈ ಕೆಲಸ ಮನೆಯ ಒಳಗಿನಿಂದಲೇ ಪ್ರಾರಂಭವಾಗಬೇಕು. ಗೃಹಕೃತ್ಯ ಜವಾಬ್ದಾರಿಗಳ ವಿತರಣೆಯಲ್ಲಿ, ಆಹಾರ ವಿತರಣೆಯಲ್ಲೂ ಸಹ, ಸುಧಾರಣೆಗಳಾಗಬೇಕು ಎಂದು ಸೇನ್ ಪ್ರತಿಪಾದಿಸುತ್ತಾರೆ. ಇವೆಲ್ಲ ಮೇಲ್ನೋಟಕ್ಕೆ ಸರಳವಾಗಿ ಕಾಣಬಹುದು. ಆದರೆ ಇವಕ್ಕೆ ದೃಢವಾದ ತತ್ವಶಾಸ್ತ್ರೀಯ ಆಧಾರವಿದೆ. ಇವುಗಳನ್ನು ಆಚರಣೆಗೆ ತರಲು ಅನೇಕ ವರ್ಷಗಳೇ ಬೇಕಾದೀತು.

ಉಜ್ವಲ ಪ್ರತಿಭೆ, ಚತುರೋಕ್ತಿ ಹಾಗೂ ಹಾಸ್ಯಪ್ರಜ್ಞೆ ಇವು ಸೇನ್‌ರವರ ಬರಹಗಳ ಮತ್ತೊಂದು ಅಮೋಘ ಲಕ್ಷಣ. ಇವು ಅವರ ಬರಹಗಳ ಆದ್ಯಂತ ವಿಜೃಂಭಿಸುತ್ತವೆ. ಅತ್ಯಂತ ಸಂಕೀರ್ಣ ಅಥವಾ ತಾತ್ವಿಕ ಸಮಸ್ಯೆಯನ್ನು ವಿವರಿಸುವಾಗಲೂ ಅವರು ಲಘು ರೀತಿಯಲ್ಲಿ ಒಂದೆರಡು ಸ್ವಾರಸ್ಯಕರ ಘಟನೆ/ಕಥಾನಕಗಳನ್ನು ನಿರೂಪಿಸಿ ಓದುಗರಿಗೆ ಮನರಂಜನೆ ನೀಡದೆ ಇರುವುದಿಲ್ಲ.

ಸೇನ್‌ರವರ ಸ್ಥಾನವನ್ನು ಹೇಗೆಂದು ಗುರುತಿಸು ವುದು? ಎಡಪಂಥವಾದಿಯೆಂದೇ? ಈ ಪ್ರಶ್ನೆಯನ್ನು ಆಗಾಗ್ಗೆ ಕೇಳಲಾಗುತ್ತದೆ. ಏನಾದರೂ, ಅವರು ಬಲಪಂಥವಾದಿಯಂತೂ ಅಲ್ಲ. ಸಾರತಃ, ಬಡಜನರ ಅಭಿವರ್ಧನೆಯ ಬಗೆಗೆ ಅವರು ತೋರುವ ಕಾಳಜಿ, ತಮ್ಮ 'ಗುರು' ಮಾರಿಸ್ ಡಾಬ್‌ರ ಕಾರ್ಯದ ಬಗೆಗೆ ಅವರು ಹೊಂದಿರುವ ನಿರಂತರ ಮೆಚ್ಚಿಕೆ - ಇವು ಅವರನ್ನು ಎಡಪಂಥದ ಸಮೀಪಕ್ಕೇ ಹೆಚ್ಚು ಸೆಳೆಯುತ್ತವೆ. ವ್ಯಕ್ತಿ ಸ್ವಾತಂತ್ರ್ಯದ ಬಗೆಗೂ ಅವರು ತುಂಬ ಕಾಳಜಿ ತೋರುತ್ತಾರೆ. ಆದರೆ ಅದು ಸಾಮಾಜಿಕ ಮೌಲ್ಯಗಳಿಂದ ಹದಗೊಳಿಸಿದಂತಹುದಾಗಿದೆ. ಆಯ್ಕೆಯನ್ನು ಸುಲಭ ಗೊಳಿಸುವುದರಲ್ಲಿ ಮಾರುಕಟ್ಟೆಯ ಧನಾತ್ಮಕ ಪಾತ್ರದಲ್ಲೂ ಅವರಿಗೆ ನಂಬಿಕೆ ಇದೆ. ಇದು ಅವರನ್ನು ವಿಧಾನಶಾಸ್ತ್ರೀಯ ವಾಗಿ ಮುಖ್ಯವಾಹಿನಿಗೆ ಹೆಚ್ಚು ಹತ್ತಿರ ತರುತ್ತದೆ. ಆದರೆ ವಿಧಾನಶಾಸ್ತ್ರದಲ್ಲೂ ಬಹುತ್ವ (ಮೆಥಡಲಾಜಿಕಲ್ ಪ್ಲೂರಾಲಿಟಿ) ವಿದೆಯೆಂದೇ ಅವರು ನಂಬುತ್ತಾರೆ. ಆದಾಯ ಸಂಪಾದನಾ ಹಕ್ಕನ್ನು ಜನರಿಗೆ ಶಾಸನಬದ್ಧವಾಗಿ ಒದಗಿಸಿಕೊಡಬೇಕು ಎಂದವರು ಒತ್ತಿ ಹೇಳುತ್ತಾರೆ. ಸಾಮಾಜಿಕ ಹಾಗೂ ಸಾಂಸ್ಥಿಕ ವಲಯಗಳಲ್ಲಿ ರಾಜ್ಯಕ್ಕೆ ವಿಶಾಲವಾದ ಅವಕಾಶವುಂಟು ಎಂದೂ ಪ್ರತಿಪಾದಿ ಸುತ್ತಾರೆ. ಇದು ಅವರನ್ನು ಸಂಕುಚಿತ ಉದಾರವಾದೀ ಸಿದ್ಧಾಂತದಿಂದ ಪ್ರತ್ಯೇಕಗೊಳಿಸುತ್ತದೆ. ಈ ಅರ್ಥದಲ್ಲಿ ಅವರ ಕಾಣಿಕೆಯನ್ನು ಅರ್ಥಶಾಸ್ತ್ರದ ಮುಖ್ಯವಾಹಿನಿಯ ಗಳಿಕೆಗಳನ್ನು ನಿರಾಕರಿಸುವುದಕ್ಕಿಂತ ಹೆಚ್ಚಾಗಿ ಅದರ ಅಡಿಪಾಯಕ್ಕೆ ಅತ್ಯವಶ್ಯವಾದ ಮಾನವೀಯತೆಯನ್ನು ಬೆಸೆಯುವುದೇ ಆಗಿದೆ ಎನ್ನಬಹುದು.

ಈಚೆಗಿನ ವರ್ಷಗಳಲ್ಲಿ ಅವರು ತಮ್ಮ ಸೈದ್ಧಾಂತಿಕ ಕೃತಿಯ ಮೇಲೆಯೇ ಹೆಚ್ಚಾಗಿ ಅವಲಂಬಿಸಿಕೊಂಡು ಬಡದೇಶಗಳ ನೀತಿ-ಪ್ರತೀಕ್ಷೆಗಳನ್ನು ರೂಪಿಸುವುದರ ಕಡೆಗೆ ಹೆಚ್ಚಿನ ಗಮನ ನೀಡುತ್ತಿದ್ದಾರೆ. ಜನರ ಸಾಮರ್ಥ್ಯ ಸುಧಾರಿಸಲು ಸ್ವಾತಂತ್ರ್ಯದ ಅಂತರ್ಗತ ಹಾಗೂ ಸಾಧಕ ಸ್ವರೂಪ (ಇನ್‌ಸ್ಟ್ರುಮೆಂಟಲ್ ನೇಚರ್) ವೇ ಆಧಾರ ಎಂದು ಅವರು ತಮ್ಮ ಕೃತಿಯಲ್ಲಿ (1989 a) ವಿವರಿಸಿ ದ್ದಾರೆ. ಇದರ ಫಲವಾಗಿ ಆರೋಗ್ಯ, ವಿದ್ಯಾಭ್ಯಾಸ ಹಾಗೂ ಭೂ ಸುಧಾರಣೆಗಳನ್ನೂ ಒಳಗೊಂಡಂತೆ ಸಾಮಾಜಿಕ ರಂಗದಲ್ಲಿ ರಾಜ್ಯಕ್ಕೆ ಒಂದು ಪ್ರಬಲ ಸ್ಥಾನವನ್ನವರು ಪ್ರತಿಪಾದಿಸಿದ್ದಾರೆ. ಹೀಗೆ ಸೇನ್‌ರವರ ಕೃತಿಗಳು ಸುಖಸೌಲಭ್ಯ ಹಾಗೂ ಸ್ವಾತಂತ್ರ್ಯ ವಂಚಿತ ಜನರ, ಅದರಲ್ಲೂ ವಿಶೇಷವಾಗಿ ತೃತೀಯ ಜಗತ್ತಿನ ಜನರ, ಹಿತರಕ್ಷಣೆಯಲ್ಲಿ ವಿವೇಕಯುತ ಸಮತೋಲಿತ ಹಾಗೂ ಬದ್ಧತೆಯ ಧ್ವನಿ ಮೊಳಗಿಸಿ ಅವರ ಪರ ಎದ್ದುನಿಂತಿವೆ.

ಡಾ॥ ಡಿ. ನರಸಿಂಹ ರೆಡ್ಡಿ
ಅರ್ಥಶಾಸ್ತ್ರ ಪ್ರಾಧ್ಯಾಪಕರು, ಹೈದರಾಬಾದ್ ವಿಶ್ವವಿದ್ಯಾಲಯ,
ಹೈದರಾಬಾದ್, ಆಂಧ್ರಪ್ರದೇಶ

*ಅನು : ಕೆ. ಎಲ್. ಗೋಪಾಲಕೃಷ್ಣರಾವ್*

## ಸಾದರ ಸ್ವೀಕಾರ

**ಚುಟುಕು ಶತಕ (ಚುಟುಕ ಸಂಕಲನ)**
*ಶಿವರಾಮ ಹೆಗಡೆ*
**ಪುಟ : 34** **ಬೆಲೆ : ರೂ. 12**
**ಶಿವರಾಮ ಹೆಗಡೆ**, ಬಾಳೆಗದ್ದೆ, ಶಿರಸಿ-581 336

**ಚೀನಾದ ಹುನಾನ್ ಪ್ರಾಂತದ ರೈತ ಚಳುವಳಿ**
*ಸಿ. ಆರ್. ಭಟ್*
***ಪುಟ : 36*** ***ಬೆಲೆ : ರೂ. 6***
**ಡಾ॥ ವಿ. ಎಸ್. ದೇಶಪಾಂಡೆ**
*ಕರ್ನಾಟಕ ಸಮಾಜ ವಿಜ್ಞಾನ ಕೇಂದ್ರ,*
38, ಬಸವನಗರ, ಶ್ರೀನಗರದ ಹತ್ತಿರ, ಧಾರವಾಡ-3

**ನ್ಯಾಯಾಂಗ ತಂದ ಬಿಕ್ಕಟ್ಟು** ಮಂಗ್ಳೂರ ವಿಜಯ
**ಪುಟ : ೧೪** **ಬೆಲೆ : ರೂ. ೫**
**ಸಂಬುದ್ಧ ಪ್ರಕಾಶನ**, ವಿದ್ಯಾ ಟ್ಯುಟೋರಿಯಲ್ಸ್ ಪಕ್ಕ, ವಿ. ನಾಗನಹಳ್ಳಿ, ಬೆಂಗಳೂರು - ೩೨

**'ಜ್ಝು' (ಹನಿಗವನಗಳ ಸಂಕಲನ)** *ಜಿಮೆಲ್ ಕಂಪಲಪ್ಪ*
**ಪುಟ : ೮೪** **ಬೆಲೆ : ರೂ. ೨೫**
**ತನುಮನ ಪ್ರಕಾಶನ**, ೪೨ ಜಿ. ಬ್ಲಾಕ್, ೩ನೇ ತಿರುವು, ರಾಮಕೃಷ್ಣ ನಗರ, ಮೈಸೂರು-೨೨

**ಜೀವನೋತ್ಸಾಹ (ತೆಲಗು ಕವಿತೆಗಳ ಸಂಗ್ರಹ)**
*ಅನು : ಗುರುಮೂರ್ತಿ ಪೆಂಡಕೂರು*
**ಪುಟ : ೬೬** **ಬೆಲೆ : ರೂ. ೩೫**
**ಯುವಕ ಸಂಘ (ರಿ).** ರಾಮನಗರ, ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ - ೫೮೩ ೨೧೨

**ಗಾಂಧಿ ಚಿಂತನೆಯಲ್ಲಿ ಬದಲಾವಣೆ**
*ಮಾರ್ಕ್ ಲಿಂಡ್‌ಲೆ* *ಅನು : ಕೆ. ವಿ. ಸುಬ್ಬಣ್ಣ*
**ಪುಟ : ೪೪** **ಬೆಲೆ : ರೂ. ೫**
**ಮಾನವ ಮಂಟಪ ಪ್ರಕಾಶನ**, ವಲ್ಲಭನಿಕೇತನ, ಗಾಂಧಿಭವನ, ಕುಮಾರಕೃಪಾ ಪೂರ್ವ, ಬೆಂಗಳೂರು-೧

**ಸಾವು (ಕವನಗಳು-ಹನಿಗವನಗಳು)**
ಡಾ॥ ಕಾಝಿ ಅಮೀರುದ್ದೀನ್
**ಪುಟ : ೪೮** **ಬೆಲೆ : ರೂ. ೨೫**
**ಅಭಿವ್ಯಕ್ತಿ ಪ್ರಕಾಶನ**, ೩೭, ದವಳಕೋಟ ರಸ್ತೆ, ಜೆ. ಎಂ. ಕ್ರಾಸ್, ವಿಜಾಪುರ- ೫೮೬ ೧೦೪

**ಸಿ ಎಸ್ ಜೆಯವರ ಚುಟುಕಗಳು**
*ಸಿ. ಎಸ್. ಗೋವಿಂದರಾವ್*, **ಪುಟ : ೪೨ ಬೆಲೆ: ರೂ. ೨೦**
**ಸಿ. ಎಸ್. ಗೋವಿಂದರಾವ್**, ೧೫/೨, ೨ನೇ ಅಡ್ಡರಸ್ತೆ ಚಿಕ್ಕಣ್ಣ ಗಾರ್ಡನ್, ಚಾಮರಾಜಪೇಟೆ, ಬೆಂಗಳೂರು- ೧೮

**ಎಲ್ಲಿ ಆ ಕಣ್ಣುಗಳು (ಕಥಾ ಸಂಗ್ರಹ)**
*ಬಿ. ಆರ್. ಪೋಲೀಸ್ ಪಾಟೀಲ*
**ಪುಟ : ೮೪** **ಬೆಲೆ : ರೂ. ೩೫**
**ವಾತ್ಸಲ್ಯ ಪ್ರಕಾಶನ**, ಬನಹಟ್ಟಿ - ೫೮೭ ೩೧೧

**ಡಾ॥ ಗಿರೀಶ್ ಕಾರ್ನಾಡ್ ಅವರ ಎಂಟು ರಂಗ ಪ್ರಯೋಗದ ನಾಟಕಗಳು**
*ಸಂ : ಆರ್. ಜಿ. ಹಳ್ಳಿ ನಾಗರಾಜ್*
**ಪುಟ : ೩೨** **ಬೆಲೆ : ರೂ. ೧೦**
**ಅನ್ವೇಷಣೆ ಪ್ರಕಾಶನ**, ೩೭/೨ ಎ. ನಿಸರ್ಗ, ನಾಗರಬಾವಿ ರಸ್ತೆ, ವಿಜಯನಗರ, ಬೆಂಗಳೂರು - ೪೦

**ಮುಳ್ಳುಕಂಟಿಯ ನಡುವೆ (ಕವನ ಸಂಗ್ರಹ)**
*ಅನುಸೂಯ ಕಾಂಬಳೆ* **ಪುಟ : ೫೪** **ಬೆಲೆ : ರೂ. ೩೦**
**ಹೊಸದಿಕ್ಕು ಪ್ರಕಾಶನ**, ನಂ. ೧೨೨, ೧೯ನೇ ಕ್ರಾಸ್, ೬ನೇ ಬ್ಲಾಕ್, ಜಯನಗರ, ಬೆಂಗಳೂರು-೮೨

**ಘಾತ (ಕಥಾ ಸಂಕಲನ)**
*ವತ್ಸಲಾ ಎಸ್. ಇಂದಿರಾ ಪ್ರಿಯದರ್ಶಿನಿ*
**ಪುಟ : ೯೭** **ಬೆಲೆ : ರೂ. ೪೦**
**ವಿಜಯಶ್ರೀ ಪ್ರಕಾಶನ**, ನಂ. ೮೨, ೫ನೇ ದೇವಸ್ಥಾನದ ರಸ್ತೆ, ೧೫ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು-೩

# ಅಕ್ಕವ್ವ

*ಊರವರ ಹರಕು ಬಾಯಿಗೆ ಬೆದರಿ ಅಕ್ಕ ಎಲ್ಲಿ ಕೆರೆ-ಬಾವಿ ಕಂಡುಕೊಂಡಳೋ ಎಂದು ಭೀತಿಗೊಂಡಿದ್ದ ವಿರೂಪಾಕ್ಷನಿಗೆ ಅನಿರೀಕ್ಷಿತ ಅಕ್ಕರೆಯ ಅನುಭವ ಆಯಿತು.*

ಮಟ ಮಟ ಮಧ್ಯಾಣದಾಗ ಪರದಾನ್ಯಗ ಬಿಚಗೊಂಡು ಹೊಗಿ ಹೋಳಿ ಉಸುಕಿನಾಗ ತಿರುಗಾಡಸ್ಗೊಂಡು ಬಂದರನೂ ಇದಕಿನ್ನ ಆರಾಮಾಗಲ್ಲದಲ್ಲ? ಊರಮಂದಿ ದನಗೋಳಿಗಿ ಬಂತು ಹೋಯ್ತು. ಇದಕ್ಯಾಕ ಎಂಟಾನೆಂತು ದಿನ ಆದರನೂ ಇನ್ನಾ ಕಾಲಗಾಳಿ ಕಮ್ಮ ಆಗಲ್ಲದು? ಈ ದಲಿಂದ್ರ ಬ್ಯಾನಿ ಇದೇ ಹೊತ್ತಿನಾಗ ಬರಬೇಕಿತ್ತ? ಊರಿಗೂರ ಮಂದೀನೇ ಗಾಡಿ ಕಟಗೊಂಡು ಗಾಡಿ ಕಟಗೊಂಡು ಜಾತ್ರಿಗಿ ನಡದಾರ. ಯಾರದರ ಜತಿ ಮಾಡಿ ಕಳಸ್ತೀನಿ ಹೋಗಿ ಬಾ ಯಕ್ಕ ಅಂದ್ರ ಇಕೀ ಬ್ಯಾಡ ತಮ್ಮ ಅಂತಾಳ. ಸಣ್ಣಾಂವ ಇದ್ದಾಗಿಲಿಂದ ನಾನೂ ಜಾತ್ರಿಗಿ ಹೋಗದು ಒಮ್ಮೆನೂ ತಪ್ಪಿಸಿಲ್ಲ. ನಂದೇನು ಮನಸು ಮಾಡಿ ಪೈದಲ್ ಹೊಂಟನಂದರ ಮಧ್ಯಾಣ ಅಮ್ಮದರಾಗೇ ಗುಡ್ಡಕ ಹೋತೀನಿ. ಆದರೇನರ ಮಾಡಿ ಅಕ್ಕವ್ವಗ ಕರ್‍ಕೊಂಡೇ ಹೋಬೇಕು.

ಹೊರಗ ಬಂದ ಅಕ್ಕ ಕಿಡಕಿ ಸಳಾಯಿಗಿ, ಬೇನಗಿಡಕ್ಕ ಕಟ್ಟಿದ ತಂತಿ ಮ್ಯಾಲ ಒಕ್ಕೊಂಡು ಬಂದ ತನ್ನ ಸೀರಿ, ನನ್ನ



ಲುಂಗಿ ಝಾಡಸಿ ಒಣಗದಕ ಹಾಕತಿದ್ದಳು.

''ಇಗಾ ಇರಪಣ್ಣ, ಅದು ಆಗಲ್ಲ ಹೋಗಲ್ಲ. ಸುಮ್ನೆ ಖಟ್‌ಪಟ್ ಮಾಡಬ್ಯಾಡ. ಇದೊಂದು ವರ್ಸ ನಾ ಬರ್ಲಿಲ್ಲಂದ್ರ ಗುಡ್ಡದ ಜಾತ್ರಿ ಏನು ನಿಂದ್ರಂಗಿಲ್ಲ. ಹೈಗೈ ಮಾಡಲಾರ್‍ದೆ ಬಟ್ಟಿ ಉಟಗೊಂಡು ಸೀ ಜಾತ್ರಿಗಿ ನಡಿ.''

ಬಟ್ಟಿ ಹಿಂಡಿ ಕಬ್ಬುಣ ಬುಟ್ಯಾಗ ಉಳದಿದ್ದ ಬುರುಗಿನ ನೀರು ಮಂತಣ ಹಿಂದ ಚೆಲ್ಲಿ ಹೇಳ್ದಳು. ಮುಂಜೇನಿಂದ ಅಕ್ಕವ್ವನ ಈ ಮಾತು ಕೇಳಿ ಕೇಳಿ ನನಗೆ ಮದಲೇ ಬ್ಯಾಸರಾಗಿತ್ತು. ಪರದಾನ್ಯನ ಖುರದ ಸಂದ್ಯಾಗ ಮತ್ತ ನಾಕಹನಿ ಖೊಬ್ಬರೆಣ್ಣೆ ಹಾಕಿ;

''ಅಕ್ಕವ್ವ, ಮತ್ತ ಮತ್ತ ಸುಮ್ಮನೆ ಆಡಿದ ಮಾತೇ ಆಡಬ್ಯಾಡ. ಏನರ ಮಾಡಿ ಹೋದರ ಇಬ್ಬರೂ ಹೋಗಮಿ. ಒಬ್ಬಂವನೆ ಅಂದ್ರ ಸಾಫ್ ನಾನೂ ಹೋಗಂಗಿಲ್ಲ.''

ಅಂತ ಹೇಳಿ ಎಣ್ಣಿ ಡೆಬ್ಬಿ ಆಕಿನ ಕೈಯ್ಯಾಗ ಕೊಟ್ಟೆ.

''ಹೀಗೆ ಖೊಂಡ ಹಚ್ಚದರ ಹ್ಯಾಂಗೋ ತಮ್ಮ? ಭಾಜಾ ಅದ ಮಡಿಲಿಂದ ಮಾಲ್ದಿ ಮಾಡೀನಿ, ಗುಡ್ಡಕ ಹೋಗಿ ದೇವರಿಗಿ ನೇವ್ದ್ಯ ಕೊಟ್ಟು ಬರಬಾರ್ದ?''

ತುರುಬು ಕಟಗೊಂಡಿದ್ದ ಹಸಿಕೂದಲು ಬಿಚ್ಚಿ ಅಕ್ಕವ್ವ ಹೇಳ್ದಾಗ:

''ಅಕ್ಕವ್ವ, ಎತ್ತು ಹಿಂಗಾಲು ಜರಾ ಎಳದು ಹಾಕಲತ್ತದ, ದೇವರ ಮ್ಯಾಲ ಒಜ್ಜಿ ಹಾಕಿ ಗಾಡಿ ಕಟ್ಟತೀನಿ ಹೋದೋಟು ಹೋಲಿ, ನಡು ಎಲ್ಲೆರ ಪೂರಾ ನಿತ್ರಾಣಕ ಬಂತಂದ್ರ ಅಲ್ಲೇ ಕೊಳ್ಳು ಹರದು ಬೇಕರ ನಡದು ಹೋದರಾಯ್ತು.''

ಮೇವು ತಿಂತಿದ್ದ ಪರದಾನ್ಯನ ಗಂಗಿ ತೊಗಲು ಸವರಕೋತ ನಾ ಅಂದ.

''ಹಂಗಾರ ನಿನ್ನ ಮರ್ಜಿ ನೋಡಪ್ಪ. ನಾ ಜಲ್ದಿ ಒಕ್ಕೊಂಡು, ಸೀರಿ ಉಟಗೊಂಡು ತಯಾರಾತೀನಿ, ನೀನೂ ನ್ಯಾಯೇರಿ ಮಾಡಿ ಗಾಡಿ ತೈನಾತಿ ಮಾಡು.''

ಅಂತ ಹೇಳಿ ಅಕ್ಕವ್ವ ಒಳಗೆ ಹೋದಳು. ಗಾಡಿ ನೊಗ ಎತ್ತಿ ಕಲ್ಲಿನ ಗೂಟದ ಮ್ಯಾಲಿಟ್ಟು, ಗಾಡಿ ತೊಟ್ಟಲಾಗ ಒಂದು ಕಟ್ಟು ಕಳಕಿ ಹಾಕಿ ಮ್ಯಾಲ ಸೆಣಮಿನ ನಾರಿನ ಭಂಡಿತಟ್ಟು, ಅದರ ಮ್ಯಾಗ ಹಳೀ ಕೌದಿ ಹಾಸಿ, ಚಾಕಿಗಿ ಎಣ್ಣಿ ಹಚ್ಚಿ ಖೇಲಾಗಿನ ನೀರು ತೊಗೊಂಡು ಕೈ ಕಾಲು ಮಾರಿ ತೊಳಕೊಂಡು ಒಳಗ ಬಂದಾಗ ಅಕ್ಕವ್ವ ಸೀರಿ ಉಟಗೊಂಡು ತಯಾರಾಗಿದ್ದಳು.

**ಚಿತ್ರಶೇಖರ ಕಂಠಿ**

''ನಾ ಬುತ್ತಿ ಕಟಗೋಮತನ ಭಡ ಭಡ ಅದೀಟು ಸುಸಲಾ ತಿಂದು, ಒಗದಿದ್ದು ಧೋತರು ಉಟಗೋ.'' ಅಂತ ಹೇಳತಿದ್ದಂಗೇ ನೀರ ಕಟ್ಟೆಮ್ಯಾಲಿಟ್ಟಿದ್ದ ತಾಟು ನಾ ಎತಗೊಂಡಿದ್ದ.

\+ \+ \+

ಹೆಗಲ ಮ್ಯಾಲಿನ ಬಾರಕೋಲು ತೆಗೆದು ತೊಟ್ಟಲಿಗಿ ಸಿಗಸಿ ಎತಗೋಳ ಬೆನ್ನ ಮ್ಯಾಲ ಕೈ ಆಡಸ್ಗೋತ ದಾ... ದಾ... ಅಮ್ಮ ಮುಂದ, ಹಿಂದ ಕುಂತ ಅಕ್ಕವ್ವ;

''ಇರಪಣ್ಣ, ಸಿದ್ದಮ್ಮಾಯಿ ಒಬ್ಬಕಿನೇ ನಡಕೋತ ಗುಡ್ಡಕ ನಡದಂಗ ಕಾಣ್ತದ, ಗಾಡಿ ಥರಬಿ ಆಕಿಗಿನೂ ಕೂಡಸ್ಗೊ.''

ಅಂತ ಹೇಳದೇ ತಡ ಎತಗೋಳ ಅಟಹಗ್ಗ ಹಿಡದು;

ಹಾ...ಹೋರೆ...ಹಾ....

ಅಂತ ಥರಬಿ;

''ಆಯಿ, ಗುಡ್ಡಕ ನಡದೀದೇನೋ ಬಾ ಗಾಡ್ಯಾಗ ಕೂಡು ಬಾ.''.ಅಂದಂವ ಹಿಂದಕ ಹೋಗಿ ಆಕಿನ ರಟ್ಟಿ ಹಿಡದು ಮ್ಯಾಲ ಏರಸ್ಗೊಂಡ. ತೆಲಿ ತುಂಬ ಸೆರಗು ಹೊಚಗೊಂಡು ಕುಂತ ಸಿದ್ದಮ್ಮಾಯಿ;

''ಯಾಕೆ ಮಗ, ಬಿಸಲೇ ಆಗ್ಯದಲ್ಲ, ಈಟ್ಯಾಕ ತಡ ಮಾಡದ್ರಿ?''

ಮಾತು ಸುರು ಮಾಡಿದಳಕಿ.

''ಬರದೇ ಭರೋಸಾ ಇದ್ದಿದ್ದಿಲ್ಲೇ ಆಯಿ. ಕಾಲಗಾಳಿ ಬಂದು ಎತ್ತು ಕುಂಟಲತ್ತದ. ಅವರಿವರಿಗಿ ಯಾಕ ಎಪ್ಪ ಎಣ್ಣ ಅಮ್ಮದಂತ ನಿನ್ನ ಮಮ್ಮಗನೇ ದೇವರ ಮ್ಯಾಲ ಒಜ್ಜಿ ಹಾಕಿ ಗಾಡಿ ಕಟ್ಯಾನ.''

ಈಕಿ ಇನ್ನ ಅನಿದ್ದಂಗೇ ಸಿದ್ದಮ್ಮಾಯಿ ಹಲ್ಲಿಲ್ಲದ ಬಾಯಿ ಅಗಲ ಮಾಡಿ;

''ಅಲ್ಲೇ ಮಗ ಬಸಮ್ಮ, ಇನ್ನೇಸು ದಿನ ಅಂತ ಹೀಂಗೇ ಹೈರಾಣಾತಿ? ತಮ್ಮ ದೊಡ್ಡಾಂವಾಗ್ಯನ ಅವನಿಗೊಂದು ಹೆಣ್ಣು ತೆಗದು ಮದಿ ಮಾಡದ್ರ ನಿನಗೊಂದೀಟು ಒಜ್ಜಿ ಕಮ್ಮಿ ಆಗಂಗಿಲ್ಲ? ಹುಣ್ಣೆ ಮುಂದ ಗೌನಳ್ಳೇರೇನೊ ಬಂದೀರಂತಲ್ಲ...ಏನಂದು,?''

''ಅವರೇನಂತರಾಯಿ, ಹೋಲ ಮನಿ ನೋಡಿ ಹೋಗಿ ಪತ್ರ ಹಾಕ್ತೀವಿ ಅಂದೋರು ದೀಪ್ ತಿಂಗಳ ದಿನ ಆಯ್ತು ಇನ್ನಾ ಪತ್ರಿಲ್ಲ ಸುದ್ದಿ ಇಲ್ಲ.''

ಅಕ್ಕವ್ವ ಹಿಂಗ ಹೇಳಾ ಮುಂದ ಸಿದ್ದಮ್ಮಾಯಿ, ಬಾಳಿಗಂಟಿಗಿ ಸಿಗಸ್ಗೊಂಡಿದ್ದ ಎಲಿಚೀಲ ಎಳಕೊಂಡು.

ಡೆಬ್ಬಿ ತೆಗೆದು ಎಲಿಮ್ಯಾಲ ಸುಣ್ಣ ಸವರಿ, ಕಾಚದ ಪುಡಿ ಹಾಕಿ ಬಾಯ್ಯಾಗಿಟಗೊಂಡು ಎಡಗೈಯ್ಯಾಗ ಪುಡಿ ತಂಬಾಕು ಹೈಕೊಂಡು ಎಲಿಚೀಲ ಮತ್ತ ಬಾಳಿಗಂಟಗಿ ಸಿಗಸಿ;

''ನೀ ತಿಳಕೊ, ಅವರದೇನೂ ಸುದ್ದಿ ಬರಲ್ಲ. ನೋಡು ಮಗ ಬಸ್ಸಾ, ನನ್ನ ಕಿಂವಿ ಮ್ಯಾಲ ಬಿದ್ದ ಮಾತು ನಿನ್ನ ಮುಂದ ಹೇಳಲತ್ತೀನಿ. ನಮ್ಮಾಯಿ ಹೀಂಗಂತಾಳಂತ ಮನಸಿಗಿ ಹಚಗೋಬ್ಯಾಡ. ಊರಾಗ ಹರಕಬಾಯಿ ಮಂದಿ ತುಂಬಿ ಹೋಗ್ಯಾರ. ಫಲಾಣೇರು ಅಂತ ನಾ ಹೇಳಲ್ಲ. ನಿನಗ ಆಗಲಾರ್ದೋರು, ಬಂದೋರ ಕಿಂವಿ ಊದ್ಯಾರ. ನೀ ನನ್ನ ಮಗಳಂತ ತಿಳದೂ ಈ ಮಾತು ಹೇಳ್ತೀನಿ. ನಿಮ್ಮ ಪಾಲ್ಕಾರ ಶಿವಪ್ಪ ಹ್ಯಾಂಗಮ್ಮದು ನನಗೇನು ಗೊತ್ತಿಲ್ಲ. ಹೊಲನೇ ಪಾಲಕ್ಕ ಮಾಡ್ಯಾನಂದ ಮ್ಯಾಲ ಮನಿಗಿ ಬರದು ಹೋಗದು ಮಾಡ್ತಾನ. ನೀ ಏನೊ ನಿಗಿ ನಿಗಿ ಕೆಂಡ ಇದ್ದಂಗಿದ್ದಿ ಖರೆ, ಆಡೋರ ನಾಲಿಗಿ ಹಸನಿರಬೇಕಲ್ಲ. ಏರ್‌ಹರ್‍ಯಾದಾಗ ಗಂಡಗ ಕಳ್ಕೊಡು ಉಪ್ಪು ಹುಳಿ ಉಣತಾಳಂದ ಮ್ಯಾಲ ಹ್ಯಾಂಗ ಕೇಳ್ತದಂತ ಕತಿ ಕಟ್ಟತಾರ. ಹಾಲಾಗ ಹುಳಿ ಹಿಂಡಿ ಒಡದು ವಾಸನ ಬರಂಗ ಮಾಡಿ ಖುಸಿ ಪಡ್ತಾರ. ಹೀಂಗ ನಡೀತಂದರ ಏಸಮಂದಿ ಮಂದಿ ಬಂದರನೂ ನೆಂಟಸ್ತನ ಆಗದು ದುಸ್ತರ ಆತದ.''

ಅಂತ ಹೇಳಿ ಬಾಯೊಳಗಿನ ಕೆಂಪು ಉಗುಳು ಪಿಚಕ್ಕಂತ ಉಗುಳಿದಳು. ಈ ಮಾತು ಕೇಳಿ ಅಕ್ಕವ್ವನ ಎದಿ ಒಡದಿರಬೇಕು. ಮುಂದ ಮಾರಿ ಮಾಡಿ ಗಾಡಿ ಹೊಡೀತಿದ್ದ ನನ್ನ ಮೈಯ್ಯಾಗ ಮುಳ್ಳಂಡು ಆಡಸಿದಂಗಾಗಿ ತಿರುಗಿ ಕುಂತು;

''ಏ ಆಯಿ ಯಾ ಸೂ...ಮಕ್ಕಳು ಹೀಂಗದ್ರು ಹೇಳು. ವಾಪಸ್ ಹೋಗಿ ಅವರ ತೆಲಿ ಕಡದು ಅಗಸಿಗಿ ಕಟ್ಟತೀನಿ. ದೇವರಂಥಾ ನಮ್ಮಕ್ಕಗ ಸೂಳಿ ಮಾಡದಕ ಹೊಂಟಾರಲ್ಲ ಆ ಚೋದಿಮಕ್ಕಳಿಗಿ ಮಟ್ಟ ಆಡಸ್ಲಿಲ್ಲ ನನ್ನ ಹೆಸರು ಇರಪಣ್ಣಲ್ಲ. ನಿನ್ನ ಕಾಲಿಗಿ ಬೀಳ್ತೀನಿ ಅವರ್‍ಯಾರಮ್ಮದು ಹೇಳು.''

ಅಂದು ಪಟ್ಟು ಹಿಡ್ದಾಗ, ಸ್ವಾಟ್ಯಾಗ ಹಿಡದಿದ್ದ ತಂಬಾಕು ಉಗುಳಿ ಬಾಯ್ದಾಗ ನೀರು ಹೈಕೊಂಡು ಮುಕ್ಕಳಿಸಿ;

''ನನಗೊತ್ತಿತ್ತೋ ತಮ್ಮ ನೀ ಹೀಂಗಂತೆಂತ. ಗಡ್‌ಬಡ್ ಮಾಡಬ್ಯಾಡ ನೀ ಜರಾ ಸುಮ್ಮಕಿರು. ನಿಂದೊಂದು ಮದಿ ಆಗಿ ಸೊಸಿ ಮನಿಗಿ ಬಂದಳಂದ್ರ ಎಲ್ಲಾ ನೆಟ್ಟಗಾತದ.''

ಸಿದ್ದಮ್ಮಾಯಿ ಹೀಂಗ ಸಮಾಧಾನದಿಂದ ಹೇಳ್ದಾಗ ನನ್ನ ಚಿತ್ತ ನೆತ್ತಿಗೇರಿತ್ತು.

''ಏ ಆಯಿ, ಜರಾ ನಾ ಹೇಳದು ಕೇಳು. ನನ್ನ ಮದಿ ಆಗ್ಲಿಲ್ಲಂದ್ರೇನೂ ಪರಪಂಚ ಮುಣಗಂಗಿಲ್ಲ. ದೇವರಂಥಾ ನನ್ನ ಅಕ್ಕವ್ವಗ ಕೆಟ್ಟ ಹೆಸರು ಬಂತಂದರ ನಾ ಸುಮ್ಮನಿರಂಗಿಲ್ಲ. ಖಿಂತೋರಂತ ನೀ ಜರಾ ಸೂಚನಾ ಕೊಡು ಸಾಕು, ಮುಂದಿದೆಲ್ಲ ನಾ ನೋಡಕೋತಿನಿ.''

ಆಯಿ ಮಾರಿ ನೋಡಿ ನಾ ಹೇಳಾ ಮುಂದ. ಅಕ್ಕವ್ವ ಬಾಯ್ಯಾಗ ಸೀರಿ ಸೆರಗು ಇಟಗೊಂಡು ಅಳ್ಳಕ ಸುರು ಮಾಡ್ದಳು.

''ಅಕ್ಕವ್ವ, ನೀ ಅಳಬ್ಯಾಡ ಕರೀಬ್ಯಾಡ. ಊರಿಗಿ ವಾಪಸ್ ಹೋದ ಮ್ಯಾಲ ಇದಕೆಲ್ಲ ನಾ ಒಂದು ಗತಿ ಕಾಣಸ್ತೀನಿ.''

ಅಂತ ಧೈರ್ಯ ಹೇಳ್ದಾಗ;

''ಅದೇ ನನಗ ಅಂಜಿಕ್ಯಾಗ್ಯದೋ ಇರಪಣ್ಣ. ಮದಲೇ ನೀ ಸಿಟ್ಟಿನ ಮನಷ್ಯಾ, ಜಗಡಾ ಹೊಡಪೇಟಾಗಿ ನಿನಗೇನರ ಆಯ್ತಂದ್ರ ಹಿಂದ ಮುಂದ ನನಗ್ಯಾರು ಹರ ಹೇಳು?''

ಅಂದಕ್ಕಿ ಕಣ್ಣಾಗ ನೀರೇ ತೆಗದಳು.

''ನೋಡು ಮಗ, ಸಿಟ್ಟಿನ ಕೈಯ್ಯಾಗ ಬುದ್ಧಿ ಕುಡಬ್ಯಾಡ. ನಿನ್ನ ಭಲೋದಕೆ ಹೇಳ್ತೀನಿ. ಕೈ ಕೈ ಕಲ್ತು ಏನರ ಹೆಚ್ಚು ಕಮ್ಮ ಆಯ್ತಂದ್ರ ನಿಮ್ಮಕ್ಕನ ಗತಿ ಏನು ? ಹಲ್ಕಟ್ ಮಂದಿ ಖಾಲೆ ಕುಂತು ಅವರಿವರ ಗಿಲ್ಲಾ ಆಡ್ತವ, ಆಡಲಲ್ರ್ಯಾಕ. ಸೀತಮ್ಮನಂಥೋಳಿಗೆ ಕಂಟಕ ತಪ್ಪಲಿಲ್ಲ ಇನ್ನ ನಾವ್ಯಾವ ಮೂಲಿ ಹೇಳು.''

ಸಿದ್ದಮ್ಮಾಯಿ ಹೀಂಗಂದಮ್ಯಾಗ ನಾ ಮಾತು ಬೆಳಸಲಿಲ್ಲ, ಅಕ್ಕವ್ವನೂ ಸುಮ್ಮನ ಕುಂತಿದ್ಳು. ಗಿಡದ ನೆಳ್ಳಾಗ ಎತಗೋಳ ಕೊಳ್ಳ ಹರದು ಎಡ್ಡ ಸೂಡು ಕಳಕಿ ಮುರದು ಎತಗೋಳ ಮುಂದ ಹಾಕದರಾಗ ಅಕ್ಕವ್ವ, ಆಯಿ ಕಂಟಿ ಮರಿಗಿ ಹೋಗಿ ಕಾಲ್ಮಡದು, ಕೈ ಕಾಲು ಮಾರಿ ತೊಳಕೊಂಡು ಬಂದ್ರು. ನಾನೂ ಮಾರಿ ತೊಳಕೊಂಡು ಮುಂದ ನಡದಾಗ ಕೈಚೀಲ ಹಿಡಕೊಂಡು ಅಕ್ಕವ್ವ,

## ಭ್ರಮೆ



ಜನಮೇಜಯ
ಸರ್ಪಯಾಗವನ್ನು ಮಾಡಿದ;
ನಿಶ್ಶೇಷವಾಯಿತೆ ಸರ್ಪಕುಲ ?
ಹಿಟ್ಲರ್ ಯಹೂದ್ಯಯಾಗವನ್ನು
ಮಾಡಿದ;
ನಿಶ್ಶೇಷವಾಯಿತೆ ಯಹೂದ್ಯ ಕುಲ ?
ಇಂಥವಲ್ಲ ಇತಿಹಾಸದ ಭ್ರಮೆ,
ಚಪಲ !

- ಪಿ. ಪಿ. ಕೆ

ಸಿದ್ದಮ್ಮಾಯಿ ಸಂಗಟ ಹವರಾಳ ಹಿಂದ ಬರ್ತಿದ್ದರು. ಗಿರಿ ಗಿರಿ ತೊಟ್ಟಿಲು, ಕುಸ್ತಿ ಆಡದು, ಮಿಠಾಯಿ ದುಕಾನು, ಹಾಂವಗಾರ ಆಟ, ಮಣಗಾರ ದುಕಾನು ಏನೂ ನೋಡಬೇಕನ್ನಸಲಿಲ್ಲ ನನಗ. ಸೀದಾ ಗುಡಿಗಿ ಹೋಗಿ ದೇವರ ದರಶಣ ಮಾಡಿ ಎಡ್ಡು ಸೇರು ಫಳಾರ ಹಾಕಸ್ಗೊಂಡು ವಾಪಸ್ ಬಂದು ಗಾಡಿ ಕಟ್ಟಿದ.

\+ \+ \+

ದಿನಾ ಎಳಂಗ ಕೆಂಪು ಮೂಡಲು ಹರ್‍ದಾಗ ಎದ್ದು ಮಾರಿ ತೊಳಕೊಂಡು ಅಡುಗಿ ಮನಿಗಿ ಬರ್ತೀನಿ, ಅಕ್ಕವ್ವ ಅಡುಗಿ ಮುಗಸಿ ರೊಟ್ಟಿ ಬಂಡಿ ತೊಳೀತಿದ್ದಳು.

''ಯಕ್ಕ, ನಾ ಅಂದ್ರ ಎತಗೋಳಿಗಿ ವಾರಿಗಿ ಹೊಡಕೊಂಡು ಹೋಗಿ ಮೈಸ್ಕೊಂಡು ಬರಬೇಕು, ನೀ ಯಾಕ ಈಟ ಜಲ್ದಿ ಅಡುಗಿ ಮಾಡ್ದಿ?''

ಹೀಂಗ ನಾ ಕೇಳ್ದಾಗ;

''ಶೆಂಕ್ರಮ್ಮ, ಪಾರಮ್ಮ ಬರ್ತಿನಂದಾರ, ಒಂದೆಡ್ಡು ಸೇರು ಸ್ಯಾಂವಿಗ್ಯರ ಮಾಡಬೇಕಂತ ಮಾಡೀನಿ.''

ಅಂದು, ಕಪ್ಪಿನಾಗ ಹಾಕಿ ಕೊಟ್ಟ ಚಾ ಕುಡದು, ಎತಗೋಳ ಕುಣಕಿ ಬಿಚ್ಚದ. ಭಂಡಿಗೊಳ್ಳದಾಗ ಎತಗೊಳಿಗಿ ಮೈಯದಕ ಬಿಟ್ಟು, ಮುತ್ತಲ ಗಿಡದ ನೆಳ್ಳಾಗ ತೆಲಿಮ್ಯಾಲಿನ ಶೆಲ್ಯ ತೆಲಿಗುಂಬ ಮಾಡ್ಕೊಂಡು ಅಡ್ಡಾದ. ಅಕ್ಕವ್ವ ಮತ್ತ ಮತ್ತ ನೆನಪಾಲತ್ತಳು. ಮುದುಕಿ ಹೇಳಿದ ಮಾತು ಖರೇನಾ? ಯಾರಂದಿರಬೇಕು? ನಮ್ಮಕ್ಕ ನಿಗಿ ನಿಗಿ ಕೆಂಡ ಅಮ್ಮದು ಅಂದ ಭಾಡೆಮಕ್ಕಳಿಗಿ ಎಲ್ಲಿ ಗೊತ್ತಾಬೇಕು? ಅವ್ವನ ಮಾರಿಯರ ನಾ ನೋಡಿಲ್ಲ. ಅಕ್ಕ ಮದಿ ಮಾಡ್ಕೊಂಡು ಹೋಗಾ ಮುಂದ ನಾ ಹರಕ ಚೊಣ್ಣ ಹೈಕೊಂಡು ಆಡ್ತಿದ್ದ. ಅಕ್ಕನ ಮದಿ ಆದ ಎಡ್ಡ ತಿಂಗಳಿಗೇ ಅಪ್ಪ ಸಿಡ್ಲು ಬಡದು ಸತ್ತು ಹೋದ. ಪರದೇಶಿ ಆದ ನನಗೆ ಅಕ್ಕ ತನ್ನೂರಿಗಿ ಕರ್‍ಕೊಂಡು ಹೋದಳು. ಅಕ್ಕಂದೇನು ಆಸ್ತಿ ಇಲ್ಲ ಪಾಸ್ತಿ ಇಲ್ಲ ಮನಿ ಒಂದು ಬಿಟ್ರ. ನನ್ನಂಗೇ ನಮ್ಮಕ್ಕನ ಹಣೆಬಾರನೂ ಖೊಟ್ಟಿ. ಮದಿ ಆಗಿನ್ನ ವರ್ಸು ತುಂಬಿದಿಲ್ಲ. ಶೀನಪ್ಪ ಧೊರಿ ಬಲ್ಲಿ ದುಡಿಲಾಕಿದ್ದ ಮಾವ, ಮಳಗಾಲದಾಗ ಒಂದಿನ ಈಸಲು ಬರಲಾರ್‍ದೆ ತುಂಬಿದ ಹಳ್ಳ ದಾಟದಕ ಹೋಗಿ ತಪ್ಪು ಮಾಡ್ದ. ಹಾಂಗ ತಪ್ಪು ಮಾಡ್ದಂವ ತಾ ಗಂಗಮ್ಮನ ಹೊಟ್ಟಿ ಸೇರಿ ನಮ್ಮಕ್ಕಗ ರಂಡಮುಂಡಿ ಮಾಡ್ದ. ಅಕ್ಕ ಹಗಲೂ ರಾತ್ರಿ ಅತ್ತು ಅತ್ತು ಕಣ್ಣಮ್ಮವು ತೊಂಡಿಕಾಯಿ ಆದವು. ನಾಕೆಂಟು ದಿನ ಇದ್ದು ಬರದಕಂತ ಹೋದ ನಮ್ಮಕ್ಕನ ಅತ್ತಿ ಮಗಳ ಬಲ್ಲೆ ಉಳದು ಬಿಟ್ಟಳು. ಒಂದು ದಿನ ನಮ್ಮೂರಲಿಂದ ಬಂದ ರಂಗಪ್ಪ ಕಾಕಾ;

''ತೆಂಗಿ, ಈ ಮನಿ ಒಂದು ಬಿಟ್ಟರೆ ಇಲ್ಲೇನು ಹೊಲನಾ, ನೆಲನಾ. ಇರಪಣ್ಣನ್ನ ಸಣ್ಣ ಪಾರ. ಊರಾಗ ನಿಮ್ಮಪ್ಪಂದೀಟು ಭೂಮಿ ಅದ. ನಿಮ್ಮತ್ತೇನು ತಿರುಗಿ ಬರಂಗ ಕಾಣಲ್ಲ, ಭೂಮಿ ನಾಕೆಂಟು ಚೀಲ ಬೆಳೀತದ. ತಮ್ಮಗ ಕರ್‍ಕೊಂಡು ಬಂದು ಅಲ್ಲೇ ಇರ್ಬ್ಯಾರ್ದ.''

ಅಂತ ಹೇಳ್ದಾಗ ಅಕ್ಕಗನೂ ಖರೆ ಅನ್ನಸಿ ಊರಿಗಿ ವಾಪಸ್ ಬಂದಳು. ಕುಂಡಿ ತೊಳೆದರಿಂದ ಹಿಡದು ಧೋತರ ಉಡಸಿ ಕಚ್ಚಿ ಹಾಕತನ ಅಕ್ಕ ರೋಮ್

ರೋಮ್ ಮಾಡಿ, ನನ್ನ ಪಾಲಿಗಿ ಅಕ್ಕವ್ವ ಆಗ್ಯಾಳ. ಯಾರೋ ಭಿಕನಾಸಿಗೋಳು ಏನೋ ಅಂದ್ರ ದೇವಿ ಯಂತ ಅಕ್ಕವ್ವನ ಅಂಗಾಲಿಗೇನು ಮುಳ್ಳು ಮುರಿ ಯಂಗಿಲ್ಲ, ಅಂದೋರ ಬಾಯ್ದಾಗೇ ಹುಳ ಬೀಳ್ತಾವ.

ಹಿಂದಿಂದೆಲ್ಲ ನೆನಪಾಗಿ ಎದಿ ಒಜ್ಜ ಆದಂಗಾಯ್ತು. ಸೂರ್ಯ ಮಾರೆತ್ತರ ಬಂದಾಗ ಎತಗೋಳಿಗಿ ಮುಂದ ಹೈಕೊಂಡು ಊರ ದಾರಿ ಹಿಡದ. ಅವಾರ್‌ಗ್ವಾಡಿ ಬಲ್ಲಿ ಬರದಕ್ಕ, ಟಪಾಲು ತರ್ತಿದ್ದ ಫತ್ರುಪಟೇಲ್ ಕರದು ಒಂದು ಪತ್ರ ಕೊಟ್ಟ. ಹೆಜ್ಜ್ಯಾಗ ಹೆಜ್ಜಿ ಇಟಗೋತ ಪತ್ರ ಓದ್ದ. ಗೌನಳ್ಳಿ ಬೀಗರು ಬರದಿದ್ರು.

'ನಿಮ್ಮ ಮನಿ-ಮಾರು ನೋಡಿ ಬರಾ ಮುಂದ ನಿಮ್ಮೂರಾಗಿನ ಒಬ್ಬರಿಬ್ಬರು ಏನೇನೋ ಹೇಳಿ ನಮ್ಮ ತೆಲಿ ಖರಾಬ್ ಮಾಡಿದ್ರು. ಮನ್ನಿ ಸಂತಿದಿನ ನಿಮ್ಮೂರ ಸಿದ್ದಮ್ಮಕ್ಕ ಸಿಕ್ಕಿದ್ದಳು. ಹಕೀಕತ್ತೇನಮ್ಮದು ಖುಲ್ಲಾ ಖುಲ್ಲಾ ಬಿಡಸಿ ಹೇಳಿದ ಮ್ಯಾಲ ಖರೇ ಏನಮ್ಮದು ನಮಗ ತಿಳೀತು. ನಮ್ಮ ಕಮಲಮ್ಮಗ ನಿಮ್ಮ ಮನಿ ಸೊಸಿ ಮಾಡದಕ ನಾವು ತಯಾರಾಗೀವಿ. ಛಲೊ ದಿನ ಠರಾವ್ ಮಾಡಿ ಬಂದು ಸೀರಿ ಉಡಸಿ ಕೂಕಮ್ ಹಚ್ಚಿ ಹೋಗ್ರಿ.'

ಹಿಂಗೆಲ್ಲ ಬರದಿದ್ದ ಪತ್ರ ಓದಿ ಕುಣಕೋತ ನಾ ಮನಿಗಿ ಬಂದ. ಬಾಗಲು ಚಿಲಕ ಹಾಕಿತ್ತು. ಬಾಗಲು ತೆಗದು ಬಾರ್‌ಕಲ್ ಗೂಟಕ ಸಿಗಸಿ ಹೊರಗ ಬಂದು ಅಂಗಳಾಗ ನಿಂತು ಬಾಜೂಮನಿ ಭೀಮವ್ವತ್ತಿಗಿ ಕೇಳ್ದ. ನೋಡಿಲ್ಲೊ ತಮ್ಮ ಅಂದಳು. ಸುಂದ್ರಮ್ಮಕ್ಕ, ಝುರನಪ್ಪ ಮಾವ, ಗೌರಮ್ಮ ದೊಡ್ಡವ್ವ, ಸಿದ್ದಮ್ಮಾಯಿ ಎಲ್ಲಾ ಕಡಿ ಹುಡಕ್ದ, ಅಕ್ಕನ ಪತ್ತಾ ಇಲ್ಲ. ಹೊಲಕ ಹೋಗಿ ಬಂದ, ಬಟ್ಟಿ ಒಗಿಯೋ ಬಡಗೇರ ಭಾಂವಿ, ಊರಮುಂದಿನ ಹಳ್ಳ ಊಂಹೂಂ... ಎಲ್ಲಿ ಅಕ್ಕವ್ವನ ಸುದ್ದೀನೇ ಇಲ್ಲ. ನಾ ಏಟು ತಡೀಬೇಕಂದರನೂ ಕಣ್ಣಾಗಿಂದ ಬಳಬಳಾ ನೀರು ಬಂದವು. ರಾತ್ರಿ ಆಯ್ತು ಬೆಳಗಾಯ್ತು ಮತ್ತ ರಾತ್ರಿ ಆಯ್ತು ಅಕ್ಕವ್ವ ಎಲ್ಲಿ ಸಿಗಲಿಲ್ಲ. ನನಗ ಹುಚ್ಚು ಹಿಡದಂಗ ಆಯ್ತು. ಈ ಸಾಡೇಸಾತಿ ಮದಿ ಕಾಲಾಗ ನನ್ನ ಅಕ್ಕವ್ವಗ ಅಲ್ಲಲ್ಲ ಖಾಸಾ ಅವ್ವಗ ಕಳ್ಕೊಂಡನಲ್ಲ ನಾ ಈಗ ಏನ್ ಮಾಡ್ಲಿ? ನನಗ್ಯಾ ಮದೀನೂ ಬ್ಯಾಡ, ಮಕ್ಕಳನೂ ಬ್ಯಾಡ ನನ್ನ ಅಕ್ಕವ್ವ ಸಿಕ್ಕರ ಸಾಕು ಅಂತ ಹಂಬಲಸ್ಕೋತ ಹಾಸ್ಗೋಲಾರ್ದೆ ಹೊರಸಿನ ಮ್ಯಾಲ ಹೊಳ್ಯಾಡತಿದ್ದ. ಹೊರಗ ಮಿಣಕ ಮಿಣಕ ಬೆಳಕಿತ್ತು, ಮನ್ಯಾಗ ಬರೇ ಕತ್ತಲಿತ್ತು. ಮುಚ್ಚಿದ ಬಾಗಲು ತೆರದಂಗ ಸಪ್ಪಳಾಯ್ತು. ಹೊಳ್ಳಿ ನೋಡಿ ಯಾರವರು? ಅಂದ. ಇಬ್ಬರು ನಿಂತಿದ್ರು. ಎಡಗೈ ಕೆಳಗ ಮಾಡಿ ಬೀಸಕಲ್ಲ ಮ್ಯಾಲಿನ ಖಡ್ಡೆಬ್ಬಿ ತೊಗೊಂಡು ಕಡ್ಡಿ ಗೀರದು ಬಾಗಲಕಡಿ ಬೆಳಕು ಮಾಡಿ ನೋಡ್ದಾಗ, ಹೊಟ್ಯಾಗ ತಣ್ಣೀರು ಸುರದಂಗೆತು. ಗಡ್‌ಬಡಾಸಿ ಎದ್ದು ಖಿಂದೇಲಿ ಹಚ್ಚದ. ಮನಿತುಂಬ ಬೆಳಕಾಯ್ತು. ಬಾಗಾಲ್ದಾಗ ಅಕ್ಕವ್ವ ಅಕಿನ ಬಾಜೂ ಗೌನಳ್ಳಿ ಬೀಗ ನಿಂತಿದ್ರು. ನನಗ ತಡೀಲಾಕಾಗಲಿಲ್ಲ ಧಾಪಸಗೋತ ಓಡಿ ಅಕ್ಕವ್ವನ ತೆಕ್ಕಿಗಿ ಬಿದ್ದು ದನಿ ತೆಗೆದು ಅತ್ತ. ನನ್ನ ತೆಲಿ ಗಟ್ಟಿ ಹಿಡಕೊಂಡು ಅಕ್ಕವ್ವನೂ ಅತ್ತಳು.

''ಅಳಬ್ಯಾಡ ಇರಪು, ನಾ ಸಾಯದಕ ಹೋಗಿದಿಲ್ಲ. ಬೀಗರ ಕೈ ಕಾಲು ಬೀಳದಕಂತ ಹೋಗಿದ್ದ. ನಾ ಹೋಗದಕ ಮದಲೆ ಖರೇ ಹಕೀಕತ್ತು ಅವರಿಗಿ ಗೊತ್ತಾಗಿ ಪತ್ರ ಬರದೀವಿ ಅಂದ್ರು. ಅಕ್ಕವ್ವ ಭಾಂಯೀನೋ, ಕೆರೀನೊ ಹಾರದಳಂತ ನೀ ಪರೇಶಾನಾತಿ ಅಂತ ತಿಳದು ತಡ ಮಾಡಲಾರ್ದೆ ಬೀಗರಿಗಿನೂ ಕರ್‍ಕೊಂಡು ಬಂದ.''

ಇದೀಟು ಹೇಳಿದ ಅಕ್ಕವ್ವ ಕಣ್ಣೀರು ಒರಸ್ಗೊಂಡು, ಒಳಗ ಬರಾ ಮುಂದ ಮಾವ ಆಗಬೇಕಾದಂವ ನನ್ನ ಹೆಗಲ ಮ್ಯಾಲ ಕೈ ಹೈಕೊಂಡು ಕರ್‍ಕೊಂಡು ಬಂದು ಹೊರಸಿನ ಮ್ಯಾಲ ಕುಂತು;

''ನಿನ್ನ ಹೇಣ್ತಿ ಆಗದಕ ನನ್ನ ಮಗಳು ಪುನ್ಯ ಮಾಡಿದಳು ವಿರೂಪಾಕ್ಷಿ.''

ಅಂದಾಗ ನನ್ನ ಅಳು ನಿಂತು ಹೋಗಿತ್ತು. ಮಾರಿ ತೊಳಕೊಂಡು ಅಕ್ಕವ್ವ, ಚಾದ್ದ ಕಪ್ಪು ಹಿಡಕೊಂಡು ಹೊರಗ ಬಂದಿದ್ದಳು.

ಚಿತ್ರಶೇಖರ ಕಂಠಿ
ಗ್ರೀಷ್ಮ, ನಂ: ೧೪೫/೨ ಎ, ಮಾಕಾ ಬಡಾವಣೆ, ಜೇವರ್ಗಿ ರಸ್ತೆ,
ಗುಲಬರ್ಗಾ - ೫೮೫ ೧೦೨.

# ಅಂತು ಇಂತು ಮುಗಿದ ಸಿಯಾಟಲ್ ಸಮಾವೇಶ

**ವಿರೋಧಿಸಲು ಸೇರಿದ್ದವರಲ್ಲಿ ಹಲವು ರೀತಿಯ ಜನರಿದ್ದರು. ಅವರಲ್ಲಿ ಕಾರ್ಮಿಕರಿದ್ದರು. ಪರಿಸರವಾದಿಗಳಿದ್ದರು. ಯೂರೋಪಿನಿಂದ ಬಂದ ರೈತರಿದ್ದರು. ಅಭಿವೃದ್ಧಿಶೀಲ ರಾಷ್ಟ್ರಗಳ ಪ್ರತಿನಿಧಿಗಳಿದ್ದರು. ಹೀಗೆ ಹತ್ತು ಹಲವು ರೀತಿಯ ಜನ ಅಲ್ಲಿ ಸೇರಿದ್ದರು. ಅವರ ಎಷ್ಟೋ ಅಭಿಪ್ರಾಯಗಳು ಪರಸ್ಪರ ತಾಳೆಯೂ ಆಗುತ್ತಿರಲಿಲ್ಲ. ಅವರೆಲ್ಲಾ ಬೇರೆ ಬೇರೆ ಕಾರಣಕ್ಕೆ ಜಾಗತಿಕ ವಾಣಿಜ್ಯ ಸಂಘಟನೆಯನ್ನು ವಿರೋಧಿಸಲು ಬಂದಿದ್ದರು. ಆದರೆ ಅವರಲ್ಲಿ ಹೆಚ್ಚಿನವರಿಗೆ ಒಂದು ಸಮಾನಾಂಶ ಇತ್ತು. ಜಾಗತಿಕ ವಾಣಿಜ್ಯ ಸಂಘಟನೆ, "ದೇಶದ ಪ್ರಜಾಸತ್ತಾತ್ಮಕ ಅಭಿಪ್ರಾಯವನ್ನು ಮುರುಟಿ ಹಾಕಿ, ತೀರ್ಮಾನ ತೆಗೆದುಕೊಳ್ಳುವ ಅಧಿಕಾರವನ್ನು ಬಹುರಾಷ್ಟ್ರೀಯ ಕಂಪೆನಿಗಳಿಗೆ ವರ್ಗಾಯಿಸಿಬಿಡುತ್ತದೆ. ಇದೊಂದು ಪ್ರಜಾಸತ್ತೆಯ ವಿರುದ್ಧದ ದೊಡ್ಡ ಜಾಗತಿಕ ಪಿತೂರಿ" ಎಂದು ಅವರಿಗೆಲ್ಲಾ ಖಾತ್ರಿಯಾದಂತಿತ್ತು.**

ಟಿ. ಎಸ್. ವೇಣುಗೋಪಾಲ್

"ಜಾಗತಿಕ ವ್ಯಾಪಾರ ಸಂಘಟನೆಯ ನೀತಿಯನ್ನು ವಿರೋಧಿಸಬೇಕೆಂದುಕೊಂಡಿದ್ದೀರಾ ? ಬನ್ನಿ ನಿಮಗಾಗಿ ಮ್ಯೂಸಿಕ್ ಹಾಲಿನಲ್ಲಿ ಕಾಯುತ್ತಿರುತ್ತೇವೆ" ಎಂಬ ಪ್ರಕಟಣೆಯೊಂದನ್ನು ಸಿಯಾಟಲ್ಲಿನಲ್ಲಿ, ಸಮಾವೇಶ ಪ್ರಾರಂಭವಾಗುವುದಕ್ಕಿಂತ ತುಂಬಾ ಮೊದಲಿನಿಂದಲೇ ಅಂತರಜಾಲದಲ್ಲಿ ತೇಲಿಬಿಡಲಾಗುತ್ತಿತ್ತು. ಅಷ್ಟೇ ಅಲ್ಲ, ಜಾಗತಿಕ ವ್ಯಾಪಾರ ಸಂಘಟನೆಯನ್ನು ಏಕೆ ವಿರೋಧಿಸಬೇಕೆಂಬುದರ ಬಗ್ಗೆ ಸವಿವರವಾದ ಲೇಖನಗಳನ್ನು ಪ್ರಕಟಿಸಲಾಗುತ್ತಿತ್ತು. ಜೊತೆಗೆ ಪ್ರದರ್ಶನಕ್ಕೆ ಬಂದರೆ ಎಲ್ಲಿ ಉಳಿದುಕೊಳ್ಳಬಹುದು ಎಂಬ ಮಾಹಿತಿಯೂ ಸಿಗುತ್ತಿತ್ತು. ಈ ರೀತಿಯ ಪ್ರಚಾರಕ್ಕಾಗಿಯೇ ಹಲವಾರು ವೆಬ್‌ಸೈಟ್‌ಗಳು ತಯಾರಾಗಿದ್ದವು. ಕೆಲವರು ಅಧಿಕೃತ ಹೆಸರನ್ನೇ ಬಳಸಿ ಒಂದಿಷ್ಟು ಗೊಂದಲ ಹುಟ್ಟಿಸಿ ಮಜ ತೆಗೆದುಕೊಂಡರು.

ಇವರೆಲ್ಲರ ಸಂಘಟನೆಯ ಫಲವಾಗಿ, ವಿಶ್ವ ವ್ಯಾಪಾರ ಸಂಘಟನೆಯ ಮೂರನೆಯ ಮಂತ್ರಾಲೋಚನೆಯ ಸಭೆ ಪ್ರಾರಂಭವಾಗುವ ಮೊದಲೇ ಸಾವಿರಗಟ್ಟಲೆ ಜನ ಅದನ್ನು ವಿರೋಧಿಸಲು ಜಮಾಯಿಸಿಬಿಟ್ಟಿದ್ದರು. ಸರ್ಕಾರಕ್ಕೆ ಪ್ರತಿಭಟನೆ ನಡೆಯುತ್ತದೆ ಎಂಬುದೇನೋ ತಿಳಿದಿತ್ತು. ಅದೂ ಸ್ವಲ್ಪ ದೊಡ್ಡ ಪ್ರಮಾಣದಲ್ಲೇ ನಡೆಯುತ್ತದೆ ಎಂಬುದೂ ಗೊತ್ತಿತ್ತು. ಒಂದಿಷ್ಟಕ್ಕೆ ಅನುಮತಿಯನ್ನೂ ನೀಡಿದ್ದರು. ಆದರೆ ಬರುಬರುತ್ತಾ ಪ್ರದರ್ಶನಕಾರರ ಸಂಖ್ಯೆ ಹೆಚ್ಚಾಗಿ, ಕೊನೆಗೆ ಅದು ಹಿಂಸೆಗೂ ತಿರುಗಿ ಆಡಳಿತಗಾರರ ಲೆಕ್ಕಾಚಾರ ತಪ್ಪಿ ಪರಿಸ್ಥಿತಿ ಕೈಮೀರಿಹೋಯಿತು. ರಬ್ಬರ್ ಗುಂಡಿನ ಹೊಡೆತಕ್ಕೂ ಪ್ರತಿಭಟನಾಕಾರರು ಬಗ್ಗಲಿಲ್ಲ, ಮೆಣಸಿನ ಕಾರ ಎರಚಿದರೂ ಜನ ಹಿಮ್ಮೆಟ್ಟಲಿಲ್ಲ. ಉದ್ಘಾಟನೆಯ ಸಮಾರಂಭದಲ್ಲಿ ಮಾತನಾಡಬೇಕಾದವರು ತಾವು ತಂಗಿದ್ದ ಹೋಟೆಲ್ ರೂಂನಿಂದ ಈಚೆಗೂ ಬರಲಾಗಲಿಲ್ಲ. ಉದ್ಘಾಟನಾ ಭಾಷಣ ಸಿದ್ಧಪಡಿಸಿಕೊಂಡಿದ್ದವರು ಓದಲಿಕ್ಕಾಗದೇ ಅದನ್ನು ಜೇಬಿನಲ್ಲೇ ಇಟ್ಟುಕೊಂಡು ಊರಿಗೆ ಮರಳಬೇಕಾಯಿತು.

**ಹಿನ್ನೆಲೆ** : ೧೯೩೦ರಲ್ಲಿ ಆದಂತಹ ತೀವ್ರ ಆರ್ಥಿಕ ಕ್ಷೋಭೆ ಹಾಗೂ ಎರಡು ಮಹಾಯುದ್ಧಗಳು ಜಗತ್ತಿನ ವಿವಿಧ ರಾಷ್ಟ್ರಗಳ ಮೇಲೆ ವಿವಿಧ ರೀತಿಯ ಪರಿಣಾಮವನ್ನು ಉಂಟುಮಾಡಿತ್ತು. ಆದರೆ ಹೆಚ್ಚಿನ ರಾಷ್ಟ್ರಗಳು ಆರ್ಥಿಕ ಬಿಕ್ಕಟ್ಟಿನಿಂದ ಪಾರಾಗಲು, ತಮ್ಮ ಅರ್ಥವ್ಯವಸ್ಥೆಯ ಸುತ್ತ ಸುಂಕ ಮೊದಲಾದ ಎತ್ತರದ ಗೋಡೆಗಳನ್ನು ಕಟ್ಟಿಕೊಂಡಿದ್ದವು. ಹೊಸ ಮಾರುಕಟ್ಟೆಯ ಆಕ್ರಮಣಕ್ಕೆ ಹೊರಟಿದ್ದ ಅಮೆರಿಕಾದಂತಹ ರಾಷ್ಟ್ರಗಳಿಗೆ ಇಂಥ ಮಾರುಕಟ್ಟೆಯನ್ನು ಕೆಡವಿ ಹಾಕುವುದು ಅವಶ್ಯಕವಾಯಿತು. ಹಾಗಾಗಿ ಮುಕ್ತ ವ್ಯಾಪಾರಕ್ಕೆ ಇದ್ದ ಈ ಅಡ್ಡಿಗಳನ್ನು



*ಪ್ರತಿಭಟನೆ ಹತೋಟಿಗೆ ಪೋಲೀಸ್ ಸಿದ್ಧತೆ*

ತೆಗೆದುಹಾಕಲು, ಗ್ಯಾಟ್ ವ್ಯಾಪಾರ ಮತ್ತು ಸುಂಕವನ್ನು ಕುರಿತ ಸಾರ್ವತ್ರಿಕ ಒಪ್ಪಂದ ಅಸ್ತಿತ್ವಕ್ಕೆ ಬಂದಿತು.

ಗ್ಯಾಟ್‌ನ ಪ್ರಮುಖ ಮಾತುಕತೆಗಳೆಲ್ಲ ವಿವಿಧ ಸುತ್ತಿನಲ್ಲಿ ನಡೆಯುತ್ತಿದ್ದವು. ೧೯೪೭ರಲ್ಲಿ ಮೊದಲ ಸುತ್ತಿನ ಮಾತುಕತೆ ನಡೆಯಿತು. ಈಗ ಎಂಟು ಸುತ್ತಿನ ಮಾತುಕತೆಗಳು ಮುಗಿದಿವೆ. ಎಂಟನೇ ಸುತ್ತಿನ ಮಾತುಕತೆ ಉರುಗ್ವೇ ದೇಶದ ಪುಂತದೆಲ್ ಎಸ್ತೆಯಲ್ಲಿ ೧೯೮೬ರಲ್ಲಿ ಆರಂಭವಾಯಿತು. ಹಾಗಾಗಿ ಅದಕ್ಕೆ ಉರುಗ್ವೇ ಸುತ್ತಿನ ಮಾತುಕತೆಗಳು ಎಂಬ ಹೆಸರು ಬಂದಿದೆ. ಆದರೆ ಈ ಮಾತುಕತೆ ತುಂಬಾ ದಿನ ಎಳೆಯಿತು. ಸಾಕಷ್ಟು ವಿವಾದಗಳನ್ನು ಹುಟ್ಟುಹಾಕಿತು. ಮೊದಲ ಏಳು ಸುತ್ತಿನ ಮಾತುಕತೆಗಳಿಂದ ಇದು ಭಿನ್ನವಾಗಿತ್ತು. ಗ್ಯಾಟ್ ಈ ಮೊದಲು, ಸರಕಿಗೆ ಸಂಬಂಧಿಸಿದಂಥ ಮಾತುಕತೆಗೆ ಮಾತ್ರ ತನ್ನ ಕಾರ್ಯವ್ಯಾಪ್ತಿಯನ್ನು ಸೀಮಿತಗೊಳಿಸಿಕೊಂಡಿತ್ತು. ಆದರೆ ಉರುಗ್ವೇ ಸುತ್ತಿನಲ್ಲಿ ಕೃಷಿ, ಬ್ಯಾಂಕಿಂಗ್, ವಿಮೆ, ದೂರ ಸಂಪರ್ಕ ಮುಂತಾದ ಸೇವೆಗಳನ್ನೂ, ಬೌದ್ಧಿಕ ಆಸ್ತಿ ಹಕ್ಕನ್ನೂ ಮತ್ತು ವ್ಯಾಪಾರ ಸಂಬಂಧವಾದ ಹಣ ಹೂಡಿಕೆಯನ್ನೂ ಮಾತುಕತೆಯ ಪರಿಧಿಯೊಳಗೆ ತರಲಾಯಿತು.

## ಜಾಗತಿಕ ವಾಣಿಜ್ಯ ಸಂಘಟನೆ

ಕೇವಲ ಒಪ್ಪಂದಗಳನ್ನು ಮಾಡಿಕೊಂಡರೆ ಸಾಲದು. ಅದನ್ನು ಜಾರಿಯಲ್ಲಿ ತರಬೇಕು. ಅದನ್ನು ಪರೀಕ್ಷಿಸಲು ನಿಗದಿತವಾಗಿ ಸೇರಬೇಕು. ಆದರೆ ಗ್ಯಾಟ್ ನಿಗದಿತವಾಗಿ ಸಭೆ ಸೇರುತ್ತಿರಲಿಲ್ಲ. ಜೊತೆಗೆ ಆಚರಣೆಯಲ್ಲಿ ಎದುರಾಗುವ ಸಮಸ್ಯೆಗಳನ್ನು ಪರಿಹರಿಸಲು ಬೇಕಾದ ರಾಜಕೀಯ ಬಲವೂ ಅದಕ್ಕೆ ಇರಲಿಲ್ಲ. ಯಾಕೆಂದರೆ ಅಲ್ಲಿ ಸೇರುತ್ತಿದ್ದವರು ಅಧಿಕಾರಿಗಳು. ಅವರ ಬದಲು ದೇಶದ ವಾಣಿಜ್ಯ ಮಂತ್ರಿಗಳು ಸೇರಿದ್ದರೆ ಸ್ಥಳದಲ್ಲೇ ಸೂಕ್ತ ನಿರ್ಧಾರವನ್ನು ತೆಗೆದುಕೊಳ್ಳಬಹುದು. ಅದಕ್ಕಾಗಿಯೇ ಹುಟ್ಟಿದ್ದು -ಜಾಗತಿಕ ವಾಣಿಜ್ಯ ಸಂಘಟನೆ. ಎರಡು ವರ್ಷಕ್ಕೊಮ್ಮೆ ಆಯಾ ದೇಶದ ಮಂತ್ರಿಗಳು ಸಭೆ ಸೇರಲು ತೀರ್ಮಾನಿಸಲಾಯಿತು. ಮೊದಲ ಸಭೆ ಸಿಂಗಪುರದಲ್ಲಿ ನಡೆಯಿತು. ಮೂರನೆಯ ಮಂತ್ರಾಲೋಚನೆಯ ಸಭೆ ಈಗ ಸಿಯಾಟಲ್ಲಿನಲ್ಲಿ ಮುಕ್ತಾಯವಾಗಿದೆ. ಅದರಲ್ಲಿ ಮತ್ತಷ್ಟು ಕ್ಷೇತ್ರಗಳನ್ನು ಸೇರಿಸುವ ಉದ್ದೇಶದಿಂದ ಹೊಸ ಸುತ್ತಿನ ಮಾತುಕತೆಗೆ ಒತ್ತಾಯಿಸುವ ಉದ್ದೇಶವೂ ಕೆಲವು ರಾಷ್ಟ್ರಗಳಿಗೆ ಇತ್ತು.

ಪಾಪ ಇನ್ನೂ ಉರುಗ್ವೆ ಸುತ್ತಿನ ಒಪ್ಪಂದಗಳನ್ನೇ ಹಿಂದುಳಿದ ರಾಷ್ಟ್ರಗಳು 'ಅರಗಿಸಿಕೊಂಡಿಲ್ಲ'. ಆಗಲೇ ಇನ್ನೊಂದು ಸುತ್ತಿನ ಮಾತುಕತೆ ಎಂದರೆ ಅವರಿಗೆ ಸ್ವಾಭಾವಿಕವಾಗಿಯೇ ಇನ್ನೇನು ಕಾದಿದೆಯೋ ಎಂಬ ಗಾಬರಿ.

## ಸಿಯಾಟಲ್ ಮಂತ್ರಾಲೋಚನಾ ಸಭೆ

ಸಿಯಾಟಲ್‌ಗೆ ಸುಮಾರು ೧೩೫ ರಾಷ್ಟ್ರಗಳು ಬೇರೆ ಬೇರೆ ಉದ್ದೇಶಗಳಿಂದ ಹೋಗಿದ್ದುವು. ಅಮೆರಿಕಾದ ದೃಷ್ಟಿಯಲ್ಲಿ ವಿಶ್ವ ವ್ಯಾಪಾರ ಅಬಾಧಿತವಾಗಬೇಕಾಗಿದ್ದರೆ ಎಲ್ಲ ಉದ್ಯಮಗಳಿಗೂ ಸಮಾನ ಅವಕಾಶವಿರಬೇಕು. ಎಲ್ಲಾ ದೇಶದ ಕಾರ್ಮಿಕರಿಗೂ ಒಂದೇ ರೀತಿಯ ದುಡಿಮೆಯ ನಿಯಮಗಳು ಹಾಗೂ ಕಾನೂನಿರಬೇಕು. ಅದು ಬಿಟ್ಟು ಕೆಲ

ದೇಶಗಳು ಕಾರ್ಮಿಕರಿಗೆ ಕಡಿಮೆ ಕೂಲಿಕೊಟ್ಟು ಬಾಲಕಾರ್ಮಿಕರಿಂದ ದುಡಿಸಿಕೊಂಡು ಉತ್ಪಾದನೆ ಮಾಡಿದರೆ ಸ್ವಾಭಾವಿಕವಾಗಿಯೇ ಅವರ ಸರಕಿನ ಬೆಲೆ ಕಡಿಮೆಯಾಗುತ್ತದೆ. ಆಗ ಪಾಪ ಅಮೆರಿಕಾದ ಉದ್ಯಮಗಳಿಗೆ ಅನ್ಯಾಯವಾದಂತಾಗುವುದಿಲ್ಲವೆ ? ಅಲ್ಲಿನ ಕಾರ್ಮಿಕರಿಗೂ ನಮ್ಮ ದೇಶದ ಬಾಲ ಕಾರ್ಮಿಕರ ಬಗ್ಗೆ ಅಪಾರ ಕರುಣೆ. ಅಮೆರಿಕಾದ ಕಾರ್ಮಿಕ ಹಾಗೂ ಕೈಗಾರಿಕಾ ಸಂಘಟನಾ ಕಾಂಗ್ರೆಸ್‌ನ ಅಧ್ಯಕ್ಷನಾದ ಜಾನ್ ಸ್ವೀನೆಯಂತೂ "ಪ್ರತಿದಿನ ೨೫೦ ಮಿಲಿಯನ್ ಶಾಲೆಗೆ ಹೋಗಬೇಕಾದ ಹಸುಳೆಗಳು ಫ್ಯಾಕ್ಟರಿಯಲ್ಲಿ ದುಡಿಯುತ್ತಿದ್ದಾರೆ. ಸಾವಿರಾರು ಕಾರ್ಮಿಕರು ಹೆಚ್ಚು ಕಡಿಮೆ ಜೀತದಾಳುಗಳಂತೆ ದುಡಿಯುತ್ತಿದ್ದಾರೆ. ಅಷ್ಟೇ ಅಲ್ಲ, ಜೈಲಿನಲ್ಲೂ ದುಡಿಯುತ್ತಿದ್ದಾರೆ. ಇವರ ದುಡಿಮೆಯಿಂದ ಜಗತ್ತಿನ ಬಹುರಾಷ್ಟ್ರೀಯ ಕಂಪೆನಿಗಳೂ, ಸರ್ವಾಧಿಕಾರಿ ರಾಷ್ಟ್ರಗಳೂ ಲಾಭಮಾಡಿಕೊಳ್ಳುತ್ತಿವೆ. ಇದು ಯಾವ ನ್ಯಾಯ" ಅಂತ ಗೋಳಿಡುತ್ತಾನೆ. ಅವನು ಹೇಳುವುದು ನಿಜ. ಆದರೆ ಅಮೆರಿಕಾದಂತಹ ರಾಷ್ಟ್ರಗಳಿಗೆ ಬಡರಾಷ್ಟ್ರಗಳ ಕಾರ್ಮಿಕರ ಈ ದುಸ್ಥಿತಿಯ ಬಗ್ಗೆ ನಿಜವಾಗಿ ಕಾಳಜಿಯಿದ್ದರೆ ಎಷ್ಟು ಚೆನ್ನ. ಅವರ ನಿಜವಾದ ಕಾಳಜಿಯೆಲ್ಲಾ ಈ ನೆಪ ಕೊಟ್ಟು ಬಡರಾಷ್ಟ್ರಗಳ ಉತ್ಪಾದನೆಯನ್ನು ಜಾಗತಿಕ ಮಾರುಕಟ್ಟೆಯಿಂದ ದೂರವಿಡುವುದೇ ಆಗಿದೆ. ಇದೇ ಬಡರಾಷ್ಟ್ರಗಳ ಸಿಟ್ಟಿಗೆ ಕಾರಣ. ಹಾಗಾಗಿ ವಾಣಿಜ್ಯೇತರ ಅಂಶಗಳನ್ನು ವಾಣಿಜ್ಯದೊಂದಿಗೆ ತಳಕು ಹಾಕಬೇಡಿ ಎಂಬುದು ಅವರ ಮನವಿ.

ಆದರೆ ಅವರ ಮಾತನ್ನು ಕೇಳುವವರು ಯಾರು ? ಕೆಲವು ದೇಶದ ಪ್ರತಿನಿಧಿಗಳಿಗಂತೂ ಒಳಗೆ ಹೋಗುವುದಕ್ಕೆ ಸಾಕು ಬೇಕಾಯಿತಂತೆ. ಜಾಗತಿಕ ವ್ಯಾಪಾರ ಸಂಘಟನೆಯು ಒಂದು ಅರ್ಥದಲ್ಲಿ 'ತಾಕತ್ತಿದ್ದವನು ಬದುಕುತ್ತಾನೆ' ಎಂಬ ಡಾರ್ವಿನ್ ಸಿದ್ಧಾಂತವನ್ನು ಒಪ್ಪಿಕೊಂಡು ಅದನ್ನು ನಿಜ ಮಾಡಲು ಹೊರಟ ಸಂಘಟನೆ. ಹಾಗಾಗಿ ಈ ಬಡ ರಾಷ್ಟ್ರಗಳ ಪ್ರತಿನಿಧಿಗಳು ಒಳಗೆ ಹೋದ ಮೇಲೂ ದೊಡ್ಡವರ ಗಲಾಟೆಯಲ್ಲಿ ಇವರ ಧ್ವನಿ ಇತರರಿಗೆ ಕೇಳಿಸುವುದಾದರೂ ಹೇಗೆ ? ಇವರಿನ್ನೂ ಉರುಗ್ವೇ ಸುತ್ತಿನ ಮಾತುಕತೆಯ ಹೊಡೆತದಿಂದಲೇ ಹೊರಬಂದಿಲ್ಲ. ಅದರಲ್ಲೇ ಸಾಕಷ್ಟು ತಾರತಮ್ಯ ಇದೆ. ಹಾಗಾಗಿ ಅದರಲ್ಲಿ ಒಂದಿಷ್ಟು ತಿದ್ದುಪಾಡು ಆಗಬೇಕು ಎಂಬುದು ಅವರ ಬೇಡಿಕೆಯಾಗಿತ್ತು. ಒಂದಿಷ್ಟು ತಿದ್ದುಪಾಡು ಆಗಬಹುದು ಅಂತ ಆಸೆಯಿಟ್ಟುಕೊಂಡಿದ್ದರು ಪಾಪ. ಕೇಳಿ ನೋಡಿಯೇ ಬಿಡೋಣ ಅಂತ ಈ ಸಲ ಕಷ್ಟಪಟ್ಟು ಮನಸ್ಸು ಮಾಡಿದ್ದರು. ಬಡರಾಷ್ಟ್ರಗಳು ಈ ಸಲ ಒಂದಿಷ್ಟು ಒಗ್ಗಟ್ಟಾಗಿಯೇ ವಿರೋಧಿಸಿದವು. ಭಾರತದೊಂದಿಗೆ ಆಫ್ರಿಕಾದ ಹಾಗೂ ಲ್ಯಾಟಿನ್ ಅಮೆರಿಕಾದ ರಾಷ್ಟ್ರಗಳು ಸೇರಿಕೊಂಡವು. ವಾಣಿಜ್ಯದೊಂದಿಗೆ ವಾಣಿಜ್ಯೇತರ ವಿಷಯಗಳನ್ನು ತಳಕು ಹಾಕಬೇಡಿ ಎಂದರು. ಕಾರ್ಮಿಕರ ಜೀವನ ಮಟ್ಟ, ಪರಿಸರ ಇವೆಲ್ಲಾ ನಮಗೆ ನ್ಯಾಯವಾಗಿ ಸಿಗಬೇಕಾದ ಪಾಲನ್ನು ನಮ್ಮಿಂದ ಕಸಿದುಕೊಳ್ಳಲು ಶ್ರೀಮಂತ ರಾಷ್ಟ್ರಗಳ ಹುನ್ನಾರ ಎಂಬುದು ಅವರ ಆರೋಪ. "ಕಡಿಮೆ ಕೂಲಿಯೆಂದರೆ, ಶೋಷಣೆಯೇ ಆಗಬೇಕಾಗಿಲ್ಲ. ಬೇರೆ ಬೇರೆ ದೇಶಗಳ ಅಭಿವೃದ್ಧಿಯ ಮಟ್ಟ ಬೇರೆ ಬೇರೆಯಾಗಿರುತ್ತದೆ. ಇಷ್ಟೂ ತಿಳಿಯುವುದಿಲ್ಲವೇ ಇವರಿಗೆ ?" ಎಂದು ಮಲೇಷಿಯಾದ ಉನ್ನತ ಅಧಿಕಾರಿಯೊಬ್ಬ ಕೂಗಾಡುತ್ತಾನೆ. ಇವರ ಆರೋಪದಲ್ಲಿ ಸತ್ಯವಿಲ್ಲದಿಲ್ಲ. ಆದರೆ ಇವರು ತಮ್ಮ ದೇಶದ ಕಾರ್ಮಿಕರನ್ನು ನಡೆಸಿಕೊಳ್ಳುತ್ತಿರುವ ರೀತಿ ಬೇರೆಯವರು ಬಯ್ಯುವಂತೆ ಇದೆ. ಬಾಲಕಾರ್ಮಿಕರ ಸ್ಥಿತಿಯಂತೂ ಚಿಂತಾಜನಕ. ಶ್ರೀಮಂತ ರಾಷ್ಟ್ರಗಳ ಅನ್ಯಾಯದ ನೀತಿಯನ್ನು ವಿರೋಧಿಸುತ್ತಲೇ ಆ ಬಗ್ಗೆ ಇವರು ನಿಜವಾಗಿ ಮನಸ್ಸು ಮಾಡಬೇಕು.

ಇನ್ನು ಐರೋಪ್ಯ ಹಾಗೂ ಜಪಾನ್ ದೇಶಗಳಿಗೆ ಕೃಷಿಯ ಯೋಚನೆ. ಈ ದೇಶಗಳು ಕೃಷಿಗೆ ಅಪಾರ ಸಬ್ಸಿಡಿಯನ್ನು ನೀಡುತ್ತಿವೆ. ಸಂರಕ್ಷಣೆಯ ಕ್ರಮ ಅನುಸರಿಸುತ್ತಿದ್ದಾರೆ. ಈ ಮೂಲಕ ಬೇರೆ ದೇಶಗಳ ಅಗ್ಗದ ಧಾನ್ಯ ತಮ್ಮಲ್ಲಿಗೆ ಬಾರದಂತೆ ತಡೆಯುತ್ತಿದ್ದಾರೆ. ಆದರೆ 'ಇದು ಮುಕ್ತ ವ್ಯಾಪಾರಕ್ಕೆ ಅಡ್ಡಿ ಮಾಡುತ್ತದೆ. ದುಬಾರಿ ಧಾನ್ಯಗಳಿಗೆ ಯಾಕೆ ರಕ್ಷಣೆ ನೀಡುತ್ತೀರಿ ? ಅಗ್ಗದ ಧಾನ್ಯಗಳು ಬೇರೆ ರಾಷ್ಟ್ರಗಳಿಂದ ಬರಲು ಅವಕಾಶ ಮಾಡಿಕೊಡಿ, ಸಬ್ಸಿಡಿಯನ್ನು ರದ್ದು ಮಾಡಿ' ಅಂತ ಗೋಧಿ ಬೆಳೆಯುವ ಅಮೆರಿಕಾ, ನ್ಯೂಜಿಲ್ಯಾಂಡ್ ಪಟ್ಟು ಹಿಡಿದಿವೆ. ಆದರೆ ಆ ರಾಷ್ಟ್ರಗಳು ಇದಕ್ಕೆ ಒಪ್ಪಲು ತಯಾರಿಲ್ಲ. ಜಪಾನ್ ಹಾಗೂ ಕೊರಿಯಾ "ಕೃಷಿಯನ್ನು ಬೇರೆ ಉತ್ಪಾದನೆಯೊಂದಿಗೆ ಹೋಲಿಸಬೇಡಿ. ಅದರ ಸ್ವರೂಪವೇ ಬೇರೆ. ಅದು ಬಹುಮುಖೀ ಕಾರ್ಯಾಚರಣೆಯುಳ್ಳದ್ದು. ಅದರಲ್ಲಿ ಸಂಸ್ಕೃತಿ, ಬದುಕಿನ ರೀತಿ ಎಲ್ಲಾ ಸೇರಿಕೊಂಡಿದೆ" ಎಂದು ಮೊದಲಿನಿಂದ ವಾದಿಸುತ್ತಾ ಬಂದಿವೆ. ಆದರೆ ಉಳಿದ ರಾಷ್ಟ್ರಗಳು ಆ ಪದದ ಬಳಕೆಯು ಬೇಡ ಅನ್ನುವವರು !

ಈ ಎಲ್ಲಾ ಗಲಾಟೆಯ ತೆರೆಮರೆಯ ನಿಜವಾದ ಸೂತ್ರಧಾರರು ಬಹುರಾಷ್ಟ್ರೀಯ ಕಂಪೆನಿಗಳು. ಹಾಗಾಗಿ 'ಸಂತೆಗಿಂತ ಮುಂಚೆ ಗಂಟುಕಳ್ಳರು' ಅಂತ ಅವರು ಸೇರಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಅದನ್ನು ವಿರೋಧಿಸುವವರಂತೆ ಅವರೇನೂ ಗುಂಡು, ಜೈಲಿಗೆ ಹೆದರಬೇಕಾಗಿಲ್ಲ. ಹೆಚ್ಚಿನಂಶ ಅವರೇ ಅದರ ಪ್ರಾಯೋಜಕರು. ಮತ್ಯಾರು ತಾನೇ ಹಣ ನೀಡಲು ಸಾಧ್ಯ ? ಈ ಸಲದ ಸಿಯಾಟಲ್ ಆತಿಥೇಯರ ಸಮಿತಿಯಲ್ಲಿ ಸ್ಥಳೀಯ ಬಹುರಾಷ್ಟ್ರೀಯ ಕಂಪೆನಿಗಳಾದ ಮೈಕ್ರೋಸಾಫ್ಟ್ ಹಾಗೂ ಬೋಯಿಂಗ್ ಕೂಡ ಇದ್ದದ್ದು ತುಂಬಾ ಜನರಿಗೆ ತಿಳಿದಿರಲಿಕ್ಕಿಲ್ಲ. ಜೊತೆಗೆ ಈ ರೀತಿಯ 'ಬೆಂಬಲಿಗರಿಗೆ' ಜಾಗತಿಕ ವ್ಯಾಪಾರ ಸಂಘಟನೆಯ ಕೆಲ ಚರ್ಚೆಯಲ್ಲಿ ಪಾಲ್ಗೊಳ್ಳುವುದಕ್ಕೂ ಸ್ವಾಗತವಿತ್ತು. ಮಂತ್ರಿವರ್ಯರ ಭೋಜನ ಕೂಟದಲ್ಲೂ ಅವರಿಗೆ ಆಹ್ವಾನವಿತ್ತು. ಆಯಾ ಸಂಸ್ಥೆಯಿಂದ ಎಷ್ಟು ಜನ ಬರಬಹುದು ಎಂಬುದು ಅವರು ಕೊಡುವ ದೇಣಿಗೆಯನ್ನು ಅವಲಂಬಿಸಿತ್ತು. ಉದಾಹರಣೆಗೆ ೨೫೦,೦೦೦ ಡಾಲರ್ ಕೊಟ್ಟವರು 'ಎಮರಾಲ್ಡ್ ಮಟ್ಟದ' ಜನ. ಅವರು ಐದು ಜನರನ್ನು ಕಳುಹಿಸಬಹುದಿತ್ತು. ೧೫೦,೦೦೦ ಡಾಲರ್ ಕೊಟ್ಟವರು "ವಜ್ರದ ಬೆಲೆಯ" ಜನ. ಅವರು ಒಬ್ಬರನ್ನು ಕಳುಹಿಸಬಹುದಿತ್ತು. ಹೀಗೆ ಅವರವರ ಯೋಗ್ಯತೆಗೆ ತಕ್ಕಂತೆ ಮಣೆ ಹಾಕಲಾಗುತ್ತಿತ್ತು. ಜಾಗತಿಕ ಮಾರುಕಟ್ಟೆ ಸಂಘಟನೆಗೂ, ಉದ್ಯಮಕ್ಕೂ ಮೊದಲಿನಿಂದಲೇ ನಂಟು. ಇದರ ಮಾತುಕತೆಯ ಪರಿಧಿಯಲ್ಲಿ ಹಲವಾರು ಒಪ್ಪಂದಗಳನ್ನು ತಂದವರು ಅವರೇ. ಉದಾಹರಣೆಗೆ, ಬೌದ್ಧಿಕ ಆಸ್ತಿ ಹಕ್ಕಿಗೆ ಸಂಬಂಧಿಸಿದ ಮಸೂದೆಯನ್ನು ತರಲು ಕಾರಣರಾದವರು ಮನ್‌ಸ್ಯಾಂಟೊ, ಡ್ಯುಪಾಂಟ್, ಜನರಲ್ ಮೋಟಾರ್ಸ್ ಅಂತಹ ಬಹುರಾಷ್ಟ್ರೀಯ ಕಂಪೆನಿಗಳೇ. ಆಶ್ಚರ್ಯವೆಂದರೆ ಈ ಬಗ್ಗೆ ಅಮೆರಿಕಾದ ಪ್ರತಿನಿಧಿಗಳ ಮಾತು ಥೇಟ್ ಬಹುರಾಷ್ಟ್ರೀಯ ಕಂಪೆನಿಗಳ ಮಾತಿನಂತೆಯೇ ಇತ್ತು. ಅಷ್ಟೇ ಅಲ್ಲ, ಜಾಗತಿಕ ವ್ಯಾಪಾರ ಸಂಘಟನೆಯ ಉನ್ನತ ಅಧಿಕಾರಿಗಳಿಗೆ ಸಾಮಾನ್ಯವಾಗಿ ಈ ಬಹುರಾಷ್ಟ್ರೀಯ ಕಂಪೆನಿಗಳೊಂದಿಗೆ ನಂಟಿರುವುದು ಕೇವಲ ಕಾಕತಾಳೀಯವಿರಲಿಕ್ಕಿಲ್ಲ. ವಿವಾದಾತ್ಮಕ ಡಂಕೆಲ್ ಒಪ್ಪಂದದ ಪ್ರಖ್ಯಾತ ಆರ್ಥರ್ ಡಂಕಲ್ ಮಹಾಶಯ, ಪ್ರಪಂಚದ ಅತಿ ದೊಡ್ಡ ಆಹಾರೋತ್ಪಾದನೆ ಮಾಡುವ ನೆಸ್ಲೆಯ ಅಧಿಕಾರ ವರ್ಗಕ್ಕೆ ಸೇರಿದವನು. ಅದೇ ರೀತಿ ಗ್ಯಾಟ್ ಜನರಲ್ ಆಗಿದ್ದ ಪೀಟರ್ ಸದರ್‌ಲ್ಯಾಂಡ್ ಹಲವಾರು ಸಂಸ್ಥೆಗಳ ಮಾಲಿಕರಾದ ಬ್ರಿಟಿಷ್ ಪೆಟ್ರೋಲಿಯಂನ ಆಡಳಿತ ವರ್ಗದಲ್ಲಿದ್ದಾನೆ. ಹೀಗೆ ಈ ಪಟ್ಟಿಯನ್ನು ಎಷ್ಟು ಬೇಕಾದರೂ ಹಿಗ್ಗಿಸಬಹುದು.

ಮಾತುಕತೆ ಮುರಿದು ಬೀಳಲು ಮತ್ತೊಂದು ಕಾರಣ ಅದು ನಡೆದ ಸ್ಥಳ ಮತ್ತು ಸಮಯ. ಈಗ ನಡೆಯಲಿರುವ ಚುನಾವಣೆಯ ಮೇಲೆ ಕ್ಲಿಂಟನ್ ಕಣ್ಣು. ಹಾಗಾಗಿ ಅಲ್ಲಿ ಕಾರ್ಮಿಕರ ಓಟಿನ ಮೇಲೂ ಅವನ ಕಣ್ಣಿದೆ. ಅದರಿಂದಲೇ ಆತ ಕಾರ್ಮಿಕರ ಗುಣಮಟ್ಟವನ್ನು ಒಂದು ಆಯುಧವಾಗಿ ವಾಣಿಜ್ಯವನ್ನು ತಡೆಯಲು ಬಳಸುವುದಾಗಿ ಹೇಳಿಕೆ ಕೊಟ್ಟು ಅಮೆರಿಕೆಯ ಉದ್ದೇಶವನ್ನು ಬಹಿರಂಗಗೊಳಿಸಿ ಮಾತುಕತೆಗೆ ಇತಿಶ್ರೀ ಹಾಡಿಬಿಟ್ಟ. ಆತ ಮೊದಲಿನಿಂದಲೂ ಈ ಸಮಾವೇಶದ ಬಗ್ಗೆ ಸಿನಿಕನಾಗಿಯೇ ಇದ್ದ ಎಂಬ ಆರೋಪವೂ ಇದೆ.

ಒಟ್ಟಿನಲ್ಲಿ ಹಲವಾರು ಕಾರಣಗಳಿಂದ ಈ ಮಾತುಕತೆ ಕೊನೆ ಮೊದಲಿಲ್ಲದೆ ಮುರಿದುಬಿತ್ತು. ಭಾರತವು ಇನ್ನೊಂದಿಷ್ಟು ಅನಾನುಕೂಲವಾಗುವುದನ್ನು ತಪ್ಪಿಸಿಕೊಂಡಿತೇ ಹೊರತು, ಆಗಿರುವ ತೊಂದರೆಯಿಂದ ಹೊರಬರಲಾಗಲಿಲ್ಲ. ಶ್ರೀಮಂತ ರಾಷ್ಟ್ರಗಳು ಮುಂದಿನ ಮಾತುಕತೆಗೆ ಸಿದ್ಧರಾಗಲು ಪ್ರಾರಂಭಿಸಬಹುದೇ ? ಸಿಯಾಟಲ್ಲಿನ ಉದ್ಯಮಿಗಳು ಪ್ರತಿಭಟನೆಯಲ್ಲಿ ಒಡೆದುಬಿದ್ದ ಗಾಜುಗಳನ್ನು ಆರಿಸಿಕೊಳ್ಳುತ್ತಾ, ಗೋಡೆ ಬರಹವನ್ನು ಅಳಿಸುತ್ತಾ, ನಷ್ಟಕ್ಕೆ ವಿಮೆ ಪಡೆಯುವ ತರಾತುರಿಯಲ್ಲಿ ಇರಬಹುದು. ಅಲ್ಲಿಯ ಜನ ಕರ್ಫ್ಯೂನಿಂದ ಬಿಡುಗಡೆಗೊಂಡಿದ್ದೇ ನೆಮ್ಮದಿಯ ಉಸಿರುಬಿಡುತ್ತಿರಬಹುದು. ಆದರೆ ಭಾರತದಂತಹ ರಾಷ್ಟ್ರಗಳು ಶ್ರೀಮಂತ ರಾಷ್ಟ್ರಗಳ ಮುಂದಿನ ಹುನ್ನಾರಗಳನ್ನು ಹದ್ದಿನ ಕಣ್ಣಿನಿಂದ ಕಾಯುತ್ತಲೇ ಇರಬೇಕು.

**ಟಿ. ಎಸ್. ವೇಣುಗೋಪಾಲ್**
೭೩, ೭ನೇ ಮುಖ್ಯರಸ್ತೆ, ಸರಸ್ವತಿಪುರಂ, ಮೈಸೂರು - ೫೭೦ ೦೦೯



## ಧೂಮಪಾನ ನಿಲ್ಲಿಸಿ

*ಡಾ|| ಎಂ. ಹಾಲಯ್ಯ ಅನು : ಡಾ|| ಸಿ. ಆರ್. ಚಂದ್ರಶೇಖರ್*

**ಪುಟ: 136** **ಬೆಲೆ : ರೂ. 45**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ.ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು- 560 001

*"ದಂ ಮಾರೋ ದಂ" ಎಪ್ಪತ್ತರ ದಶಕದ ಜನಪ್ರಿಯ ಸಿನಿಮಾ ಹಾಡು ಯುವಜನರನ್ನು ಹುಚ್ಚೆಬ್ಬಿಸಿ ಸೃಷ್ಟಿಸಿದ ಹಾನಿ ಅಪಾರ. ಧೂಮಪಾನದ ಚಟಕ್ಕೊಳಗಾಗುವ ಎಳೆಯರಿಗೆ ಕೊಡುವ ಮಾರ್ಗದರ್ಶನ ಅತಿ ಮುಖ್ಯ. ಜನತೆ ಧೂಮಪಾನ ತ್ಯಜಿಸಲಿ ಎಂಬ ಸದಾಶಯದೊಂದಿಗೆ ಬರೆದ ಡಾ|| ಹಾಲಯ್ಯ ಅವರ ಈ ಪುಸ್ತಕದಲ್ಲಿ ಅದರ ದುಷ್ಪರಿಣಾಮದ ಬಗ್ಗೆ ತಿಳಿ ಹೇಳಿ ಜನಜಾಗೃತಿ ಮೂಡಿಸುವ ಪ್ರಯತ್ನ ಮಾಡಲಾಗಿದೆ. ಈ ನಿಟ್ಟಿನಲ್ಲಿ ಎಲ್ಲ ಜವಾಬ್ದಾರಿಯುತ ಜನರ ಪಾತ್ರವೇನು ಎಂಬುದನ್ನು ವಿಶ್ಲೇಷಣೆ ಮಾಡಲಾಗಿದೆ.*

## ಮೋಡಗಳಲ್ಲಿ ಮೊದಲ ಹೆಜ್ಜೆ

*(ವಿವಿಧ ದೇಶಗಳ ಅನುವಾದಿತ ಕಥೆಗಳು)*

*ಅನು : ವೆಂಕಟರಾಜ ಪಾನಸೆ*

**ಪುಟ : 144** **ಬೆಲೆ : ರೂ. 40**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ.ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರಪಾರ್ಕ್ ಪೂರ್ವ, ಬೆಂಗಳೂರು- 1



*ಎಲ್ಲ ದೇಶಗಳಲ್ಲೂ ಎಲ್ಲ ಕಾಲದಲ್ಲೂ ನೋವು. ನಲಿವು. ಆಸೆ ನಿರಾಶೆ, ಕಷ್ಟ ನಷ್ಟಗಳಿಗೆ ಮಿಡಿಯುವ ಮನ, ಸ್ಪಂದಿಸುವ ಹೃದಯ ಒಂದೇ ಎಂಬುದಾಗಿ ಸಾರಿ ಹೇಳುವ ಹತ್ತು ವಿವಿಧ ದೇಶಗಳ 16 ಕತೆಗಳು ಇಲ್ಲಿ ಮನೋಜ್ಞವಾಗಿ ಚಿತ್ರಿತವಾಗಿವೆ. ಅಂತಃಚಕ್ಷು ತೆರೆದರೆ ವಿದೇಶಗಳ ಬದುಕನ್ನು ಅಲ್ಲಿ ಹೋಗದೆಯೇ ಕತೆಗಳ ಮೂಲಕ ತಿಳಿದುಕೊಳ್ಳಬಹುದು. ನೋಡಬಹುದು.*

## ಸಂಕಟಪುರದ ನಾಟಕ ಪ್ರಸಂಗ

*ಆರ್. ಮೋಹನ ನಾಗಮ್ಮನವರ*

**ಪುಟ : 116** **ಬೆಲೆ : ರೂ. 50**

ಮಹಾಮನೆ ಪ್ರಕಾಶನ, ಸರ್ವೋದಯ ನಗರ ಧಾರವಾಡ-580003



*ದಲಿತ ಚಳುವಳಿ, ಗೋಕಾಕ ಚಳುವಳಿ ನಡುವಿನಿಂದ ಬಂದ ಲೇಖಕರ ಹೆಜ್ಜೆ ಗುರುತು ಈ ಕಥಾ ಸಂಕಲನದಲ್ಲಿ ಕಾಣಬಹುದು. ವೈಯುಕ್ತಿಕ ಬದುಕಿನ ಸೋಲು-ಗೆಲುವುಗಳ ಹೊಯ್ದಾಟದಲ್ಲಿ ಬರೆದದ್ದೆಲ್ಲ ಸಾಹಿತ್ಯ ಎಂಬ ಭ್ರಮೆಯನ್ನು ಮೀರಿ, ಬದುಕಿನ ಪ್ರಶ್ನೆಗಳಿಗೆ ಉತ್ತರ ಹುಡುಕುವ ಪ್ರಯತ್ನ ಮಾಡಿದ್ದಾರೆ.*



## ಅನುಭವ ಮಂಟಪ ಮತ್ತು ಇತರ ಬರಹಗಳು

*ದು. ನಿಂ. ಬೆಳಗಲಿ*

**ಪುಟ: 116** **ಬೆಲೆ : ರೂ. 30**

**ವಿಶ್ವಕರ್ನಾಟಕ ಸಾಹಿತ್ಯ ಮಂಟಪ**, 'ಕಾದಂಬರಿ' ಸೋಮವಾರ ಪೇಟೆ, ಬನಹಟ್ಟಿ - 587 311

*ನಾಡಿನ ಸಾಮಾಜಿಕ ಕಳಕಳಿ, ಕ್ರೌರ್ಯ, ಅಸಮಾನತೆ ಇವನ್ನು ಯಶಸ್ವಿಯಾಗಿ ಬಿಂಬಿಸುವ ವಿವಿಧ ಬರಹಗಳ ಸಂಕಲನ. ನಾಗಾಸಾಕಿಯಲ್ಲಿ ನೂರು ಸೂರ್ಯರ ಜ್ವಾಲೆ ಜನರನ್ನು ಬಲಿ ತೆಗೆದುಕೊಂಡ ಪರಿ ಮನಕಲಕುತ್ತದೆ. ಸತಿಪದ್ಧತಿ, ಕರ್ನಾಟಕದ ಕನ್ನಡದ ವ್ಯಥೆಯಂತಹ ಹದಿನಾರು ಪ್ರೌಢ ಬರಹಗಳಿವೆ.*



## ಚುಕ್ಕಿ ಚಿತ್ರಗಳಲ್ಲಿ ಶತಸಾಹಿತ್ಯ ಪ್ರತಿಭೆ

*ಮೋಹನ್ ವೆರ್ಣೇಕರ್*

**ಪುಟ : 220** **ಬೆಲೆ : ರೂ. 200**

**ಕಾವ್ಯಸಿಂಧು ಪ್ರಕಾಶನ**, 615, 68ನೇ ಅಡ್ಡರಸ್ತೆ ಮೊದಲನೇ ಹಂತ, ಕುಮಾರಸ್ವಾಮಿ ಬಡಾವಣೆ, ಬೆಂಗಳೂರು -78.

*ಚುಕ್ಕಿಗಳೆಲ್ಲಾ ಮಾತನಾಡಿಕೊಂಡು ಶಿಸ್ತಿನಿಂದ ನಿಂತರೆ ಸುಂದರ ಭಾವಚಿತ್ರಗಳಾಗುತ್ತವೆ. ಪುಟಗಳು ತೆರೆದಂತೆ ಪರಿಚಯದ ಬರವಣಿಗೆ. ಸಾಹಿತಿಗಳ ಮೆರವಣಿಗೆ. ಒಂದು ನೂರು ಕನ್ನಡದ ಸಾಹಿತ್ಯ ಪ್ರತಿಭೆಗಳನ್ನು ಚುಕ್ಕಿಚಿತ್ರಗಳಲ್ಲಿ ಸೆರೆಹಿಡಿದು ಪುಸ್ತಕರೂಪದಲ್ಲಿ ಕನ್ನಡಿಗರ ಕೈಗಿತ್ತಿರುವುದು ಶ್ರೀ ಮೋಹನ್ ವೆರ್ಣೇಕರ್‌ರವರ ಈ ಶತಮಾನದ ಸಾಹಸ. ಜೊತೆಗೆ ಕನ್ನಡ ಸಾಹಿತ್ಯಕ್ಕೆ ಸಂದ ಗೌರವ ಪ್ರಶಸ್ತಿಗಳ ವಿವರಗಳಿವೆ. ಸಾಹಿತಿಗಳ ಪರಿಚಯವಿದೆ.*

## ಚೆಕಾಫನ ಎರಡು ನಾಟಕಗಳು

*ರೂಪಾಂತರ : ಶ್ರೀನಿವಾಸ್ ವಿ. ಸುತ್ರಾವೆ*

**ಪುಟ: 52** **ಬೆಲೆ : ರೂ. 30**

**ವಿನಯ್ ಪ್ರಕಾಶನ**, 1646/18, ವಿದ್ಯಾನಗರ, ದಾವಣಗೆರೆ - 577 005



*ಆಂಟನ್ ಚೆಕಾಫ್ ರಷ್ಯನ್ ಸಾಹಿತ್ಯದಲ್ಲಿ ಬಲು ದೊಡ್ಡ ಹೆಸರು. ರಷ್ಯನ್ ಸಾಹಿತ್ಯದ ಅನುವಾದ ಕನ್ನಡಿಗರಿಗೆ ಸುಪರಿಚಿತ. ಈಗ "ವಾರ್ಷಿಕೋತ್ಸವ", "ಕಾಡು ಮನುಷ್ಯ" ಎಂಬ ಎರಡು ಸ್ವಾರಸ್ಯಕರ ನಾಟಕಗಳು ರಷ್ಯನ್ ಪಾತ್ರವರ್ಗಕ್ಕೆ ಭಾರತೀಯ ಹೆಸರುಗಳೊಂದಿಗೆ ಮೈತ್ರಿ ಮಾಡಿಕೊಂಡು ಕನ್ನಡಕ್ಕೆ ಬಂದಿವೆ. ರಂಗದ ಮೇಲೆ ಅಭಿನಯಿಸಿದಾಗ ಮೆರಗು ಇನ್ನಷ್ಟು ಹೆಚ್ಚಬಹುದು.*

## ನನ್ನ ಕಥೆ... ನಮ್ಮ ಕಥೆ *(ಒಂದು ಸಾಹಸ ಗಾಥೆ)*

*ಮೂಲ : ಫ್ಲೇವಿಯಾ* *ಅನು : ನೇಮಿಚಂದ್ರ*

**ಪುಟ : 82** **ಬೆಲೆ : ರೂ. 30**

**ನೆಲಮನೆ ಪ್ರಕಾಶನ**, ನಂ. 839, 9ನೇ ಮುಖ್ಯರಸ್ತೆ, 7ನೇ ಅಡ್ಡ ರಸ್ತೆ, ಶ್ರೀನಗರ, ಬೆಂಗಳೂರು - 560 050.



*ಇದೊಂದು ಆತ್ಮ ಚರಿತ್ರೆ. ವೈವಾಹಿಕ ಜೀವನ ಕಲಹಕ್ಕೆ ಸಿಲುಕಿದ ಕಪಿ ಗುಹೆಗೆ. ಅಂಥ ಕೌಟುಂಬಿಕ ಹಿಂಸೆಯ ನರಕವನ್ನನುಭವಿಸಿದ ಸಾಮಾನ್ಯ ಗೃಹಿಣಿ ಫ್ಲೇವಿಯಾ ಕೊನೆಗೆ ಆ ವರ್ತುಲದಿಂದ ಹೊರ ಬಂದು ದಿಟ್ಟತನದಿಂದ ಸಮಾಜವನ್ನೆದುರಿಸಿದ ರೋಚಕ ಕಥೆ ಇಲ್ಲಿದೆ. ಪ್ರಶಸ್ತಿ ಪಡೆದ ಈ ಆತ್ಮಕಥೆ ಕನ್ನಡವಲ್ಲದೆ ಭಾರತದ ಇನ್ನೂ ಐದು ಭಾಷೆಗಳಿಗೆ ಅನುವಾದಗೊಂಡಿದೆ.*



## ವೇದ - ವಿಜ್ಞಾನ (ಕವನ ಸಂಕಲನ) ವೆಂಕಟಯ್ಯ ಅಪ್ಪಗೆರೆ

**ಪುಟ : 60** **ಬೆಲೆ : ರೂ. 30**

**ಅಪ್ಪಗೆರೆ ಬಳಗ**, ಅಪ್ಪಗೆರೆ - 571 501, ಚನ್ನಪಟ್ಟಣ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ

*ವೇದಕ್ಕೂ ವಿಜ್ಞಾನಕ್ಕೂ ಮಧ್ಯೆ ಗೆರೆಯನ್ನೆಳೆಯುತ್ತಲೇ ಸಾಗುವ ಕವನಗಳು ಇವು. ತುಂಬಿದ ಬಸ್ಸಿನಲ್ಲಿಯೇ "ಯೋಗಾಸನ" ಮಾಡಿಸುವ, "ಸೂರ್ಯ"ನನ್ನು ಸ್ಟೌವಿನ ಅಡುಗೆ ಮಾಡುವ (ಸೋಲಾರ್ ಕುಕ್ಕರ್) ಗೃಹಿಣಿ. ಕೊಚ್ಚೆ ಮೋರಿಗಳು ಎದುರಾದಾಗಿನ "ಪ್ರಾಣಾಯಾಮ", ಮೂರು ಕಾಸಿನ ಅಂಬಲಿ ಸೃಷ್ಟಿಸಲಾಗದ ಬಾಬಾಗಳು. ಇಂಥ ವೈಚಾರಿಕ ಕವನಗಳು ನಮ್ಮನ್ನು ಯೋಚಿಸುವಂತೆ ಮಾಡಬಲ್ಲವು.*

*- ರಮಾ ಕುಮಾರಿ*

## ನಾಲ್ಕು ಪದ್ಯಗಳು

ಪದ್ಯ -೧

### ಹುಣ್ಣಿಮೆ ದಿವಸ ಕತ್ತಲು ಯಾಕೆ

ಹುಣ್ಣಿಮೆ ದಿವಸ ಕತ್ತಲು ಯಾಕೆ ಚಂದ್ರನಲ್ಲಿ ಹೋಗಿ ಅಡಗಿಹನು
ಕಾರ್ಗತ್ತಲೆಯು ತುಂಬಿಕೊಂಡಿರಲು ಬೆಳದಿಂಗಳಲ್ಲಿ ಕಳೆದಿಹನು
ಹುಣ್ಣಿಮೆ ಬದಲಿಗೆ ಅಮಾವಾಸ್ಯೆಯು ಯಾಕೆ ಬಂತು ಈ ರಾತ್ರಿಯಲಿ
ನಾಯಿ ನರಿ ಹುಲಿ ಹಾವು ಹಂದಿಗಳು
ತುಂಬಿಕೊಂಡಿರುವ ಈ ಧಾತ್ರಿಯಲಿ
ದಾಖಲಾಗದಂತೆ ನೋಡಿಕೊಳ್ಳುವುದು ಹೇಗೆ ನಮ್ಮ ನಮ್ಮ ಈ ಚರಿತ್ರೆಯಲಿ

ಪದ್ಯ -೨

### ಕಾಡುಗಳ ಮೂಲಕ ಹೋಗಬೇಕಾಗಿದೆ ಹೊಲಕೆ

ಕಾಡುಗಳ ಮೂಲಕ ಹೋಗಬೇಕಾಗಿದೆ ಹೊಲಕೆ
ಗಳಹೊಡೆದು ಗೊಬ್ಬರ ಹಾಕಿ
ಉತ್ತಿ ಬಿತ್ತಿ ಬೆಳೆಯಲು ಸಮೃದ್ಧತೆ ಕಾಣಲು
ಹಕ್ಕಿ ಪಕ್ಕಿ ಹಾಡಲು ದನ ಕರು ಕುಣಿಯಲು
ಬಯಲು ನಿರ್ಬಯಲು ದಿಕ್ಕುದೆಶೆ ದಿಗ್‌ದಿಗಂತ ಕೆನೆಯಲು
ಕಾಡುಗಳ ಮೂಲಕ ಹೋಗಬೇಕಾಗಿದೆ ಹೊಲಕೆ
ಮುಗಿಲನು ತರಲು ಈ ನೆಲಕೆ
ಸಮಾಪ್ತಿ ಮಾಡಲು ಪ್ರಳಯಕೆ.

ಪದ್ಯ -೩

### ಅಸ್ತಮಿಸಿದ ಸೂರ್ಯನ ಬಣ್ಣ

ಅಸ್ತಮಿಸಿದ ಸೂರ್ಯನ ಬಣ್ಣ ಕೆಂಪು ಕೆಂಪಾಗಿಹುದು ಬರುವ
ಕತ್ತಲಿನೊಳಗೆ ಕಂಪನ್ನು ಹರಡುತ್ತಾ ತಂಪು ತಂಪಾಗಿಹುದು
ನಭಕೆ ಕಂಪನು ಹರಡಿ ನೆಲಕೆ ಇಂಪನು ಸೂಸಿ
ಕಡಲಿನ ತುಂಬೆಲ್ಲ ಸುವರ್ಣ ಬಣ್ಣ
ಎಂಥ ಚೆಲುವಿನ ಗಳಿಗೆ ಅಸ್ತಮಿಸುವ ಸೂರ್ಯನ ವರ್ಣ
ಕಿವಿಯಿದ್ದವಗಷ್ಟೇ ಕೇಳಿಸುವುದು ಆ ಸಂಜೆಯ ಗಾನ.

ಪದ್ಯ -೪

### ಈರುಳ್ಳಿಗೆ ಯಾವ ತತ್ವವಿಹುದು

ಈರುಳ್ಳಿಗೆ ಯಾವ ತತ್ವವಿಹುದು ಪದರು ಪದರಾಗಿ
ಪದರು ಪದರಾಗಿ ಬಿಚ್ಚುತ್ತ ಹೋದಂತೆಲ್ಲಾ
ಗಬ್ಬೆಂದು, ನಾರುವುದು
ಅದಕ್ಕಿಲ್ಲ ಯಾವ ತತ್ವ ನೀತಿ ನೇಮ
ಬರೀ ಮಾಡುವದದು ಹಾನಿಗೀನಿ ಹೋಮ
ಟೆಂಗಿನಂತಲ್ಲ ಸಿಹಿನೀರಿನ ಕಡಲದು
ಅಮೃತದ ಒಡಲು

ಚಿನ್ನಾ ವಾಲೀಕಾರ
[illegible] ಗುಲ್ಬರ್ಗಾ - [illegible]

## ಕಣಗಿಲೆ ಗಿಡ

ಅಪ್ಪನು ಸತ್ತು
ಅಂದಿಗೆ ಒಂದು ವರುಷ ಕಳೆದಿತ್ತು,
ಅವನ ಮೇಲೆ ನೆಟ್ಟ
ಕಣಗಿಲೆ ಗಿಡ ಎಲೆ ಹತ್ತು ತೊಟ್ಟಿತ್ತು;
ಅಷ್ಟ ದಿಕ್ಕುಗಳ
ಎಡೆ ಅವನ ಮುಂದಿತ್ತು.
ಭೂಮಿ ಆಕಾರದ ಮುದ್ದೆ ಅನ್ನ,
ಉಪ್ಪು ಕಾರ ಸವರಿದ ಬೇಳೆ, ಸುಗ್ಗೆಹೋಳು
ಅವನಿಗೆ ಪ್ರಿಯವಾದ ಮಾಂಸ,
ಶರಾಬು ಕೂಡ ಅಲ್ಲಿತ್ತು.
ಅವನ ಬರುವಿಗಾಗಿ ಕಾದೆವು ದೂರದಲ್ಲಿ;
ಕಪ್ಪು ಕಾಗಿ ಅಪ್ಪನೆ ಸರಿ, ಹಾರಿ ಬಂದು
ಕುಕ್ಕಿತು ಕೊಕ್ಕಿನಲ್ಲಿ
ಎಂತಹ ತೃಪ್ತಿ ಮುಖದಲ್ಲಿ.

ಗುಡುಗು ಸಿಡಿಲು ಮಿಂಚು
ಮಳೆ ಸುರಿಯಿತು ಧಾರಾಕಾರವಾಗಿ-
ಭೂಮಿ ತಣಿಯುತ್ತಿತ್ತು; ಆ ಗಿಡ
ಹತ್ತು ಎಲೆಗಳ ಪುಟ್ಟ ಗಿಡ ಏಕೋ ಏನೊ
ನನ್ನೊಳಗೆ ಇಳಿಯುತ್ತಿತ್ತು; ಒಳಗೊಳಗೆ
ಆಳವಾಗಿ ಬೆಳೆಯುತ್ತಿತ್ತು.

ಎಂ. ವೆಂಕಟಸ್ವಾಮಿ
೪೨೭, ೧೩ನೇ ಮುಖ್ಯರಸ್ತೆ, ಎಂ.ಸಿ. ಬಡಾವಣೆ, ವಿಜಯನಗರ,
ಬೆಂಗಳೂರು-೪೦

## ಯಾರ ಕನಸು ?

-೧-

ತುಂಬಿ ಹರಿಯುತಿದ್ದ ಅನುಭವದ ಹಳ್ಳವ
ಹನಿ ಹನಿಯಾಗಿ ಚದುರಿಸಿ
ಶರಣರೆದೆ ಸುಟ್ಟು,
ಭಗ್ಗುಡಿಸಿದ ಕಾಯಕ ಜ್ಯೋತಿಯ
ಮಾಡಿದರು
ನಾಗಾರ್ಜುನ ಕೊಂಡದ
ನಂಜಿನರಮನೆಯಲಿ ಕರಕು
ಮಾತೆಂಬೊ ಮಾತು
ಜ್ಯೋತಿರ್ಲಿಂಗವಾಗಬೇಕೆಂಬುದು ಯಾರ
ಕನಸು ?

-೨-

ಅಂದಿನಿಂದ ಇಂದಿನತನ
ಕತ್ತಲುಂಡ ಮನೆ
ಮನದ ಜಂತಿಗಳಲ್ಲೆಲ್ಲ ಜಂತುಗಳದೇ
ಮಿಸುಕಾಟ
ಉಡುತಡಿಯ ಸುತ್ತ
ಅಕ್ಕ ಪ್ರತಿಭಟಿಸಿದ ಮಾತು
ಮಹಾಮನೆಯಲ್ಲೆಲ್ಲ ರಗಳೆ-ರಂಪಾಟ
ಬುಡಕ್ಕೆ ನೀರು ಬಂದಾಗ ದಿಡ್ಡಿ ಬಾಗಿಲು
ವರ್ಣ ಸಂಕರದೊಳಗೇ ಚಿಟುಕು ಮುಳ್ಳು

-೩-

ಅಂದಿನಿಂದ ಇಂದಿನ ತನ
ಅಲ್ಲಿ ಗುಡುಗುಡಿಸಿ
ಇಲ್ಲಿ ಗುಡುಗುಡಿಸಿ
ಬಿಜ್ಜಳರ ಎದೆಯಲ್ಲಿ
ಶರಣರು ಹಚ್ಚಿದ ಕೊಳ್ಳಿ
ಬಸವರಿಲ್ಲದ ಕಲ್ಯಾಣದಲ್ಲೀಗ
ಕುಡುಗೋಲು ಮಸೆತ !
ಅದಕ್ಕೇ ತಲ್ಲಣಿಸಿರಬೇಕು ಸಿಂಗಿರಾಜ
''ಹೇಡಿಗಳೇ....
ಕಪ್ಪಡಿಗೆ ಕದಳಿಗೆ
ಉಳುವಿ ಸಂಗಮಕೆ
ದಿಕ್ಕಪಾಲಾಗಿ ಕಾಲುಕಿತ್ತಿರಯೋ.....''!

-೪-

ಅಂದಿನಿಂದ ಇಂದಿನತನ
ಕಲ್ಯಾಣವಿಲ್ಲ ಸಂಗಯ್ಯಾ...
ಕಾಯಕವಿಲ್ಲ ಬಸವಯ್ಯಾ
ಕೈಲಾಸವಿಲ್ಲ ಸಂಗಯ್ಯಾ
ಕನಸುಗಳಿಲ್ಲ ಬಸವಾ ಬಸವಾ...

ಶಂಕರಯ್ಯ ಆರ್. ಘಂಟಿ
ಡಿ-೧೨, ಸ್ಟಾಫ್ ಕ್ವಾರ್ಟರ್ಸ್, ಗುಲಬರ್ಗಾ
ವಿ. ವಿ. ಆವರಣ, ಗುಲಬರ್ಗಾ- ೫೮೫ ೧೦೬

# ಕನ್ನಡ ಸಾಹಿತ್ಯ ಕಂಡ ದಲಿತ ಚಳವಳಿ : ಕೆಲವು ವಿವಾದಗಳು

**ಕ**ಳೆದ ಕಾಲು ಶತಮಾನದ ಕನ್ನಡ ನಾಡಿನ ದಲಿತ ಚಳವಳಿಯನ್ನು ಕುರಿತು ಅನ್ಯರು ಬರೆಯುವುದಕ್ಕೂ, ದಲಿತ ಜನವರ್ಗದ ಆತ್ಮದಿಂದಲೇ ಆ ಚರಿತ್ರೆ ಬರೆಸಿಕೊಳ್ಳುವುದಕ್ಕೂ ಸ್ವಾಭಾವಿಕವಾಗಿಯೇ ಮೂಲಭೂತ ವ್ಯತ್ಯಾಸವಿದೆ: ಈ ವಿಷಯದಲ್ಲಿ ಸಹಾನುಭೂತಿಪರ ಚಿಂತನೆಗೂ ಸಹಜ ಚಿಂತನೆಗೂ ಆ ಕುರಿತ ಪರಿಕಲ್ಪನೆಯ ನೆಲೆಯಲ್ಲೇ ಇರುವ ಅಂತರವನ್ನು ಗೌಣಗೊಳಿಸಲು ಸಾಧ್ಯವಿಲ್ಲ. ಪ್ರಸ್ತುತ ಚಿಂತನೆ ದಲಿತ ಚಳವಳಿಯನ್ನು ಕುರಿತದ್ದಾಗಿದೆ ಎಂಬುದು ದಿಟವಾದರೂ ಇಡೀ ನಾಡಿನ ಸಾಂಸ್ಕೃತಿಕ ಜೀವನ ಮೌಲ್ಯಗಳ ಸ್ಥಿತ್ಯಂತರದ ಹಿನ್ನೆಲೆಯಲ್ಲಿ ಈ ವಿಷಯವನ್ನು ನೋಡಬೇಕಾಗುತ್ತದೆ.

ದಲಿತ ಚಳವಳಿ ಅನ್ಯ ಯಾವುದೇ ಚಳವಳಿಯಂತಲ್ಲದೆ ಅಥವಾ ಕಾರ್ಮಿಕ ಚಳವಳಿಯ ಸ್ವರೂಪದ್ದಾಗಿರದೆ, ಸಾಹಿತ್ಯ ಮತ್ತು ಸಂಸ್ಕೃತಿಯಂಥ ಕಲಾ ಮಾಧ್ಯಮಗಳನ್ನು ಸಂಪೂರ್ಣವಾಗಿಯೂ ತನ್ನ ಬೆಳವಣಿಗೆಯ ತೆಕ್ಕೆಗೆ ತೆಗೆದುಕೊಂಡೇ ಬೆಳೆದದ್ದಾಗಿದೆ. ತತ್ಪರಿಣಾಮವಾಗಿ ಸಮಕಾಲೀನ ಸಮಗ್ರ ಕನ್ನಡ ಸಾಹಿತ್ಯ, ದಲಿತ ಚಳವಳಿಯನ್ನು ಸಾಹಿತ್ಯಕ ಚಳವಳಿಯನ್ನಾಗಿಯೂ ತನ್ನೊಳಗೆ ಸೇರಿಸಿಕೊಂಡಿರುವಂತೆಯೇ, ಸ್ವತಃ ದಲಿತ ಚಳವಳಿ ಕೂಡ ಪೂರ್ವದ ಹತ್ತು ಶತಮಾನಗಳ ಕನ್ನಡ ಸಾಹಿತ್ಯದ ವಾಹಿನಿಯನ್ನು ಪ್ರಜ್ಞಾಪೂರ್ವಕವಾಗಿಯೂ ಅಧ್ಯಯನಾಸಕ್ತಿಯಿಂದಲೂ ಕೂಡಿಕೊಂಡಿರುವುದನ್ನು ಕಳೆದ ಕಾಲು ಶತಮಾನದ ಕನ್ನಡ ಸಾಹಿತ್ಯದ ಬೆಳವಣಿಗೆಯಿಂದ ಸಾಧಾರವಾಗಿಯೇ ತಿಳಿಯಬಹುದಾಗಿದೆ. ಹಾಗೆಯೇ ಈ ವರ್ಗದ ಜೀವನಾನುಭವವನ್ನು ಅವರೆಗೂ ಕಾಣದಿದ್ದ ಕನ್ನಡ ಭಾಷೆ ಮತ್ತು ಸಾಹಿತ್ಯ, ಆ ಅನುಭವ ದ್ರವ್ಯವನ್ನು ಸ್ವೀಕರಿಸಲೇಬೇಕಾಗಿ ಬಂದ ಅನಿವಾರ್ಯತೆ ಎಂತೋ, ಅಂತೆಯೇ, ಆ ಅನುಭವ ದ್ರವ್ಯವು ಕನ್ನಡ ಭಾಷೆ ಮತ್ತು ಸಾಹಿತ್ಯ ಶರೀರವನ್ನು ಪ್ರವೇಶಿಸುತ್ತಿದ್ದಂತೆಯೇ ಸೈದ್ಧಾಂತಿಕ ನೆಲೆಗಳಲ್ಲಿ ಪಾರಂಪರಿಕ ಮೌಲ್ಯವ್ಯವಸ್ಥೆಯಲ್ಲಿನ ಏರುಪೇರು ಕೂಡ ಅಷ್ಟೇ ಅನಿವಾರ್ಯವಾಗಿ ಪರಿಣಮಿಸಿತು. ಕನ್ನಡ ಕ್ರಾಂತಿಕಾರಿ ಕವಿತೆಗಳನ್ನು, ಚಳವಳಿಯ ಸಮುದಾಯ ತಂಡ, ಬೀದಿ ಬೀದಿಯಲ್ಲಿ ಹಾಡುವ ಮೂಲಕ ಕಾವ್ಯದಂಥ ಶ್ರವಣಮಾಧ್ಯಮದ ಸಾಧ್ಯತೆಗಳನ್ನು ವಿಸ್ತರಿಸಿದರು, ಶ್ರೋತೃವರ್ಗವನ್ನು ಎಂದಿಗಿಂತಲೂ ಅದೆಷ್ಟೋ ಪಾಲು ಹೆಚ್ಚಿಸಿದರು; ನಾಟಕದಂಥ ದೃಶ್ಯ ಮಾಧ್ಯಮವನ್ನು ಸಾಮಾನ್ಯರ ಸ್ತರದವರೆಗೂ ಸರಳಗೊಳಿಸಿ, ಆ ಮೂಲಕ ಪ್ರೇಕ್ಷಕವರ್ಗವನ್ನು ವಿಸ್ತರಿಸಿದರು; ಸಮಾಜ ಜೀವನದ ಸಮಕಾಲೀನ ಸತ್ಯಸಂಗತಿಗಳನ್ನು ಪ್ರೇಕ್ಷಕ ವರ್ಗದೆದುರು, ಬೀದಿ ನಾಟಕಗಳ ಮುಖೇನ ಸಾಕ್ಷಾತ್ಕಾರಗೊಳಿಸಿದ ದಲಿತ ಚಳವಳಿಯ ಕಲಾವಿದರು ಮತ್ತು ಗಾಯಕರು, ಕನ್ನಡದ ಕಡೆಗಣಿತ ಸುತರೋ ಎಂಬಂತೆ, ಕನ್ನಡದ ಒಳಬಾಗಿಲನ್ನು ಪ್ರವೇಶಿಸಿ, ಸಾವಿರ ವರ್ಷಗಳ ಹಿಂದಿನ ಚೆನ್ನಯ್ಯ ಕಕ್ಕಯ್ಯರ ಅಡಿಯಲ್ಲಿ ನೆಲೆಗೊಂಡರು.

ಒಂದೆಡೆ, ದೇವರಾಜ ಅರಸ್ ಸರ್ಕಾರ ಅಸ್ಪೃಶ್ಯರಿಗೂ ಹಿಂದುಳಿದ ವರ್ಗಗಳಿಗೂ ಸಂವಿಧಾನಾತ್ಮಕ ಅವಕಾಶಗಳನ್ನು ಅಣಿಮಾಡತೊಡಗಿತು. ಇನ್ನೊಂದೆಡೆ, ಹಳ್ಳಿಗಳಲ್ಲಿ ಅದೇ ಅಸ್ಪೃಶ್ಯರನ್ನು ಸಾಮೂಹಿಕವಾಗಿ ಅವಮಾನಿಸುವ, ಇಲ್ಲವೆ ಪರಿಸ್ಥಿತಿ ಮಿತಿಮೀರಿದರೆ ಅವರನ್ನು ಕೊಂದೇ ಹಾಕುವ, ಮತ್ತು ಆ ಬಗ್ಗೆ ಒಂದು ಪೊಲೀಸ್ ದೂರು ಕೂಡ ದಾಖಲಾಗದೆ, ಕೊಲೆಗಡುಗರು ತಮ್ಮ ಜಾತಿ ಬಲದಿಂದ, ನಿರಾಯಾಸವಾಗಿ ಅಪರಾಧದಿಂದ ಪಾರಾಗುವಂಥ, ಪ್ರಾಯಶಃ ಕಲ್ಪನೆಗೂ ನಿಲುಕದ ಈ ಬಗ್ಗೆಯ ಘೋರ ಪರಿಸ್ಥಿತಿ ದೇಶಾದ್ಯಂತ ಎಂತೋ, ಅಂತೆಯೇ ಗ್ರಾಮೀಣ ಕರ್ನಾಟಕದಲ್ಲೂ ನಡೆದಿತ್ತು. ಅಸ್ಪೃಶ್ಯರ ಜೀವಗಳ ಬಗೆಗಿನ ಇಂಥದೊಂದು ಗಂಡಾಂತರಕಾರಿಯೂ ಜಟಿಲ ಹಾಗೂ ಸಂಕಷ್ಟದ ನಾಡಿನ ಪರಿಸ್ಥಿತಿಯಲ್ಲಿ, ತಮ್ಮ ಮಂತ್ರಿ ಪದವಿಯನ್ನು ಧಿಕ್ಕರಿಸಿ ಎತ್ತರದ ಸ್ತರದಲ್ಲಿ ಗರ್ಜಿಸಿದವರು ದಿವಂಗತ ಬಿ. ಬಸವಲಿಂಗಪ್ಪನವರು. ತದನಂತರ ಕೇವಲ ಈ ಅನತಿ ಕಾಲದಲ್ಲೇ ಆ ಗರ್ಜನೆಯ ಪ್ರತಿಧ್ವನಿಯೋ ಎಂಬಂತೆ ಅಸಂಖ್ಯಾತ ಅಸ್ಪೃಶ್ಯರು, ಅದರಲ್ಲೂ ಯುವಕರು, ನಾಡಿನಾದ್ಯಂತ ಸಹಜ ಸ್ವಾಭಿಮಾನದಿಂದಲೂ ಜನ್ಮಜಾತ ಮಾನವಶಕ್ತಿಯಿಂದಲೂ ಎದ್ದುನಿಂತು ದನಿಯೆತ್ತಿದರು. ಅಸ್ಪೃಶ್ಯರ ಗುಲಾಮಗಿರಿಯ ವಿರುದ್ಧ ಬಸವಲಿಂಗಪ್ಪನವರು ಅಂದು ಎತ್ತಿದ ಬಂಡಾಯದ ದನಿಯನ್ನು, ದಲಿತ ವರ್ಗಗಳು ಹಾಗೂ ಹಿಂದುಳಿದ ವರ್ಗಗಳು ಅಪೂರ್ವ ಭಾವನಾತ್ಮಕವಾಗಿ ತೆಗೆದುಕೊಂಡರೆ, ಮಾನವ ಹೃದಯದ ಅಸಂಖ್ಯಾತ ದಲಿತೇತರ ಮಹನೀಯರು ಅದನ್ನು ವೈಚಾರಿಕವಾಗಿ ತೆಗೆದುಕೊಂಡರು. ಅದೇ ಅವಮಾನಿತ ಅಸ್ಪೃಶ್ಯರ ಸಮದಲ್ಲಿ ಸಾಲುಗಟ್ಟಿ ಮೆರವಣಿಗೆ ನಡೆದ ದಲಿತೇತರ ಮಹನೀಯರು, ನಾವೆಲ್ಲರೂ ಹೀಗಿರಬೇಕೆಂದು ಇಡೀ ಸಮಾಜ ವ್ಯವಸ್ಥೆಗೆ ತೋರಿಸಿಕೊಟ್ಟರು. ಸಾಮಾಜಿಕ ಮೌಲ್ಯವ್ಯವಸ್ಥೆಯ ಬದಲಾವಣೆಯ ಅನಿವಾರ್ಯತೆಯನ್ನು ಬಹಿರಂಗವಾಗಿ ಸಮರ್ಥಿಸಿದರು ಮತ್ತು ಎತ್ತಿಹಿಡಿದರು. ಅಂದರೆ, ದಲಿತ ಚಳವಳಿ ಹುಟ್ಟಿನಿಂದ ಸ್ವಯಂಭುವಾದರೂ, ಬೆಳವಣಿಗೆಯಲ್ಲಿ ಅದು ಸರ್ವತ್ರ ಮತ್ತು ಸಮಾನ ಮಿತ್ರ, ಅದೇ ಅದರ ಸಹಜ ಸಾಮೂಹಿಕ ಚೇತನ. ಆದ್ದರಿಂದ ದಲಿತ ಚಳವಳಿಯ ಆತ್ಮದಲ್ಲಿ ಈ ಬಗೆಯ ಒಂದು ಸಾಮಾಜಿಕ ಚೇತನ ಒಗ್ಗೂಡಿ ನಿಂತಿತು ಎಂಬುದನ್ನಾಗಲಿ, ಕಳೆದ ಕಾಲುಶತಮಾನದ ಕನ್ನಡ ಸಾಹಿತ್ಯದ ಬೆಳವಣಿಗೆಯ ಜೊತೆಜೊತೆಯಲ್ಲೇ ದಲಿತ ಚಳವಳಿ ಕೂಡ ಕನ್ನಡ ನೆಲದಲ್ಲಿ ನೆಲೆಗೊಂಡಿತೆಂಬುದನ್ನಾಗಲಿ ಅಲ್ಲಗಳೆಯಲು ಸಾಧ್ಯವಿರುವಂತಿಲ್ಲ.

ದುರ್ಬಲ ವರ್ಗಗಳಿಗೆ ಮೀಸಲಾತಿ ಅವಕಾಶಗಳನ್ನು ನೀಡಬೇಕೆಂಬ ಈ ಶತಮಾನದಾರಂಭದ ಮಿಲ್ಲರ್ ಕಮಿಟಿ ವರದಿಯ ಪರವಾಗಿ, ಅಂದಿನ ಹಳೆಯ ಮೈಸೂರು

**ಪ್ರೊ॥ ಮ. ನ. ಜವರಯ್ಯ**

ಪ್ರಾಂತದ "ಜನ ಪ್ರತಿನಿಧಿ ಸಭೆ"ಯಲ್ಲಿ ಘಟಿಸಿಹೋದ ಶೂದ್ರ ಪ್ರತಿನಿಧಿಗಳ ಪ್ರತಿಭಟನೆಯಿಂದ ಸಮಕಾಲೀನ ದಲಿತ ಚಳವಳಿ ಪ್ರೇರಣೆ ಪಡೆದಿಲ್ಲವೆಂಬ ತೀರ್ಮಾನಕ್ಕೆ ಬರುವಂತಿಲ್ಲ. ಮೀಸಲಾತಿ ವಿಷಯದಲ್ಲಿ ಮೈಸೂರು ಸಂಸ್ಥಾನದ ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರಿಗೂ, ಅಂದಿನ ದಿವಾನ್ ವಿಶ್ವೇಶ್ವರಯ್ಯನವರಿಗೂ ಉಂಟಾದ ವಿರಸ ಮತ್ತು ಅದೇ ಮೀಸಲಾತಿ ನೀತಿಯ ವಿರುದ್ಧವಾಗಿ ತಮ್ಮ ದಿವಾನ್‌ಗಿರಿಗೆ ಎಂ. ವಿಶ್ವೇಶ್ವರಯ್ಯನವರ ರಾಜೀನಾಮೆ, ಇದನ್ನು ಆ ಮೊದಲೇ ನಿರೀಕ್ಷಿಸಿದ್ದ ಮಹಾರಾಜರು ವಿಶ್ವೇಶ್ವರಯ್ಯನವರ ರಾಜೀನಾಮೆಯ ನಂತರ ಆ ಸ್ಥಾನದಲ್ಲಿ ಕಾಂತರಾಜೇ ಅರಸರನ್ನು ನೇಮಿಸಿದ ಐತಿಹಾಸಿಕ ಘಟನೆಯಿಂದಾಗಲಿ, ಆ ನಂತರದ ಹಲವು ಕಾರಣಗಳಿಂದಾಗಿ ತಲೆಯೆತ್ತಿದ ಮೈಸೂರು ವಿಶ್ವವಿದ್ಯಾನಿಲಯದ ಶೈಕ್ಷಣಿಕ ಬೆಳವಣಿಗೆಯಿಂದಲೂ, ಸಮಕಾಲೀನ ದಲಿತ ಚಳವಳಿ ಪ್ರಚೋದನೆ ಪಡೆದಿಲ್ಲ ಎನ್ನುವಂತಿಲ್ಲ. ಅನಂತರ ಅರವತ್ತರ ದಶಕದಲ್ಲಿ ಬಸವಲಿಂಗಪ್ಪ, ಬಿ. ರಾಚಯ್ಯ ಮತ್ತು ಹಾವನೂರರ ನೇತೃತ್ವದಲ್ಲಿ ಬೆಂಗಳೂರಿನ ಟೌನ್‌ಹಾಲ್‌ನಲ್ಲಿ ಜರುಗಿದ ಪ್ರಪ್ರಥಮ ದುರ್ಬಲ ವರ್ಗಗಳ ಸಮ್ಮೇಳನದಿಂದಲೂ ಸಮಕಾಲೀನ ದಲಿತ ಚಳವಳಿ ಬಹುಶಃ ನೇರವಾಗಿಯೇ ಪ್ರಭಾವಿತವಾಗಿರುವುದನ್ನು ಕೂಡ ಕಾಣಬಹುದಾಗಿದೆ.

ಹೀಗೆ ಈ ಶತಮಾನದಾರಂಭದಿಂದಲೂ ತನ್ನ ಪಾಡಿಗೆ ತಾನು ನಡೆದುಬರುತ್ತಿದ್ದ ಇಂಥದೊಂದು ಶಕ್ತಿಯನ್ನು ಸ್ವಯಾರ್ಜಿತವಾಗಿಯೇ ತನ್ನದಾಗಿಸಿಕೊಂಡ ದಲಿತ ವರ್ಗ, ಮೊದಲು ಜೀವರಕ್ಷಣೆಗಾಗಿ, ಅನಂತರ ಆತ್ಮಗೌರವದ ಸಲುವಾಗಿ ಅದೇ ದಲಿತ ಚಳವಳಿ ಈ ಘಟ್ಟದಿಂದ ಹಲವು ಹತ್ತು ರೀತಿಯಲ್ಲಿ ಮೊದಲು ಹರಡತೊಡಗಿ, ಆಮೇಲೆ ಬೆಳೆಯತೊಡಗಿತೆಂಬುದನ್ನು ಪ್ರಾಂಜಲ ಮನಸ್ಸಿನ ಪರಿವೀಕ್ಷಕರಾರೂ ಮರೆತಿರಲಾರರು. ದಲಿತ ಹಾಗೂ ಹಿಂದುಳಿದ ವರ್ಗಗಳ ಅದೆಷ್ಟೋ ಸಾವಿರ ಯುವಕರು ಈ ಚಳವಳಿಯಲ್ಲಿ ಧುಮುಕಿದರು. ಜೀವ ಭಾವಗಳಿಗೆ ಬೆಲೆಯಿಲ್ಲದ ಈ ಶಿಕ್ಷಣ ಯಾರಿಗೆ ಬೇಕು ಎಂಬ ಕ್ಷಣಭಂಗುರದ ಆವೇಶಭರಿತರಾದ ಯುವಕರು ಈ ಚಳವಳಿಯಲ್ಲಿ ತೊಡಗಿದವರೆಷ್ಟೋ; ತಮ್ಮ ಆತ್ಮಜಾಗೃತಿ ಈಗ ಮಾತ್ರ ಸಾಧ್ಯವೆಂಬ ಸತ್ಯವನ್ನು ಮನಗಂಡವರೆಷ್ಟೋ; ಸಾಹಿತ್ಯದ ನೆಲೆಗಳಲ್ಲಿ ನಿಂತು, ಕವಿತೆಯಲ್ಲಿ ತಮ್ಮ ದನಿಯೆತ್ತಲು ಯತ್ನಿಸುತ್ತ ನಡೆದ ಈ ಯುವಕರು, ಅಸ್ಪೃಶ್ಯರ ಮೇಲಿನ ನಗರ ಪ್ರದೇಶದ ಅವಮಾನಗಳನ್ನು, ಗ್ರಾಮೀಣ ಪ್ರದೇಶದ ಹತ್ಯೆಗಳನ್ನು ಈಗಲ್ಲದಿದ್ದರೆ ಇನ್ನೆಂದಿಗೂ ತಡೆಗಟ್ಟಲು ಸಾಧ್ಯವಿಲ್ಲವೆಂಬುದನ್ನು, ಈ ಘಟ್ಟದಲ್ಲಿ ಸ್ವಯಂ ಸಾಕ್ಷಾತ್ಕರಿಸಿಕೊಂಡರು ಮತ್ತು ನಾಡಿನಾದ್ಯಂತ ತಮ್ಮ ಚಳವಳಿಯ ಮೂಲಕ ಆ ಸತ್ಯ ಸಂಗತಿಯನ್ನು ಜಗಜ್ಜಾಹೀರು ಪಡಿಸಲಾರಂಭಿಸಿದರು. ದಲಿತರು ಮತ್ತು ದುರ್ಬಲರ ಮೇಲಿನ ಸಾಮೂಹಿಕ ಕೊಲೆ ಸುಲಿಗೆಗಳನ್ನು ಅಂಕಿ ಅಂಶಗಳ

ಸಹಿತ ಈ ಅವಧಿಯಲ್ಲಿ ಬೀದಿ ನಾಟಕಗಳ ಮೂಲಕ ಬೀದಿಗೆ ತರಲಾಯಿತು. ಆಂಧ್ರದ ಕ್ರಾಂತಿಕಾರಿ ಕವಿಗಳ ಜನಪರ ಗೀತೆಗಳನ್ನು ಕನ್ನಡದ [illegible] ಸಮುದಾಯ ಕಂಠಗಳು ಹಾಡತೊಡಗಿದವು. [illegible] ವರ್ಗದ ಕೂಲಿ ನಾಲಿಯ ಕಾರ್ಮಿಕರು ಚಳವಳಿ ಸೇರಿದರು; ಸಾಮಾಜಿಕ ಜೀತಗಾರಿಕೆಯಿಂದ ಸರ್ಕಾರಿ ಜೀತಗಾರಿಕೆಯಲ್ಲಿ ಅನೂಚೀನ ಅವಮಾನಗಳಿಂದ ತಲೆತಗ್ಗಿಸಿದ್ದ ದಲಿತ ವರ್ಗದ ಸರ್ಕಾರಿ ನೌಕರರು, ಈ ಅವಧಿಯಲ್ಲಿ ಮೊದಲ ಬಾರಿಗೆ ತಲೆಯೆತ್ತುವ ಧೈರ್ಯ ಮಾಡಿದರು; ವಿಶ್ವವಿದ್ಯಾನಿಲಯಗಳ ಕ್ಯಾಂಪಸ್‌ಗಳಲ್ಲಿ ದಲಿತ ದುರ್ಬಲ ವರ್ಗಗಳ ವಿದ್ಯಾರ್ಥಿಗಳು ಗುಂಪು ಕಟ್ಟಿದರು: ಅಂಕಪಟ್ಟಿಗಳ ಮೇಲೆ ಜಾತಿಭೇದ ಕಂಡು ಕಂಗಾಲಾದರು. ಲಿಂಗಭೇದ ಕಂಡು ದಿಕ್ಕೆಟ್ಟರು; ಆವರೆಗೂ ಕೇವಲ ಅವರ ಕಣ್ಣುಗಳಲ್ಲಿ ಮಾತ್ರ ಅಡಗಿದ್ದ ಅವರ ಮಾತುಗಳು ನಾಲಿಗೆಗಳ ಮೇಲೆ ಸಿಡಿಯತೊಡಗಿದವು; ಮಾತುಗಳು ಮಥನಿಸಿದವು, ಜಾತಿ ನಿಂದೆಗಳು ವಿಜೃಂಭಿಸಿದವು; ಅವಮಾನಿತರಾದವರು ಗೋಷ್ಠಿ ಮಾಡಿದರು, ಘೋಷಣೆ ಕೂಗಿದರು, ಉಳ್ಳವರಿಗೆ ಮಾತ್ರ ಉಚ್ಚ ಶಿಕ್ಷಣ ಎಂಬ ಉಚ್ಚರ ಅಘೋಷಿತ ಗುಂಡಿಗೆಯನ್ನು ಒಮ್ಮೆ ನಿಜಕ್ಕೂ ಅಳ್ಳಾಡಿಸಿದರು. ಹೀಗೆ ನಡೆದ ದಲಿತ ಚಳವಳಿ ಎಷ್ಟರಮಟ್ಟಿಗೆ ಸಶಕ್ತವಾಗಿ ಬೆಳೆಯತೊಡಗಿತೆಂದರೆ, ಆ ಕಾಲದ ಹಿರಿಯ ತಲೆಮಾರಿನ ಬಹುತೇಕ ದಲಿತವರ್ಗದ ಹಾಲಿ ಮತ್ತು ಮಾಜಿ ಮಂತ್ರಿಶಾಸಕರೆಲ್ಲಾ ಬೆಚ್ಚಿಬೀಳುವಂತಾಯಿತು. ಇದಕ್ಕೆ ಮೂಲಭೂತವೆನಿಸುವ ಕಾರಣ ದಲಿತ ಚಳವಳಿಯ ಮುಂದಿನ ಸಾಲಿನಲ್ಲಿ ಅಂದು ಕಾಣಿಸಿಕೊಂಡ ಮುಖಂಡರಲ್ಲ; ಬದಲಾಗಿ, ಅನ್ಯಾಯ ಮತ್ತು ಅಕಾಲಿಕ ಸಾವಿನೊಡನೆ ಸೆಣಸಲು ಎದ್ದುನಿಂತ ದುರ್ಬಲ ವರ್ಗದ ಜನಶಕ್ತಿ. ಬಹುಶಃ ಈ ಘಟ್ಟದಲ್ಲಿ ಎರಡು ಮಹತ್ವದ ಅಂಶಗಳನ್ನು ಇಲ್ಲಿ ಗಮನಿಸಬೇಕು. ಮೊದಲನೆಯದಾಗಿ, ಕನ್ನಡ ನಾಡಿನಾದ್ಯಂತ ಹೀಗೆ ತಲೆಯೆತ್ತಿದ ದಲಿತ ಚಳವಳಿ, ಈ ಘಟ್ಟದವರೆಗೂ ಅಂಬೇಡ್ಕರರ ಸೈದ್ಧಾಂತಿಕ ಲಾಂಛನ ದಡಿಯಲ್ಲೇ ನಡೆದು ಬಂದಿತು. ಎರಡನೆಯದಾಗಿ, ಒಂದೆಡೆ, ತನ್ನದೇ ಆದ ಶಕ್ತಿಯುಕ್ತಿಯಿಂದ ಮುನ್ನಡೆಯತೊಡಗಿದ ಈ ದಲಿತ ಚಳವಳಿಯಲ್ಲಿ, ಮುಂದಿನ ಸಾಲಿನಲ್ಲಿ ಕಾಣಿಸಿಕೊಂಡ ಕೆಲವು ಮುಖಂಡರ ವ್ಯಕ್ತಿತ್ವದ ನಿಜರೂಪವನ್ನೂ, ಅವರ ಹಣಕಾಸಿನ ಪ್ರಾಮಾಣಿಕತೆಯನ್ನೂ, ದಲಿತ ಚಳವಳಿಯ ನಡುವೆಯೇ ಅಂದು ಅನುಮಾನಿಸಿದವರನ್ನು, ತಡ ಮಾಡದೆ, ತಕ್ಷಣವೇ ಪ್ರತ್ಯೇಕಿಸಿ, ಚಳವಳಿಯ ಗಡಿಯಾಚೆ ಮಾತ್ರ, ಅದೂ ಕಡೆಗಣ್ಣಲಿ ಮಾತ್ರ ನೋಡುವ ನಿಗೂಢ ನೀತಿ ಆರಂಭವಾದರೆ, ಇನ್ನೊಂದೆಡೆ, ಅಂತರಿಕವಾಗಿ ಪ್ರಜಾಪ್ರಭುತ್ವಶೂನ್ಯವಾಗತೊಡಗಿದ್ದ ಈ ದಲಿತ ಚಳವಳಿ, ಎಂದಿದ್ದರೂ ಛಿದ್ರ ಛಿದ್ರ ಎಂದ ಅದೇ ಆ ಕೆಲವು ಕಡೆಗಣಿತರ ಧ್ವನಿ, ಅದು ಎತ್ತಿದ ಅನುಮಾನ ಅಷ್ಟೊಂದು ಕಡಿಮೆ ಅವಧಿಯಲ್ಲೇ ನಿಜವಾಗುತ್ತದೆ ಎಂಬುದು ಅದೇ ಮುಂದಿನ ಸಾಲಿನ ಕೆಲವು ಮುಖಂಡರಿಗಾಗಲಿ, ಆ ಮುಖಂಡರನ್ನು ಆ ಕಾಲದಲ್ಲಿ ಮೋಸೆಸ್, ಜೀಸಸ್, ಪೈಗಂಬರ್ ಎಂಬಂತೆ ಅಂಬರದೆತ್ತರಕ್ಕೆ ಹೊತ್ತು ಮೆರೆದ [illegible] ಇವರನ್ನು ಲೇಖಕರನ್ನಾಗಿ ಸ್ವೀಕರಿಸಿದ ಕನ್ನಡ ಭಾಷೆಗೂ ಸಾಹಿತ್ಯಕ್ಕೂ ಈ ದಲಿತ ಮುಖಂಡರ ಕೊಡುಗೆಯೇನೆಂಬುದನ್ನು ಮಾತ್ರ ಬಹುಶಃ ಪ್ರತ್ಯೇಕ ವಿಷಯವನ್ನಾಗಿಯೇ ನೋಡಬೇಕಾಗುತ್ತದೆ.

ಆದರೆ, ಈ ಘೋರ ಸತ್ಯ ತನ್ನ ಘನಘೋರ ರೂಪವನ್ನೂ ತನ್ನ ಸರ್ವಾಂತರ್ಗತ ಸಕಲ ಬಣ್ಣವನ್ನೂ ತೋರತೊಡಗಿದ್ದು, ಎಂಬತ್ತರ ದಶಕದಲ್ಲಿ, ರಾಮಕೃಷ್ಣ ಹೆಗಡೆ ಕನ್ನಡನಾಡಿನ ಮುಖ್ಯಮಂತ್ರಿಯಾಗಿ ಪಟ್ಟಾಭಿಷಿಕ್ತರಾದ ಮೇಲೆ. ಆದಾಗ್ಯೂ, ಗಮನಾರ್ಹವೆನಿಸುವ ವಿಷಯವೆಂದರೆ, ಅನ್ಯಾಯದ ವಿರುದ್ಧದ ಪ್ರತಿಭಟನೆಗೆ ಕೇವಲ ಒಂದು ಕರೆಗೆ ಇಪ್ಪತ್ತೈದು ಮೂವತ್ತು ಸಹಸ್ರ ದಲಿತ ದುರ್ಬಲರ ಸಂಘಟಿತ ಶಕ್ತಿ, ವಿಧಾನಸೌಧದ ಅಂಬೇಡ್ಕರ್ ಪ್ರತಿಮೆಯ ಅಡಿಯಲ್ಲಿ ನೆರೆದ ಅಕ್ಷೀಣ ಶಕ್ತಿಯನ್ನು ಕಂಡು ಅಂದಿನ ಸರ್ಕಾರದ ಕುರ್ಚಿಗಳೆಲ್ಲಾ ಅಲುಗಾಡತೊಡಗಿದ್ದರೆ ಆಶ್ಚರ್ಯವೇನೂ ಇಲ್ಲ. ಅದೇ ಸಂದರ್ಭದಲ್ಲಿ ಚೂರುಪಾರು ಉಪಕಾರ ಬಿಸಾಕಿ, ಅದೇ ದಲಿತ ಸಂಘಟನಾ ಶಕ್ತಿಯನ್ನು ಸುಲಭವಾಗಿ ಛಿದ್ರಗೊಳಿಸಬಹುದೆಂಬುದನ್ನು ನಿದರ್ಶನಾತ್ಮಕವಾಗಿ ತೋರಿಸಿಕೊಟ್ಟವರು ಕೂಡ ಅದೇ ಮುಂದಿನ ಸಾಲಿನ ದಲಿತ ಮುಖಂಡರು.

ಪ್ರಾಯಶಃ ಇಲ್ಲಿಂದ ಮುಂದೆ, ದಲಿತ ಚಳವಳಿಯ ಮುಂದಿನ ಸಾಲಿನ ಮುಖಂಡರ ಮೇಲೆ ಈ ಹಿಂದೆ ಎದ್ದಿದ್ದ ಅನುಮಾನಗಳು, ಹತ್ತು ಹನ್ನೆರಡು ವರ್ಷಗಳ ನಂತರ ಫಲ ನೀಡತೊಡಗಿದವು; ಸರ್ಕಾರಿ ಸಮಿತಿಗಳ ಸದಸ್ಯ ದಿವಾನಖಾನೆಗಳು ಬಾಗಿಲು ತೆರೆದುಕೊಂಡು, ಈ ಮುಂದಿನ ಸಾಲಿನ ದಲಿತ ಮುಖಂಡರಿಗಾಗಿ ಕಾಯತೊಡಗಿದವು; ಅಕಾಡೆಮಿ ಆಸ್ಥಾನಗಳು ಇವರ ಗೀತೆಗಳನ್ನು ಹಾಡತೊಡಗಿದವು; ಮಂತ್ರಿಮಹೋದಯರ ಮಹಲುಗಳಲ್ಲಿ ಮೊದಲ ಕುರ್ಚಿಗಳು ಇವರಿಗೆ ಮುಂದಾಗತೊಡಗಿದವು. ಬಹುಶಃ ಇದಿಷ್ಟೇ ಆಗಿದ್ದರೆ ಚಿಂತೆಯಿರಲಿಲ್ಲವೇನೋ; ಯಾವುದೇ ನೆಲೆಯಿಲ್ಲದೆ ನೆಲ ಹಿಡಿದಿದ್ದ ಈ ಮುಖಂಡರು, ತಮ್ಮ ನೂತನ ನೇತಾಗಿರಿಯ ಮೂಲಕ ಇದ್ದಕ್ಕಿದ್ದಂತೆಯೇ ನೆಲದೊಡೆಯರಾಗತೊಡಗಿದಾಗ ಮಾತ್ರ, ಒಂದಾನೊಂದು ಕಾಲದಲ್ಲಿ ಇವರನ್ನು ಮೋಸೆಸ್, ಜೀಸಸ್ ಎಂಬಂತೆ ಹೊತ್ತು ಮೆರೆದಿದ್ದ ಮತ್ತು ನಿಜವಾಗಿಯೂ ಇವರನ್ನು ನಂಬಿದ್ದ ಅದೇ ಅನುಯಾಯಿ ಯುವಕರು, ಅಥವಾ ಅದೇ ಹಿಂದಿನ ಸಂಘಟಿತ ದಲಿತ ಶಕ್ತಿ ಇಂದು ನಿಂತ ನೆಲೆ ತಪ್ಪಿ, ನೆಲದೊಳಗೆ ಕುಸಿಯತೊಡಗಿತು. ಜಮೀನ್ದಾರಿ ವ್ಯವಸ್ಥೆಯ ಕ್ರೌರ್ಯದ ವಿರುದ್ಧ [illegible] ಸಂಘರ್ಷ ಹೂಡಿದ ಇದೇ ದಲಿತ ಶಕ್ತಿಗೆ, [illegible] ನೇತೃತ್ವ ನೀಡಬಂದ ಈ ಮುಖಂಡರು ಸುಲಭ ಸರ್ಕಾರಿ ಕೃಪೆಯಲ್ಲಿ ಸ್ವತಃ ಜಮೀನ್ದಾರರಾಗತೊಡಗಿದಾಗ, ಈ ಹಿಂದೆ "ದಲಿತ ಚಳವಳಿಯನ್ನು ನಾವು ಕಟ್ಟಿದ್ದೇವೆ, ಅದರ ಬಗ್ಗೆಯಾಗಲಿ ಅದರ ನಾಯಕರ ಬಗ್ಗೆಯಾಗಲಿ ಮಾತನಾಡುವ ಹಕ್ಕು ಇನ್ನಾರಿಗೂ ಇಲ್ಲ" ವೆಂದು ಆಕ್ರೋಶ ತೋರಿದ ಅದೇ ಅಸಂಖ್ಯಾತ ದಲಿತ ಯುವಕರು, ಆ ಕಡೆ ಸಂಘಟನೆಗಾಗಿ ಶಿಕ್ಷಣ ತೊರೆದು ಶಿಕ್ಷಣದಿಂದಲೂ ವಂಚಿತರಾದರು; ಈ ಕಡೆ ಮುಖಂಡ ಮಹೋದಯರ ಮೋಸಕ್ಕೂ ಗುರಿಯಾದರು. ಬಹುಶಃ ಈ ಸತ್ಯ ಕೆಲವರಿಗೆ ಪಥ್ಯವಾಗಲು ಸಾಧ್ಯವಾಗಲಾರದು. ಏಕೆಂದರೆ, ನಾಡಿನ ದಲಿತ ಚಳವಳಿಯ ಸಂದರ್ಭದಲ್ಲಿ ಗೊಂದಲಗಳನ್ನು ಸೃಷ್ಟಿಸಿದವರು ಈ ಮುಖಂಡರೇ ಹೊರತು, ಕಾರ್ಯಕರ್ತರಲ್ಲವೆಂಬುದು ಕೇವಲ ಅಂದಿಗೆ ಮಾತ್ರವಲ್ಲ, ಅದು ಇಂದಿಗೂ ಸತ್ಯಸಂಗತಿಯಾಗಿದೆ. ತಮ್ಮ ರಾಜಕೀಯ ಖಯಾಲಿಗಳಿಗೆ ದಲಿತ ಚಳವಳಿಯನ್ನು ಛಿದ್ರಗೊಳಿಸಿದ ಈ ದಲಿತ ಮುಖಂಡರು ಅದಕ್ಕೆ ಪೂರಕ ಪ್ರಚಾರ ಮಾಧ್ಯಮವಾಗಿ ಸಾಹಿತ್ಯವನ್ನೂ ಅದರ ವೇದಿಕೆಗಳನ್ನೂ ಬಿಡಲಿಲ್ಲ. ಅಂಬೇಡ್ಕರರು, ಗಾಂಧೀಜಿಯವರು, ಕಾರ್ಲ್ ಮಾರ್ಕ್ಸ್ ಮತ್ತು ಲೋಹಿಯಾ ಮುಂತಾದ ಎಲ್ಲರನ್ನೂ ಈ ದಲಿತ ಮುಖಂಡರು ತಮ್ಮ ರಾಜಕೀಯ ಪ್ರಚಾರದ ಕಟೌಟ್‌ಗಳನ್ನಾಗಿ ಮಾಡಿಕೊಂಡರು. ಏಕೆಂದರೆ, ಒಂದೆಡೆ ಕಾರ್ಯಕರ್ತರ ಅಂತಃಕರಣದಲ್ಲಿ ಸೈದ್ಧಾಂತಿಕವಾಗಿ ನೆಲೆನಿಂತ ಅಂಬೇಡ್ಕರರು ಅನೇಕ ಅವ್ಯಕ್ತ ಕಾರಣಗಳಿಗಾಗಿ ಸ್ವತಃ ದಲಿತ ಸಂಘಟನೆಯ ವೇದಿಕೆಗಳ ಮೇಲೂ ಹೊರಬರಲಾಗಲಿಲ್ಲ. ಇನ್ನೊಂದೆಡೆ ಮುಖಂಡರಲ್ಲಿ ಕೆಲವರು "ಕಾರ್ಲ್ ಮಾರ್ಕ್ಸ್‌ಗೆ ಜಯ್" ಎಂದರೆ, ಮತ್ತೆ ಕೆಲವು ಮುಖಂಡರು "ಮಹಾತ್ಮರಿಗೆ ಉಘೇ" ಎಂದು ಬಗಲುಚೀಲ ಸರಿಪಡಿಸಿಕೊಂಡರು. ಅಂದರೆ, ದಲಿತ ಚಳವಳಿಯನ್ನು ರಾಜಕೀಯದಲ್ಲಿನ ತಮ್ಮ ಖಾಸಗಿ ಖಯಾಲಿಗಳ ವಕ್ರದೃಷ್ಟಿಯಲ್ಲಿ ನೋಡಿದ ಈ ದಲಿತ ಮುಖಂಡರು, ಆ ಮೂಲಕ ಮಾರ್ಕ್ಸ್ ಮತ್ತು ಗಾಂಧೀಜಿ ವಿಚಾರಧಾರೆಗಳನ್ನೆಲ್ಲ ದಲಿತ ಚಳವಳಿಯ ಸಂದರ್ಭದಲ್ಲಿ ವಿಕಾರಗೊಳಿಸಿದರು. ಇದಕ್ಕಿರುವ ಕಾರಣ ಬಹುಶಃ ಸುಲಭವೆನಿಸುವಂತೆಯೂ ಇಲ್ಲ; ಏಕೆಂದರೆ, ಜ್ಯೋತಿರಾವ್ ಫುಲೆ ಅವರ ನಂತರ ಭಾರತದಲ್ಲಿ ಆರಂಭವಾದ ಸಾಮಾಜಿಕ ಸಂಘಟನೆ ಮತ್ತು ಪಕ್ಷ ರಾಜಕೀಯ- ಇವೆರಡಕ್ಕೂ ಇರುವ ಮೂಲಭೂತ ವ್ಯತ್ಯಾಸದ ಇತಿಹಾಸವನ್ನು ಓದುವ ಗೋಜಿಗೇ ಈ ಮುಖಂಡರು ಹೋಗಲಿಲ್ಲ. ಆದ್ದರಿಂದಲೇ ಪಕ್ಷರಾಜಕೀಯದಲ್ಲಿ ಆಸಕ್ತಿ ಇರುವ ದಲಿತ ದುರ್ಬಲ ವರ್ಗದ ಜನ, ದಲಿತ ಚಳವಳಿಯ ಸಂಪರ್ಕದಲ್ಲಿರಬಹುದೇ ಹೊರತು, ಸ್ವತಃ ದಲಿತ ಚಳವಳಿಯನ್ನೇ ತೆಗೆದುಕೊಂಡುಹೋಗಿ ಪಕ್ಷರಾಜಕೀಯದ ಕ್ಷಣ ಭಂಗುರಕ್ಕೆ ಸುರಿಯುವುದು ವಿವೇಕವಲ್ಲವೆಂಬ ಸಾಮಾನ್ಯ ಸಂಗತಿ ಕೂಡ ಈ ತಲೆಯಾಳುಗಳ ತಲೆಗಳಿಗೆ ಹೋಗಲಿಲ್ಲ. ಆದರೆ ಅದೆಷ್ಟೋ ಸಾವಿರ ಅಸ್ಪೃಶ್ಯ ಯುವಕರು ತಮ್ಮ ಸಹಜ ಶಕ್ತಿ ಪ್ರತಿಭೆಗಳನ್ನೆಲ್ಲ ನುಂಗಿಕೊಂಡು, ತಮಗೆ ಪ್ರಾಪ್ತವಾದ ಈ ನತದೃಷ್ಟ ಸ್ಥಿತಿಗಾಗಿ ಮರುಗಿ, ದಲಿತ ಚಳವಳಿಯಲ್ಲಿ ಯಾರನ್ನು ನಂಬಬೇಕೆಂಬುದೇ ತಿಳಿಯದಾಗಿ, ಕಡೆಗೆ ಕಂಗಾಲಾಗಿ ನಿಂತರು; ಈ ಅಸಂಖ್ಯಾತ ಗೊಂದಲಗಳ ಏಕಮಾತ್ರ ಫಲವೋ ಎಂಬಂತೆ, ನಾಡಿನ ದಲಿತ ಚಳವಳಿ ಛಿದ್ರ, ಛಿದ್ರ, ಛಿದ್ರ; ಆದರೆ ಎಷ್ಟು ಛಿದ್ರ ? ಒಬ್ಬೊಬ್ಬ ಮುಖಂಡನದು ಒಂದೊಂದು ಗುಂಪು; ಒಂದೊಂದು ಗುಂಪಿನದೂ ಒಂದೊಂದು ಹೆಸರು; ಜಿಲ್ಲಾವಾರು ಛಿದ್ರ, ಪ್ರಾಂತಾವಾರು ಛಿದ್ರ, ಪಾರ್ಟಿವಾರು ಛಿದ್ರ, ಬಣ್ಣಾವಾರು ಛಿದ್ರ; ಒಂದು ಕೆಂಪು, ಇನ್ನೊಂದು ನೀಲಿ, ಮತ್ತೊಂದು

(೩೩ನೇ ಪುಟ ನೋಡಿ)

# 'ಮಹಾ ನಿರ್ವಾಣ'ಕ್ಕೆ ಇಪ್ಪತ್ತೈದರ ಸಂಭ್ರಮ

ಸಂಕೀರ್ಣವಾದ ಹಾಗೂ ತೊಡಕಿನದಾದ ಆಧುನಿಕ ಬದುಕನ್ನು ತಮ್ಮ ನಾಟಕದಲ್ಲಿ ಯಶಸ್ವಿಯಾಗಿ ಹಿಡಿದು, ಅದಕ್ಕೊಂದು ಸಮರ್ಪಕವಾದ 'ಫಾರ್ಮ'ನ್ನು ನೀಡಿದ ಸತೀಶ ಆಳೇಕರ ಆಧುನಿಕ ಮರಾಠಿ ರಂಗಭೂಮಿಯ ಪ್ರಮುಖ ನಾಟಕಕಾರರಲ್ಲೊಬ್ಬರು. ವಿಜಯ ತೆಂಡೂಲಕರ, ಮಹೇಶ ಎಲಕುಮಚವಾರರ ಸಾಲಿನಲ್ಲಿ ನಿಲ್ಲುವಂತಹ ಮಹತ್ವದ ಲೇಖಕ.

ಇಪ್ಪತ್ತೈದು ವರ್ಷಗಳ ಹಿಂದೆ 1974ರಲ್ಲಿ ಸತೀಶ ಆಳೇಕರ ಬರೆದ 'ಮಹಾ ನಿರ್ವಾಣ'ವು ಆಧುನಿಕ ಮರಾಠಿ ರಂಗಭೂಮಿಗೆ ಹಲವು ಆಯಾಮಗಳನ್ನು ನೀಡಿತು. ವಾಸ್ತವ ನಾವು ತಿಳಿದುಕೊಂಡಂತಿರುವು ದಿಲ್ಲ, ಅದು ಭಿನ್ನವಾಗಿಯೇ ಇರುತ್ತದೆ ಎಂಬುದನ್ನು ಆಳೇಕರ ತೋರಿಸಿಕೊಟ್ಟರು. ವಾಸ್ತವ ಜಗತ್ತನ್ನು ಸೂಕ್ಷ್ಮವಾಗಿ ಅವಲೋಕಿಸಿದರು. ಹಳೇ ನೀತಿ ಮೌಲ್ಯವನ್ನು ಬಹಿರಂಗವಾಗಿಯೇ ಉಪಹಾಸ ಮಾಡಿದರು. ಸಾಮಾಜಿಕ ಸಂಕೇತ ಹಾಗೂ ಧೋರಣೆಗಳನ್ನು ನೇರವಾಗಿ ಉಲ್ಲಂಘಿಸಿ ಆ ಕಾಲದ ತರುಣ ಪೀಳಿಗೆಯ ಮನೋಗತವನ್ನು ವ್ಯಕ್ತಪಡಿಸಿದರು. ಜತೆಗೆ ಕಲೆಯ ನೀತಿ, ಸಂಕೇತಗಳನ್ನೂ ಧಿಕ್ಕರಿಸಿದರು. ಪರಿಣಾಮ: ನಾಟಕಕಾರನ ಸಾಮರ್ಥ್ಯ ಮೀರಿ ಭಾಷೆ ಬೆಳೆಯಿತು.

'ಮಹಾ ನಿರ್ವಾಣ'ದ ಪ್ರಮಾಣ ಸರಳವಾದದ್ದಲ್ಲ, ಅದು ತರ್ಕವನ್ನು ತಿರಸ್ಕರಿಸುತ್ತದೆ. ಆದರೆ ಗುರಿ ವಾಸ್ತವದ ಅರಿವನ್ನು ವಿಸ್ತರಿಸುವಂತಹುದು. ಅದರ ಮಾರ್ಗ ಉದ್ರೇಕದ್ದು. ಈ ನಾಟಕ 'ಪಾರಂಪರಿಕ ಸಂಸ್ಕೃತಿಗೆ, ಅಂಥ ರಂಗಭೂಮಿಗೆ ಆಘಾತ ನೀಡಿದೆ' ಎಂದು ರಂಗ ವಿಮರ್ಶಕರು ಭಾವಿಸಿದರು. ಸುಪ್ತ ಮನಸ್ಸಿನ ಮುದ್ರೆಯನ್ನು ಈ ನಾಟಕದಲ್ಲಿ ಮೂಡಿಸಲಾಗಿದೆ. ಇದು ರಂಗಭೂಮಿಗೆ ನೀಡಿದ ಹೊಸ ಕೊಡುಗೆ ಎಂದೂ ಭಾವಿಸಲಾಯಿತು.

'ಮನುಷ್ಯ ಕ್ಷಣ ಕ್ಷಣಕ್ಕೆ ಹೇಗೆ ಜೀವಿಸುತ್ತಾನೆ. ಜತೆಗೆ ಪ್ರತಿಕ್ಷಣ ಹೇಗೆ ಸಾಯುತ್ತಾನೆ' ಎನ್ನುವುದನ್ನು ಆಳೇಕರ ಸೆರೆ ಹಿಡಿಯುತ್ತಾರೆ. ಇಂಥ ತಾತ್ವಿಕ ವಿಷಯದ ಚರ್ಚೆಯ ಕಾಲಕ್ಕೆ ಲೇಖಕ ಗಂಭೀರವಾದ ಧಾಟಿ ಹಿಡಿಯುವುದಿಲ್ಲ, ಸಿನಿಕತನವನ್ನೂ ತೋರುವುದಿಲ್ಲ. ಆದರೆ ಪ್ರೇಕ್ಷಕನು ಉಪಹಾಸ ಹಾಗೂ ತುಂಟತನದಿಂದಾಗಿ ಭಾವ ವಿವಶತೆಯನ್ನು ಅನುಭವಿಸುತ್ತ ಕಾವ್ಯಮಯವಾದ ಜಗತ್ತನ್ನು ಸೇರಿ ಉಚ್ಛ್ರಾಯ ಸ್ಥಿತಿ ತಲುಪುತ್ತಾನೆ. ಹೊರ ನೋಟಕ್ಕೆ ಅವರ ನಾಟಕ ಓದುವಾಗ, ವೀಕ್ಷಿಸುವಾಗ ಹಾಸ್ಯ ಹೊಮ್ಮಿದರೂ, ಆಳದಲ್ಲೆಲ್ಲೋ ವೇದನೆ ಘಾಸಿಗೊಳಿಸುತ್ತಿರುತ್ತದೆ. ಪ್ರಾಯಶಃ ಚಾಪ್ಲಿನ್‌ನ ಶೋಕಾಭಿನಯದ ಶಬ್ದರೂಪ ಈ ನಾಟಕದಲ್ಲಿ ಮೂಡಿಬಂದಿರುವ ಹಾಗಿದೆ. ಆಗ ಇದನ್ನು 'ಬ್ಲ್ಯಾಕ್ ಹ್ಯೂಮರ್' ಎಂದು ಗದ್ದಲವೆಬ್ಬಿಸಲಾಗಿತ್ತು. ತಮಾಷೆ ಎಂದರೆ, 'ಮಾನವನ ಬದುಕಿನ ಆಳವನ್ನು ಹುಡುಕುವ ನಾಟಕ' ಎಂದೂ ವಿಮರ್ಶಕರು ಮೆಚ್ಚುಗೆ ವ್ಯಕ್ತಪಡಿಸಿದ್ದರು.

ನಾಟಕಕಾರ, ದಿಗ್ದರ್ಶಕ ಹಾಗೂ ಸಿನೇಕಥಾ ಲೇಖಕನೆಂದು ಖ್ಯಾತಿ ಗಳಿಸಿದ ಸತೀಶ ಆಳೇಕರ ಜನಿಸಿದ್ದು 1949ರಲ್ಲಿ. ಕಳೆದ ಇಪ್ಪತ್ತೈದು ವರ್ಷಗಳಿಂದ ರಂಗಭೂಮಿ, ಚಲನಚಿತ್ರ, ಟಿವಿ - ಈ ಕ್ಷೇತ್ರದೊಂದಿಗೆ ನಾಟಕಕಾರ, ನಟನಾಗಿಯೂ ಸಂಬಂಧ ಬೆಳೆಸಿದ್ದಾರೆ. ಮಹಾನಿರ್ವಾಣ, ಮಹಾಪುರ, ಬೇಗಂ ಬರ್ವೇ, ಮಿಕಿ ಮತ್ತು ಮೇಮ್‌ಸಾಬ್, ಅತಿರೇಖಿ, ಶನಿವಾರ-ರವಿವಾರ, ದುಸರಾ ಸಾಮನಾ, ಇತ್ಯಾದಿ ನಾಟಕಗಳ ರಚನೆ, 'ಜೈತರೇ ಜೈತ, ದೋನ್ ಕಥಾ ಗಣ ಪತರಾ ವಾಂಚಿ' ಈ ಸಿನೇಮಾಗಳ ಸಂಭಾಷಣೆ, ಥಿಯೇಟರ್ ಅಕಾಡೆಮಿ ಎಂಬ ಪ್ರಸಿದ್ಧ ಸಂಸ್ಥೆಯ ಸಂಸ್ಥಾಪಕರಲ್ಲೊಬ್ಬ; 73ರಿಂದ 92ರವರೆಗೆ ಈ ಸಂಸ್ಥೆಯ ಪದಾಧಿಕಾರಿ; ಫೋರ್ಡ್ ಫೌಂಡೇಶನ್, ಸಂಗೀತ ನಾಟಕ ಅಕಾಡೆಮಿ ದಿಲ್ಲಿ, ಭಾರತ ಭವನ ಭೂಪಾಲ; ರಾಷ್ಟ್ರೀಯ ನಾಟ್ಯ ವಿದ್ಯಾಲಯದಲ್ಲಿ ಈ ಸಂಸ್ಥೆಯೊಂದಿಗೆ ಸಲಹೆಗಾರನಾಗಿ ಸತತ ಸಂಪರ್ಕ.

ಆಳೇಕರ ಅವರಿಗೆ ದೊರಕಿದ ಪುರಸ್ಕಾರಗಳು- 1994ರಲ್ಲಿ ಸಂಗೀತ ನಾಟಕ ಅಕಾಡೆಮಿ ದಿಲ್ಲಿ, ರಾಷ್ಟ್ರೀಯ ನಾಟಕ ರಚನೆಗಾಗಿ 92ರಲ್ಲಿ ನಾಂದೀಕರ ಸನ್ಮಾನದ ರಾಷ್ಟ್ರೀಯ ಪುರಸ್ಕಾರ; 99- ನಾಟ್ಯದರ್ಪಣ/ಟಾಟಾ ಫೈನಾನ್ಸ್‌ನ ನಾಟ್ಯವರ್ತಿ ಪುರಸ್ಕಾರ; 96ರಲ್ಲಿ ಮರಾಠಿ ನಟನೆಂದು ರಾಜ್ಯ ಪುರಸ್ಕಾರ; 74ರಲ್ಲಿ 'ಜುಲತಾ ಪುಲ' - ಈ ನಾಟಕಕ್ಕೆ ರಾಜ್ಯ ಪ್ರಶಸ್ತಿ; 75ರಲ್ಲಿ 'ಮಹಾನಿರ್ವಾಣ' ನಾಟಕಕ್ಕೆ ಗಡಕರಿ ಪುರಸ್ಕಾರ.

ಸತೀಶರಿಗೆ ಹಲವು ಅಂತರರಾಷ್ಟ್ರೀಯ ಫೆಲೋಶಿಪ್ ಸಹ ದೊರಕಿದೆ. 84ರಲ್ಲಿ ಅಮೆರಿಕನ್ ರಂಗಭೂಮಿಯ ಅಭ್ಯಾಸಕ್ಕಾಗಿ ಏಶಿಯನ್ ಕಲ್ಚರಲ್ ಕೌನ್ಸಿಲ್ ಸಂಸ್ಥೆಯು ಒಂದು ತಿಂಗಳ ಫೆಲೋಶಿಪ್ ನೀಡಿ ನ್ಯೂಯಾರ್ಕಿಗೆ ಕಳಿಸಿತು. 85ರಲ್ಲಿ ದಿಲ್ಲಿಯ ಭಾರತೀಯ ಸಾಂಸ್ಕೃತಿಕ ಪರಿಷತ್ತು ಜರ್ಮನಿ, ಪೋಲೆಂಡ್, ಬ್ರಿಟನ್, ಹಂಗೇರಿಯ ರಂಗಭೂಮಿಯ ವೀಕ್ಷಣೆಗಾಗಿ ಆರು ವಾರ ಕಳಿಸಿತು. 92ರಲ್ಲಿ ಮ್ಯಾಕ್ಸ್ ಮುಲ್ಲರ್ ಭವನವು ಎರಡು ತಿಂಗಳ ಅಭ್ಯಾಸಕ್ಕಾಗಿ ಜರ್ಮನಿಗೆ ಕಳಿಸಿತು. 90ರಲ್ಲಿ ಸಂಗೀತ ನಾಟಕ ಅಕಾಡೆಮಿ ವತಿಯಿಂದ ನ್ಯೂಯಾರ್ಕ್‌ನ ಯುಜಿನ್ ಓನೀಲ್ ಥಿಯೇಟರ್ ಸೆಂಟರಿಗೆ ಎರಡು ವಾರಗಳ ಅಭ್ಯಾಸಕ್ಕೆ, ಭಾರತೀಯ ರಂಗಭೂಮಿಯ ಬಗ್ಗೆ ಉಪನ್ಯಾಸ ನೀಡಲು ಪ್ರಾಧ್ಯಾಪಕ ನೆಂದು ಡ್ಯೂಕ್ ವಿಶ್ವವಿದ್ಯಾಲಯಕ್ಕೆ 95ರಲ್ಲಿ ಭೇಟಿ, ಲಂಡನ್ನಿನಲ್ಲಿ ಜರುಗಿದ 'ಶೇಕ್ಸ್‌ಪಿಯರನ ಥಿಯೇಟರ್-ವಿಚಾರ ಸಂಕಿರಣ'ದಲ್ಲಿ 96ರಲ್ಲಿ ಭಾಗವಹಿಸುವಿಕೆ.



'ಮಹಾ ನಿರ್ವಾಣ' ದ ಸತೀಶ ಆಳೇಕರ (ಸಿಗರೇಟು ಹೊತ್ತಿಸಿದವರು) ಕೃಪೆ : 'ಸಕಾಳ'

'ಘಾಶೀರಾಮ ಕೋತವಾಲ' ಈ ನಾಟಕದ ಸಹ ದಿಗ್ದರ್ಶಕನಾಗಿ ಯೂರೋಪ್, ಅಮೆರಿಕಾ, ಕೆನಡಾ ದೇಶಗಳ ಪ್ರವಾಸ. ಈ ನಾಟಕದ 65 ಪ್ರಯೋಗ. ಸದ್ಯ 96ರಿಂದ ಪುಣೆ ವಿದ್ಯಾಪೀಠದ ಲಲಿತ ಕಲಾ ಅಕಾಡೆಮಿಯಲ್ಲಿ ಪ್ರಾಧ್ಯಾಪಕ ಹಾಗೂ ವಿಭಾಗ ಪ್ರಮುಖನಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಯು.ಜಿ.ಸಿ.ಯ ಹಲವು ಸಮಿತಿಗಳ ಸಲಹೆಗಾರ, ಜೀವ ರಸಾಯನಶಾಸ್ತ್ರದಲ್ಲಿ ಎಂ.ಎಸ್ಸಿ . ಮುಗಿಸಿದ ಸತೀಶ ಹಲವು ಮರಾಠಿ ಚಲನಚಿತ್ರಗಳಲ್ಲಿ ನಟಿಸಿದ್ದಾರೆ.

'ಮಹಾನಿರ್ವಾಣ' ಮರಾಠಿ ನಾಟಕದ ಮೈಲಿಗಲ್ಲು. ಅದರ ವಸ್ತು ಹೀಗಿದೆ: ಒಂದು ಚಾಳು. ಅಲ್ಲಿಯ ನಿವಾಸಿ ಭಾವುರಾವ್ ಸಾಯುತ್ತಾನೆ. ಹೆಣ ಹೊರಲು ಚಾಳಿನ ಮಂದಿ ಸುಸಜ್ಜಿತವಾದ ಚಟ್ಟ ಸಿದ್ಧಪಡಿಸುತ್ತಾರೆ. ಸತ್ತವನ ಮಕ್ಕಳ ಹಾಗೂ ನಾನಾ ಎಂಬ ವ್ಯಕ್ತಿಯ ಹಾದಿ ಕಾಯುತ್ತ ಕೂತ ಚಾಳಿನ ಜನ. ಬೇಸತ್ತು ವೇಳೆ ಕಳೆಯಲು ಸಿನೇಮಾ ಹಾಡಿನ 'ಅಂತಾಕ್ಷರಿ' ಹಾಡಲಾರಂಭಿಸುತ್ತಾರೆ. ಚಟ್ಟ ಹೊತ್ತು ಸ್ಮಶಾನಕ್ಕೆ ಬರುವಷ್ಟರಲ್ಲಿ ಸ್ಮಶಾನ ಮುಚ್ಚುತ್ತದೆ. ಬೇರೆ ಸ್ಮಶಾನದಲ್ಲಿ ತಾನು ಸುಟ್ಟುಕೊಳ್ಳಲು ಸಿದ್ಧನಿಲ್ಲವೆಂದು ಭಾವುರಾವ್ ಹಠ ಹಿಡಿಯುತ್ತಾನೆ. ಚಟ್ಟ ಹೊರುವವರಲ್ಲಿ ಎಡಗಡೆಯಿಂದ ಮೂರನೇ ವ್ಯಕ್ತಿಯು ವಿಧವೆ ತಾಯಿಯ ಮನತುಂಬುತ್ತಾನೆ. ಅವನು ಯಾರು ? ಎಂದು

(೨೮ನೇ ಪುಟ ನೋಡಿ)

**ಚಂದ್ರಕಾಂತ ಪೋಕಳೆ**




ನಮ್ಮ ಪಕ್ಷದ ಮೇಲೆ ನಿಷ್ಠೆ


ಇನ್ನೂ ಎಷ್ಟು ಬುದ್ಧರು ಬದುಕಿದ್ದಾರೋ... ಅವರೆಲ್ಲಾ ಬರಲಿ, ಆಮೇಲೆ ಲೆಕ್ಕ ಮಾಡೋಣ


ಭಯೋತ್ಪಾದನ




ಪ್ರಿಯಾಂಕ ಬಂದರು
ಕಾಂಗ್ರೆ

# ಗಣಪನ ಕೈಗೆ ಎ. ಕೆ. 47

ಹಬ್ಬಗಳೆಂದರೆ ಮನೆಯವರು ಒಟ್ಟಾರೆ ಸಡಗರದಿಂದ ನೆರೆದು ಸಂತೋಷವಾಗಿ ಕಾಲ ಕಳೆಯುವ, ಪ್ರಸನ್ನತೆಯ ದಿನಗಳು. ಆದರೆ, ಇತ್ತೀಚೆಗೆ ಕೆಲವು ಹಬ್ಬಗಳ ಆಚರಣೆ ಭಯಾನಕವಾಗಿದೆ; ಎಲ್ಲರೂ ಆ ಬಗ್ಗೆ ಯೋಚಿಸುವಂತೆಯೂ ಆಗಿದೆ.

ಉದಾಹರಣೆಗೆ ಯುಗಾದಿ. ಇದು ಮುಖ್ಯವಾಗಿ ರೈತರ ಹಬ್ಬ. ತನ್ನ ಎತ್ತುಗಳನ್ನು ಸಿಂಗರಿಸಿ ಪೂಜೆಮಾಡಿ ಸಂತಸ ಪಡುವ ಹಬ್ಬ. ನನ್ನ ಬಾಲ್ಯದಲ್ಲಿ ಉಳುವ ಎತ್ತುಗಳಿಗೆ ಮೈತೊಳೆದು ಕೊಂಬುಗಳಿಗೆ ಬಣ್ಣ ಬಳಿದು ಮಿಂಚು ಅಂಟಿಸಿ ಕಣಗಿಲೆ ಮರ ಹಾಕಿ ಕೋಲಾಹಲ ಮಾಡುತ್ತಾ ಇದ್ದೆವು. ನನ್ನ ತಂದೆ ಊರಿನ ಶಾನುಭೋಗ ಆದ್ದರಿಂದ ಮೊದಲ ಪೂಜೆ ನಮ್ಮ ಮನೆಯಿಂದ ಪ್ರಾರಂಭ ಆಗಬೇಕು. ಊರಿನ ಅಷ್ಟೂ ಜೋಡಿ ಎತ್ತುಗಳು ನಮ್ಮ ಮನೆಯ ಮುಂದೆ ಸಾಲಾಗಿ ನಿಲ್ಲುತ್ತ ಇದ್ದವು. ಅವುಗಳನ್ನು ನೋಡುವುದೇ ಚೆನ್ನ. ಅದೇ ಹಬ್ಬ. ನನ್ನ ತಾಯಿ ಅವುಗಳಿಗೆ ಆರತಿ ಎತ್ತಿ, ಅವುಗಳ ನೆತ್ತಿಗೆ ಅರಸಿನ-ಕುಂಕುಮ ಹಚ್ಚಿ ಕಾಲುಗಳಿಗೂ ಸವರಿ ನಮಸ್ಕಾರ ಮಾಡುತ್ತಾ ಇದ್ದಳು. ಅಕ್ಕಿಯನ್ನೂ ಹಸಿಕಡಲೆಯನ್ನೂ ನೆನೆಸಿ ಅದಕ್ಕೆ ತುಂಡು ತುಂಡು ಕಾಯಿಚೂರುಗಳನ್ನು ಹಾಕಿ ಬೆರೆಸಿ, ಬೊಗಸೆ ಬೊಗಸೆ ಅವುಗಳಿಗೆ ತಿನ್ನಲು ಕೊಡುತ್ತ ಇದ್ದೆವು. ಮೊಸ ಮೊಸ ಎಂದು ಅವು ಉತ್ಸಾಹವಾಗಿ ಬಾಲ ಬೀಸಿ ಉದ್ದಕ್ಕೂ ಬಾಯಾಡಿಸಲು ತೊಡಗುವಾಗ, ನಾವು ಉತ್ಸಾಹದಿಂದ ಕೇಕೆ ಹಾಕುತ್ತಾ ಇದ್ದೆವು. ರೈತನಿಗೆ ಅನ್ನ ಕೊಡುವ ಎತ್ತುಗಳ ಪೂಜೆ ಬೇಡ ಎಂದು ಹೇಳುವ ಎದೆಗಾರಿಕೆ ಯಾರಿಗೆ ಇದೆ ?

ಆದರೆ ಈಗ ಯುಗಾದಿ ಜೂಜಿನ ಹಬ್ಬ. ಮುಖ್ಯವಾಗಿ ಮೂರೆಲೆ ಆಟ ಆಡುವ ಹಬ್ಬವಾಗಿಹೋಗಿದೆ. ನಗರಗಳಿಗಿಂತ ಹಳ್ಳಿಗಳಲ್ಲಿ ಈ ಜೂಜಾಟದ ಖಯಾಲಿ ಜಾಸ್ತಿ. ಬಹುಶಃ ಜೂಜಾಟವೇ ಈ ಹಬ್ಬದ ಆಚರಣೆ ಎನ್ನುವ ಹಾಗೆ ಸಾರ್ವತ್ರಿಕವಾಗಿ ಈ ದಂಧೆ ವ್ಯಾಪಿಸಿಕೊಂಡುಬಿಟ್ಟಿದೆ. ಊರ ಬಳಿ ಇರುವ ತೋಪುಗಳು, ಹಳ್ಳಕೊಳ್ಳದ ಬದಿಯ ಸ್ಥಳಗಳಲ್ಲಿ, ಈ ಮೂರೆಲೆ ಆಟ, ಯುಗಾದಿಯ ದಿನ ಇಡೀ ರಾತ್ರಿ ನಡೆಯುತ್ತದೆ. ಬೀಡಿ, ಸಿಗರೇಟುಗಳ ಹೊಗೆ ಮಂಜಿನ ಹಾಗೆ ವ್ಯಾಪಿಸಿಕೊಳ್ಳುತ್ತದೆ. ಜೂಜಿಗೆ ಕುಳಿತವರ ಕಣ್ಣುಗಳು

**ಶೇಷನಾರಾಯಣ**

ಕೆಂಪಾಗಿ ರಾಕ್ಷಸರಾಗಿಬಿಡುತ್ತಾರೆ. ಈ ಜೂಜು, ಗ್ರಾಮಗಳಲ್ಲಿ ಹೇಗೆ ಯುಗಾದಿಯನ್ನು ಭದ್ರವಾಗಿ ಹಿಡಿದುಕೊಂಡಿತು– ಎಂದು ಅನೇಕ ಸಲ ನಾನು ಚರ್ಚೆ ಮಾಡಿಕೊಂಡಿದ್ದೇನೆ. ಇದಕ್ಕೆ ಉತ್ತರ ಮಾತ್ರ ಕಂಡುಹಿಡಿಯಲು ನನ್ನಿಂದ ಸಾಧ್ಯವಿಲ್ಲ.

ಯುಗಾದಿಯ ಹಾಗೆಯೇ ಮತ್ತೊಂದು, ಗಣಪತಿ ಹಬ್ಬ. ಯುಗಾದಿಯನ್ನು ಜೂಜುಕೋರರು ತಮ್ಮ ತೆಕ್ಕೆಯೊಳಗೆ ತೆಗೆದುಕೊಂಡಿದ್ದರೆ, ಗಣಪತಿ ಹಬ್ಬವನ್ನು ಕೋಮುವಾದಿಗಳು ತಮ್ಮ ಅಸ್ತ್ರವನ್ನಾಗಿ ಬಳಸಿ ಕೊಂಡಿದ್ದಾರೆ; ಬಳಸಿಕೊಳ್ಳುತ್ತಾ ಇದ್ದಾರೆ. ಗಣಪತಿ ವಿಸರ್ಜನೆಯ ದಿನ ಅನ್ಯಮತೀಯರನ್ನು ಕೆಣಕಲೇಬೇಕು, ದೊಂಬಿ ಮಾಡಲೇಬೇಕು– ಎಂದು ಈ ಜನ ಶಪಥ ತೊಟ್ಟಿರುವ ಹಾಗೆಯೇ ಆಚರಣೆಗಳು ನಡೆಯುತ್ತ ಇವೆ. ಗಣಪತಿ ಹಬ್ಬ ಬಂತು ಎಂದರೆ ಕೆಲವು ಸ್ಥಳಗಳು ಸೂಕ್ಷ್ಮ ಪ್ರದೇಶಗಳಾಗಿ ಪೊಲೀಸು ಕಾವಲು ಅಧಿಕಗೊಳ್ಳುತ್ತದೆ.

ಗಣಪತಿ ವಿಸರ್ಜನೆ ಮೊದಲು ಕೆರೆಕಟ್ಟೆಗಳಲ್ಲಿ ನಡೆಯುತ್ತ ಇತ್ತು. ಆದರೆ ಬೆಂಗಳೂರಿನಂಥ ನಗರಗಳಲ್ಲಿ ಈಗ ಕೆರೆಗಳು ಎಲ್ಲಿವೆ ? ಹಾಗಾಗಿ ಜನ ಈಗ ಒಂದು ಉಪಾಯವನ್ನು ಕಂಡುಹಿಡಿದಿದ್ದಾರೆ : ಗಣಪತಿಯನ್ನು ಒಂದು ದೊಡ್ಡ ಬಕೆಟ್ಟಿನೊಳಗೆಯೇ ಮುಳುಗಿಸಿ ಬಿಡುವುದು!

ಕಡಲ ತೀರದ ನಗರಗಳಾದ ಮಂಗಳೂರು, ಮುಂಬಯಿ, ಮದರಾಸು - ಇಂಥವುಗಳಿಗೆ ಈ ಪ್ರಶ್ನೆ ಇಲ್ಲ. ವಿಶಾಲವಾಗಿ ಕಡಲು ಇದೆ. ಎಷ್ಟು ಗಣಪನನ್ನಾದರೂ ತೆಗೆದುಕೊಂಡು ಹೋಗಿ ಅಲ್ಲಿ ಮುಳುಗಿಸಬಹುದು.

1999ರ ಸೆಪ್ಟೆಂಬರ್ ತಿಂಗಳು ಮದರಾಸಿನಲ್ಲಿ – ಮದರಾಸೋ ? ಚೆನ್ನೈಯೋ ? ಮದರಾಸೇ ಇರಲಿ ಬಿಡಿ – ಹೀಗೆ ಗಣಪತಿ ವಿಸರ್ಜನೆಯ ಕಾರ್ಯಕ್ರಮ ನಡೆಯಿತು. ಆದರೆ ಇದು ನಡೆದದ್ದು ಮಾತ್ರ ವಿಶಿಷ್ಟ ಬಗೆ.

ಐದು ಸಾವಿರಕ್ಕೂ ಹೆಚ್ಚಿನ ಗಣಪತಿ ವಿಗ್ರಹಗಳನ್ನು ಅಂದು ಕೊಂಡೊಯ್ದು ತಿರುವಲ್ಲಿಕೇಣಿಯ ಮರೀನಾ ಬೀಚಿನಲ್ಲಿ ವಿಸರ್ಜನೆ ಮಾಡಿದರು. ಸಮುದ್ರ ಇರುವುದರಿಂದ ಪ್ರತಿವರ್ಷವೂ ಸಮುದ್ರದಲ್ಲಿ ವಿಸರ್ಜನೆಯ ಕಾರ್ಯಕ್ರಮ ನಡೆಯುತ್ತದೆ. ಈ ವರ್ಷ ಏನು ಸ್ವಾರಸ್ಯ ?

ಈ ವರ್ಷದ ಗಣಪತಿ ವಿಸರ್ಜನೆಯ ಕಾರ್ಯಕ್ರಮಗಳ ನೇತೃತ್ವ ವಹಿಸಿಕೊಂಡಿದ್ದವರು ಹಿಂದೂ ಮುನ್ನಣಿ ಸಂಸ್ಥೆಯವರು. ಮುನ್ನಣಿ ಎಂದರೆ ತಮಿಳಿನಲ್ಲಿ ಮೊದಲ ಸ್ಥಾನ, ಜಾಗೃತ ಸ್ಥಿತಿ - ಮುಂತಾದ ಅರ್ಥಗಳು ಇವೆ. ಹಿಂದೂಗಳನ್ನು ಒಗ್ಗೂಡಿಸಿ ಅವರನ್ನು ಜಾಗೃತರನ್ನಾಗಿ ಬಡಿದೆಬ್ಬಿಸುವ ಸಂಸ್ಥೆ ಈ ಹಿಂದೂ ಮುನ್ನಣಿ ಸಂಸ್ಥೆ. ಆರ್‌ಎಸ್‌ಎಸ್, ವಿಶ್ವಹಿಂದೂ ಪರಿಷತ್, ಭಜರಂಗದಳ, ಶಿವಸೇನೆಯ ಹಾಗೆ, ಇದೂ ಭಾರತೀಯ ಜನತಾ ಪಕ್ಷದ ಒಂದು ಅಂಗಸಂಸ್ಥೆ ಅಥವಾ ಮಿತ್ರಸಂಸ್ಥೆ.

ಅಂದು ಮಧ್ಯಾಹ್ನ 1.40 ಗಂಟೆಗೆ ಭಾರೀ ಮೆರವಣಿಗೆ ಹೊರಟುಬಿಟ್ಟಿತ್ತು. ಇದರ ಉದ್ಘಾಟನೆಯನ್ನು ಭಾರತೀಯ ಜನತಾ ಪಕ್ಷದ ತಮಿಳು ನಾಡಿನ ಪ್ರಾಂತೀಯ ಕಾರ್ಯದರ್ಶಿ ಲ. ಗಣೇಶನ್ ಉದ್ಘಾಟಿಸಿದರು. ಅವರ ಉದ್ಘಾಟನಾ ಭಾಷಣದ ಸಾರಾಂಶ ಹೀಗೆ :

''ಜಾತಿ ವರ್ಗಗಳ ಭೇದವಿಲ್ಲದೆ ಹಿಂದೂ ಮುನ್ನಣಿ ಸಂಸ್ಥೆ, ಈ ವಿನಾಯಕ ವಿಗ್ರಹಗಳ ಮೆರವಣಿಗೆಯನ್ನು ಯೋಜಿಸಿದ್ದಾರೆ. ಜನ ಮನೆಯಲ್ಲಿದ್ದ ಗಣಪತಿಯನ್ನು ರಸ್ತೆಗಳಿಗೆ ತಂದಿದ್ದಾರೆ. ಈ ಮೆರವಣಿಗೆಯಲ್ಲಿ ಭಾಗವಹಿಸುವವರು ಬಹುಪಾಲು ಯುವಕರೇ. ಇದನ್ನು ನೋಡುವಾಗ ಭಾರತದ ಭವಿಷ್ಯ ಎತ್ತ ಸಾಗುತ್ತ ಇದೆ ಎನ್ನುವುದು ನಮಗೆ ಅರ್ಥವಾಗುತ್ತದೆ.

''ಈ ವರ್ಷ ಹಲವು ವಿಧವಾದ ಗಣಪತಿಯ ವಿಗ್ರಹಗಳು ಇಲ್ಲಿ ಇವೆ. ಒಬ್ಬ ಗಣಪ ಎ. ಕೆ. 47 - ತುಪಾಕಿ ಹಿಡಿದಿದ್ದಾನೆ. ಮತ್ತೊಬ್ಬ ಗಣಪ ಫಿರಂಗಿಯ ಮೇಲೆ ಕುಳಿತಿದ್ದಾನೆ. ಇನ್ನೊಬ್ಬ ಗಣಪ ಬಿಲ್ಲುಬಾಣ ಹಿಡಿದಿದ್ದಾನೆ. ಹಿಂದೂಗಳ ಐಕಮತ್ಯವನ್ನು ದೇಶಭಕ್ತಿಯನ್ನು ಮೆರೆಸುವ ಹಾಗೆ ಇಲ್ಲಿ ಆಚರಣೆ ನಡೆಯುತ್ತ ಇದೆ.

''ವಿನಾಯಕನಿಗೆ ಒಂದು ಕೈಯಲ್ಲಿ ಮಾತ್ರ ಆಯುಧ ಇದೆ. ಮತ್ತೊಂದು ಅಭಯ ಹಸ್ತ. ಭಕ್ತರಿಗೆ ಅಭಯ ನೀಡುವಂಥದ್ದು. ಮತ್ತೊಂದು ಕೈ ಆಕ್ರಮಣಕಾರರನ್ನು ಹೊಡೆದೋಡಿಸುತ್ತದೆ. ಪರಾಕ್ರಮವೂ ವಿವೇಕವೂ ದೇವರಿಗೆ ಮಾತ್ರ ಅಲ್ಲ, ಅಧಿಕಾರಸೂತ್ರ ಹಿಡಿದಿರುವವರಿಗೂ ಬೇಕಾಗುತ್ತದೆ.

''ಪಾಕಿಸ್ತಾನೀಯರಿಗೆ ಪರಾಕ್ರಮ ಇತ್ತು. ಆದರೆ ವಿವೇಕ ಇರಲಿಲ್ಲ. ವಾಜಪೇಯಿಯವರಿಗೆ ಪರಾಕ್ರಮ-ವಿವೇಕ ಎರಡೂ ಇವೆ. ಆದ್ದರಿಂದಲೇ ಅವರು ಸುದ್ದಿ ತಿಳಿದೊಡನೆ ಶತ್ರುಗಳನ್ನು ಸಂಹಾರ ಮಾಡಿ ಹೊರದಬ್ಬಿಬಿಟ್ಟರು.''

---

(೨೫ನೇ ಪುಟದಿಂದ)

ಕಂಡುಹಿಡಿಯಲು ನಾನಾ, ಭಾವುರಾವ್ ಒಂದೆಡೆ ಸೇರುತ್ತಾರೆ.ಅವನು ವೇಷ ಬದಲಾಯಿಸಿ ಬಂದ ಭಾವುರಾವ್ !

ಹೀಗೆ ಈ ಜಗತ್ತಿನ ತಪ್ಪು ಜೀವನ ಕ್ರಮವನ್ನು ವಿಚಿತ್ರವಾಗಿ ನಾಟಕಕಾರ ಚಿತ್ರಿಸುತ್ತಾನೆ. 'ಮಹಾ ನಿರ್ವಾಣ'ದ ಆಶಯ, ಶೈಲಿ, ಅತ್ಯಂತ ಸಹಜವಾಗಿ ಮೂಡಿಬಂದಿದೆ. ಭಾಷೆಗೆ ಸ್ವಂತಿಕೆಯಿದೆ. ತನ್ನದೇ ಆದೊಂದು ಛಾಪಿದೆ. ನಾಟಕದಲ್ಲಿ ಹಲವು 'ರಿಚ್ಯುವಲ್ಸ್'ಗಳು ಬರುತ್ತವೆ. ಚಟ್ಟ ಕಟ್ಟುವ ರೀತಿ ಸೊಗಸಾಗಿದೆ. ಪಿಂಡ ನಿರ್ಮಿಸುವಲ್ಲೂ ಕೌಶಲ್ಯವಿದೆ. ಭಾಷೆಗೂ ಹಲವು ಆಯಾಮಗಳಿವೆ. ನಾಟಕದ ಕ್ರಿಯೆ, ಗತಿ ಸರಿಯಾಗಿ ಹೊಂದಿಸದಿದ್ದರೆ 'ಬೋರ್' ಹೊಡೆಯುವ ಸಾಧ್ಯತೆ ಬಗ್ಗೆ ವಿಮರ್ಶಕರು ಎಚ್ಚರಿಸುತ್ತಾರೆ.

ಈಗ 'ಮಹಾನಿರ್ವಾಣ'ಕ್ಕೆ ಇಪ್ಪತ್ತೈದರ ಸಂಭ್ರಮ. 'ಥಿಯೇಟರ್ ಅಕಾಡೆಮಿ' ನಾಟಕೋತ್ಸವ ಆಚರಿಸುತ್ತಿದೆ. ಅಲ್ಲಲ್ಲಿ ಪರಿಸಂವಾದ, ವಿಚಾರ ಸಂಕಿರಣ ನಡೆಯುತ್ತಿದೆ.

ಮನುಷ್ಯನ ಸಾವು-ಬದುಕನ್ನು ರೂಪಿಸುವ ಇಂಥ ನಾಟಕಕ್ಕೆ ಎಂದಿಗೂ ಸಾವಿಲ್ಲ !

ಚಂದ್ರಕಾಂತ ಪೋಕಳೆ
[illegible] ಬೆಣಕಿಹಾಳ - ೫೯೧ ೨೧೮,
[illegible]

ಕಾರ್ಗಿಲ್ ಯುದ್ಧದ ಬಗೆಯನ್ನು ಮತೀಯವಾದಿಗಳು ತಮ್ಮ ಪ್ರಚಾರಕ್ಕೆ ಬಳಸಿಕೊಳ್ಳುವ ರೀತಿ ಇದು. ಯುದ್ಧದಲ್ಲಿ ಪ್ರಾಣ ತೆತ್ತವರು ಯಾರೋ, ಇಲ್ಲಸಲ್ಲದ ಪ್ರಚಾರ ಮಾಡಿ ಲಾಭ ಗಳಿಸಿಕೊಳ್ಳುತ್ತ ಇರುವವರು ಯಾರೋ !

ಸರಿ, ಈ ಭಾರೀ ಮೆರವಣಿಗೆಯನ್ನು ಐಸ್ ಹೌಸ್ ಬಳಿಯ ಮಸೀದಿ ಮಾರ್ಗವಾಗಿ ಹೋಗಲು ಬಿಡದೆ, ಭಾರತಿ ರಸ್ತೆಯ ಮೂಲಕ ಕಡಲ ದಂಡೆಗೆ ಹೋಗ ಬೇಕೆಂದು, ಪೊಲೀಸರು ಮುಂಜಾಗರೂಕತೆಯ ಕ್ರಮ ವನ್ನು ತೆಗೆದುಕೊಂಡಿದ್ದರು. ಸಹಸ್ರ ಸಹಸ್ರ ಪೊಲೀಸರು ಲಾರಿಗಳನ್ನು ಹಿಡಿದು ಅಲ್ಲಿ ನಿಂತು, ಈ ಮಾರ್ಗದಲ್ಲಿ ಯಾರೂ ನುಸುಳದಂತೆ ಕಟ್ಟೆಚ್ಚರ ವಹಿಸಿದ್ದರು.

ಆದರೂ ಈ ಮೆರವಣಿಗೆ ತಿರುವಲ್ಲಿಕೇಣಿಯ ಘೋಷಾ ಆಸ್ಪತ್ರೆಯ ಬಳಿ ಬಂದಾಗ, ಗುಂಪಿನಲ್ಲಿ ಗುಸುಗುಸು ಪ್ರಾರಂಭವಾಯಿತು. ಮೆರವಣಿಗೆಯಲ್ಲಿ ಪಾಲುಗೊಂಡವರಲ್ಲಿ ಕೆಲವರು– ಅವರು ಯಾರು ಎಂದು ಹೇಳಬೇಕಾಗಿಲ್ಲವಲ್ಲ– ಬೆಲ್ಸ್ ರೋಡು ಮಾರ್ಗವಾಗಿ ಮಸೀದಿಯ ಮುಂದೆಯೇ ಹೋಗ ಬೇಕೆಂದು ಪಟ್ಟು ಹಿಡಿದರು. ಆದರೆ ಪೊಲೀಸರು ಬಿಡಲಿಲ್ಲ. ಲಘು ಲಾಠಿ ಪ್ರಹಾರ ಮಾಡಿ ತಾವು ಸೂಚಿಸಿದ ಮಾರ್ಗದಲ್ಲಿಯೇ ಹೋಗುವಂತೆ ಏರ್ಪಾಟು ಮಾಡಿದರು.

ಪೊಲೀಸರು ತುಂಬಾ ಬಿಗಿಯಾಗಿ ಕಟ್ಟೆಚ್ಚರ ತೆಗೆದುಕೊಳ್ಳದಿದ್ದರೆ ಅಂದು ಅಲ್ಲಿ ಅನಾಹುತವೇ ನಡೆಯುತ್ತಿತ್ತು, ತಮಿಳುನಾಡಿನ ಹಿರಿಯ ಪೊಲೀಸು ಅಧಿಕಾರಿಗಳು ಎಲ್ಲರೂ ಅಲ್ಲಿದ್ದು, ಪರಿಸ್ಥಿತಿ ಹದಗೆಡದ ಹಾಗೆ ನೋಡಿಕೊಂಡರು.

ಎಂದರೆ ಗಣಪತಿಯ ವಿಸರ್ಜನೆ ಇಲ್ಲಿ ಭಕ್ತಿಯ ಒಂದು ಕಾರ್ಯಕ್ರಮ ಅಲ್ಲ, ಒಂದು ಪ್ರಶ್ನೆಯನ್ನು ಹುಟ್ಟು ಹಾಕಬೇಕು; ದೊಂಬಿ ಮಾಡಬೇಕು. ಆ ಮೂಲಕ ಪ್ರಚಾರ ಗಿಟ್ಟಿಸಬೇಕು. ತಮ್ಮ ಬೇಳೆ ಬೇಯಿಸಿಕೊಳ್ಳಬೇಕು.

ಇಂಥ ಸಂಭವಗಳು ಭಾರತಾದ್ಯಂತ ನಡೆದುಕೊಂಡೇ ಇವೆ. ಗಣಪತಿಯ ಹಬ್ಬ ಎಂದರೆ ಅದು ಒಂದು ದೊಂಬಿಯ ಹಬ್ಬ ಎನ್ನುವ ಹಾಗೆಯೇ ಮಾಡಿಬಿಟ್ಟಿದ್ದಾರೆ. ನಮ್ಮ ಹಬ್ಬಗಳಿಗೂ ಜಾತಿಯ ಬಣ್ಣ ಬಳಿದು ಕೆಸರು ಎರಚುತ್ತಿದ್ದಾರೆ.

ಈದ್ಗಾ ಮೈದಾನದಲ್ಲಿ ಪ್ರತಿ ವರ್ಷ ಹುಬ್ಬಳ್ಳಿಯಲ್ಲಿ ಗೋಲೀಬಾರ್. ಅದು ಮುಗಿಯಿತು ಎಂದೊಡನೆ ಬಾಬಾಬುಡನ್‌ಗಿರಿ. ಆಮೇಲೆ ಪೋಪ್‌ಜಾನ್‌ಪಾಲ್.

'ನಮ್ಮ ಧರ್ಮದ ವಿಚಾರದಲ್ಲಿ ಯಾರೂ ಮೂಗು ತೂರಿಸಕೂಡದು' ಎಂದು ಮಾತುಮಾತಿಗೂ ಬೊಗಳೆ ಹೊಡೆಯುವ ಈ ಮತೀಯವಾದಿಗಳು, ಜಗತ್ತಿನ ಕೋಟ್ಯಂತರ ಜನರಿಗೆ ಆರಾಧ್ಯ ದೈವವಾಗಿರುವ ಪೋಪರು 'ಮತಪ್ರಚಾರಕ್ಕಾಗಿಯೇ ಈ ನಾಡಿಗೆ ಬರುತ್ತಿದ್ದಾರೆ' ಎಂದು ಬೊಬ್ಬೆ ಹೊಡೆಯುವುದು ಯಾಕೆ ? ನಮ್ಮ ಮಠಾಧೀಶರು ವಿದೇಶಗಳಿಗೆ ಹೋಗುವಾಗ - ಎಷ್ಟೋ ಸ್ವಾಮಿಗಳು ಹೋಗಿದ್ದಾರೆ, ಹೋಗುತ್ತಾ ಇದ್ದಾರೆ - ಅಲ್ಲಿನ ಜನರೂ ನಮ್ಮವರ ಸಣ್ಣತನ ಮೆರೆಯುತ್ತಾರೆಯೆ ?

ನನಗೆ ಇಲ್ಲಿ ಆಶ್ಚರ್ಯವಾಗಿ ಕಾಣುವುದು ತಿರುವಲ್ಲಿಕೇಣಿಯ ಮರೀನಾ ಸಮುದ್ರದಂಡೆ. ಇಲ್ಲಿಯೇ ಸಮಾಜ ಸುಧಾರಕ ಪೆರಿಯಾರ್ ಪ್ರಚಂಡ ಭಾಷಣ ಮಾಡುತ್ತ ಇದ್ದರು. ಲಕ್ಷಲಕ್ಷ ಜನ ಇಲ್ಲಿ ಸೇರುತ್ತಾ ಇದ್ದರು. ಪೆರಿಯಾರರ ತುಂಬಾ ಭಾಷಣಗಳನ್ನು ಈ ಕಡಲ ದಂಡೆಯಲ್ಲಿ ಕುಳಿತು ನಾನು ಕೇಳಿದ್ದೇನೆ. ಮತೀಯವಾದಿಗಳ ಹುಟ್ಟನ್ನೇ ಅಡಗಿಸಿದ್ದ ಪೆರಿಯಾರರ ಶಿಷ್ಯರ ದ್ರಾವಿಡ ರಾಜ್ಯದಲ್ಲಿ ಹೇಗೆ ಈಗ ಈ



ಕೋಮುವಾದಿಗಳಿಗೆ ಮೆರವಣಿಗೆ ಮಾಡುವಷ್ಟು ಧೈರ್ಯ ಬಂತು ? ಈ ಧೈರ್ಯ ಬಂದದ್ದು, ಬೆಳೆಸಿಕೊಂಡದ್ದು, ಕರುಣಾನಿಧಿ - ಜಯಲಲಿತಾರವರ ತಿಕ್ಕಾಟಗಳಿಂದ. ಪೂರ್ಣ ಬಹುಮತ ತಮಗೆ ಇಲ್ಲದಿದ್ದರೂ ಕೇಂದ್ರದಲ್ಲಿ ವಾಜಪೇಯಿಯವರ ಸರ್ಕಾರವೇ ಇದೆ. ಜೊತೆಗೆ ದ್ರಾವಿಡ ರಾಜ್ಯದಲ್ಲಿ ನಾಲ್ವರು ಭಾಜಪ ಎಂಪಿಗಳೂ ಲೋಕಸಭೆಗೆ ಆಯ್ಕೆಯಾಗಲು ಸಾಧ್ಯವಾಗಿದೆ.

ರಾಜಕೀಯದ ವಿಚಾರವನ್ನು ಕೈಬಿಡೋಣ. ಈಗ ಮತ್ತೆ ನಮ್ಮ ಗಣಪನ, ನಮ್ಮ ದೇವರುಗಳ ವಿಚಾರಕ್ಕೇ ಬರೋಣ.

ನಮ್ಮ ದೇವರುಗಳ ಕೈಯಲ್ಲಿ ಶಂಖ-ಚಕ್ರ-ಗದೆ-ಪದ್ಮ ತ್ರಿಶೂಲ-ಡಮರುಗ– ಮುಂತಾದವುಗಳು ಇವೆ. ಕೆಲವು ಕೈಗಳು ಅಭಯ ಹಸ್ತ ನೀಡುವ ಭಂಗಿಯಲ್ಲಿ ಮೇಲ್ಮುಖವಾಗಿ ಕೆಲವು ಕೆಳಮುಖವಾಗಿ ಇವೆ. ದೇವರುಗಳು ಹೀಗೆಯೇ ಇದ್ದರೇ ಅಥವಾ ಇದ್ದಾರೆಯೇ, ಅದು ಬೇರೆ ಪ್ರಶ್ನೆ. ಆದರೆ ಅಂಥ ಚಿತ್ರಗಳನ್ನು ನಾವು ನೋಡಿ ನೋಡಿ ಅಭ್ಯಾಸವಾಗಿಹೋಗಿದೆ.

ಈಗ ನಮ್ಮ ದೇವರ ಕೈಗೆ ಎ. ಕೆ. 47 ತುಪಾಕಿ ಕೊಟ್ಟು ಆತನನ್ನು ಕಾರ್ಗಿಲ್ ಯುದ್ಧಕ್ಕೆ ನಾವು ಕಳಿಸಬಹುದೆ ಹೇಗೆ ? ಗಣಪನ ವಾಹನ ಇಲಿ. ಪುರಾಣಗಳು ಹಾಗೆ ಹೇಳುತ್ತವೆ. ಈಗ ಇಲಿಯನ್ನು ಕಿತ್ತುಹಾಕಿ ನಮ್ಮ ಗಣಪನನ್ನು ಫಿರಂಗಿಯ ಮೇಲೆ ಕೂರಿಸಬಹುದೆ ? ಹಾಗಾದರೆ ಇನ್ನು ಮುಂದೆ ನಮ್ಮ ಪುರೋಹಿತರು ಮಂತ್ರ ಹೇಳುವಾಗ ಓಂ ಮೂಷಕವಾಹನಾಯ ನಮಃ ಎಂದು ಹೇಳುವುದಕ್ಕೆ ಬದಲಾಗಿ ಓಂ ಫಿರಂಗಿವಾಹನಾಯ ನಮಃ ಎಂದು ಹೇಳಬಹುದಲ್ಲ.

ಬೇರೆ ಮತದವರು, ಧರ್ಮದವರು ಮುಖ್ಯವಾಗಿ ಕ್ರಿಶ್ಚಿಯನ್ ಮುಸಲ್ಮಾನರು ಏಸುವಿನ, ಮಹಮ್ಮದ್ ಪೈಗಂಬರನ ಕೈಗೆ ತುಪಾಕಿ ಕೊಟ್ಟು ಮೆರವಣಿಗೆ ಮಾಡುತ್ತಾರೆಯೆ ? ಹಾಗೆ ಮಾಡಿದರೆ ಅಂಥವರನ್ನು ಆ ಜನಾಂಗ ಸುಮ್ಮನೆ ಬಿಡುತ್ತದೆಯೆ ?

ಇದನ್ನು ಇನ್ನೂ ಸ್ವಲ್ಪ ವಿಸ್ತರಿಸೋಣ. ಬೆಂಗಳೂರಿನ ಬೀದಿ ಬೀದಿಗಳಲ್ಲಿ ಕಸದ ತೊಟ್ಟಿಗಳು ತುಂಬಿ ಹೋಗಿವೆ. ಅದನ್ನು ತೆಗೆಯುವವರೇ ಇಲ್ಲವೆಂದು, ಕಾರ್ಪೊರೇಷನ್ನಿನವರನ್ನು ಗೇಲಿ ಮಾಡುವುದಕ್ಕಾಗಿ, ಒಬ್ಬ ವ್ಯಂಗ್ಯ ಚಿತ್ರಕಾರ, ಗಣಪನ ಕೈಗೆ ಒಂದು ಪೊರಕೆಯನ್ನು ಕೊಟ್ಟು ಬೀದಿ ಕಸ ತೆಗೆಯುವ ಹಾಗೆ, ಒಂದು ಚಿತ್ರ ಬರೆಯುತ್ತಾನೆ ಎಂದು ಇಟ್ಟುಕೊಳ್ಳೋಣ. ಆಗ ಆ ಕೋಮುವಾದಿಗಳು ಖಂಡಿತವಾಗಿಯೂ ಬೊಬ್ಬೆಯೋ ಬೊಬ್ಬೆ ಹೊಡೆಯುತ್ತಾರೆ. ನಮ್ಮ ದೇವರಿಗೆ ಅಪಚಾರವಾಯಿತು, ಈತ ದೈವದ್ರೋಹಿ ಎಂದು.

ಆದರೆ, ಗಣಪತಿಯ ಕೈಗೆ ಎ.ಕೆ. 47 ತುಪಾಕಿ ಕೊಡಬಹುದು; ಜನರ ಆರೋಗ್ಯ ಸುಧಾರಿಸುವಂಥ ಪೊರಕೆ ಯಾಕೆ ಕೊಡಬಾರದು ? ರಥಯಾತ್ರೆಯಲ್ಲಿ ಕಕ್ಕಸ್ಸು ಗೋಡೆಗಳ ಮೇಲೆಲ್ಲಾ ರಾಮ ನಾಮ ಸ್ತೋತ್ರ ಬರೆದದ್ದು ಆಯಿತಲ್ಲ. ಶ್ರೀರಾಮನಿಗೆ ಜೈ ಎಂದು ಮೊಳಗಿದ್ದು ಆಯಿತಲ್ಲ ! ಇದಕ್ಕೆ ಏನು ಉತ್ತರ ?

ಧರ್ಮ, ದೇವರು ಮುಂತಾದವು ತುಂಬಾ ಸೂಕ್ಷ್ಮ ವಿಚಾರಗಳು. ಜನ ಭಾವುಕರಾಗಿ ಧರ್ಮದ ವಿಚಾರದಲ್ಲಿ, ದೇವರ ವಿಚಾರದಲ್ಲಿ ನಡೆದುಕೊಳ್ಳುತ್ತಾರೆ. ಧರ್ಮದ, ದೇವರ ವಿಚಾರದಲ್ಲಿ ಯುದ್ಧಗಳೂ, ವಿನಾಶಗಳೂ, ಅನಾಹುತಗಳೂ ನಡೆದುಕೊಂಡೇ ಇವೆ. ಪಶ್ಚಿಮದಲ್ಲಿ ಅಣುಬಾಂಬ್ ಸಿಡಿಸಿ, ಪೂರ್ವದಲ್ಲಿ ಹಸುಮಕ್ಕಳನ್ನು ಸುಟ್ಟಿದ್ದಾರೆ. ಹೀಗಿರುವಾಗ ನಮ್ಮ ದೇವರನ್ನು ನಮಗಿಷ್ಟ ಬಂದ ಹಾಗೆ ಬಳಸಿಕೊಳ್ಳುವುದು ಸರಿಯೆ ಎನ್ನುವುದನ್ನು ವಿಚಾರವಂತರು ಯೋಚಿಸಬೇಕಾಗಿದೆ. ಜನ ಎಚ್ಚೆತ್ತು ಇಂಥ ಅಪಪ್ರಚಾರ ಕೃತ್ಯಗಳನ್ನು ಖಂಡಿಸಬೇಕಾಗಿದೆ. ನಮ್ಮ ಜನ, ಹೇಳುವುದನ್ನೆಲ್ಲ ಕೇಳಿಸಿಕೊಳ್ಳುವ ಕುರಿ ಜನಗಳಾಗದೆ ಯೋಚಿಸುವ ಶಕ್ತಿಯನ್ನು ಬೆಳೆಸಿಕೊಳ್ಳಬೇಕಾಗಿದೆ.

ಶೇಷನಾರಾಯಣ

# ಕೋಮುವಾದವೆನ್ನುವುದು ರಾಷ್ಟ್ರದ್ರೋಹ

## 'ಮಾನವ ಜಾತಿ ತಾನೊಂದೆ ವಲಂ' - ಕಣವಿ

**'ಪ್ರೀತಿ, ಸ್ನೇಹ, ಸಹಬಾಳ್ವೆಯನ್ನು ನಂಬಿ, ಜೀವ ಪರವಾದ ನಿಲುವಿನೊಂದಿಗೇ ಬದುಕಿ, ಕಾವ್ಯಾಕ್ಷಿಯಿಂದಲೇ ಜೀವನ ಪಯಣ ನಡೆಸಿ ಕನ್ನಡ ನಾಡಿನ ಉನ್ನತ ಗೌರವ 'ಪಂಪ ಪ್ರಶಸ್ತಿ' ಪಡೆದ ಭಾವಜೀವಿ ಚನ್ನವೀರ ಕಣವಿಯವರೊಂದಿಗೆ ಸಂದರ್ಶನ.**

**ಹೊಸತು** : ಈ ಶತಮಾನದ ಅಂಚಿನಲ್ಲಿ ಪಂಪ ಪ್ರಶಸ್ತಿ ಪಡೆದ ನಿಮಗೆ 'ಹೊಸತು' ಪರವಾಗಿ ಅಭಿನಂದನೆಗಳು. ಹೊಸ ಶತಮಾನ ಬರುತ್ತಿರುವ ಈ ಸಂದರ್ಭದಲ್ಲಿ ಕೋಮುವಾದ ಮಹತ್ವದ ವಿಷಯವಾಗಿದೆ. ಸೃಜನಶೀಲ ವ್ಯಕ್ತಿಯಾಗಿ ನಿಮ್ಮ ಅಭಿಪ್ರಾಯವೇನು ?

**ಕಣವಿ** : ನಲವತ್ತು ವರ್ಷದಿಂದ ನೋಡುತ್ತ ಬಂದಿದ್ದೇನೆ. ಇತ್ತೀಚೆಗೆ ಕೋಮುವಾದ ವ್ಯಾಪಕವಾಗಿ ಬೆಳೆಯುತ್ತಿದೆ. ಬುದ್ಧಿಜೀವಿಗಳೆನಿಸಿಕೊಂಡವರೂ ಇದಕ್ಕೆ ಬಲಿಯಾಗುತ್ತಿರುವುದು ಆತಂಕದ ವಿಷಯ. ವಾತಾವರಣ ಎಷ್ಟು ಕೆಟ್ಟಿದೆಯೆಂದರೆ ಯಾವುದೇ ಅಭಿಪ್ರಾಯ ಹೇಳಲೂ ಮುಕ್ತವಾಗಿಲ್ಲ. ನಾನು ಹಳ್ಳಿಯ ಸಹಜೀವನದಲ್ಲಿ ಬೆಳೆದವನು. ಮೊಹರಂನಲ್ಲಿ ಆಡಿ ಕುಣಿದಿದ್ದೇನೆ. ಹಬ್ಬ ಹುಣ್ಣಿಮೆಯಲ್ಲಿ ಹೋಳಿಗೆ ತಿಂದಷ್ಟೇ ಖುಷಿಯಿಂದ ಮೊಹರಂನಲ್ಲಿ ಚೊಂಗೆ ತಿಂದಿದ್ದೇನೆ. ಶಿರಹಟ್ಟಿಯ ಫಕೀರ ಸ್ವಾಮಿ ನಗಾರಖಾನೆ ಎಂಬ ಹಿಂದೂ ಮುಸ್ಲಿಂ ಐಕ್ಯ ಸಂಸ್ಕೃತಿಯಲ್ಲಿ ಬಾಲ್ಯ ಕಳೆದಿದ್ದೇನೆ. ಅವೆರಡೂ ಬೇರೆ ಬೇರೆ ಎಂದು ಎಂದೂ ನನಗನಿಸಿದ್ದಿಲ್ಲ.

**ಹೊ** : ಇಂಥ ಸಹಬಾಳ್ವೆ ಹೊಂದಿದ ಏಕೀಕೃತ ಸಂಸ್ಕೃತಿಯ ದೇಶದ ಇತಿಹಾಸವನ್ನು ಮತೀಯ ಶಕ್ತಿಗಳು ತಿರುಚಿ ಹೇಳುತ್ತಿದ್ದಾರೆ ಎನ್ನಿಸುತ್ತಿಲ್ಲವೆ ?

**ಕ** : ವಿಶಾಲವಾದ ಹಿನ್ನೆಲೆಯಲ್ಲಿ ಇತಿಹಾಸವನ್ನು ಅಭ್ಯಸಿಸಬೇಕು. ಒಂದು ಕಾಲದ ಘಟನೆಗೆ ಅವತ್ತಿನ ಸಾಮಾಜಿಕ, ರಾಜಕೀಯ ಸ್ಥಿತಿಗತಿಗಳು ಕಾರಣವಾಗಿರುತ್ತವೆ. ಹುಂಬತನ ನಾಗರಿಕತೆ ಕಟ್ಟುವ ಕೆಲಸ ಮಾಡುವುದಿಲ್ಲ. ಪಾಸ್ಟ್ ಈಸ್ ಪಾಸ್ಟ್. ನಿಜವಾದ ಭಾರತೀಯ ಇತಿಹಾಸ ಸಮನ್ವಯ ಸಂಸ್ಕೃತಿ ಹೊಂದಿದೆ. ಇದರ ಒಳ ತಿರುಳೇ

೧೯೨೮ರ ಜೂನ್ ೨೮ರಂದು ಈಗಿನ ಗದಗ ಜಿಲ್ಲೆಯ ಹೊಂಬಳೆ ಗ್ರಾಮದಲ್ಲಿ ಜನಿಸಿದ ಚನ್ನವೀರ ಕಣವಿ ಹುಟ್ಟಿನಿಂದಲೇ ಗ್ರಾಮೀಣ ಪರಿಸರದಲ್ಲಿ ಬೆಳೆದವರು. ತಂದೆ ಸಕರೆಪ್ಪ ಶಾಲಾ ಶಿಕ್ಷಕರಾಗಿದ್ದರು. ತಾಯಿ ಪಾರ್ವತವ್ವ ಮಗನ ಕನಸಿನ ಕಣಜವಾಗಿದ್ದರು. ಗದಗ ತಾಲ್ಲೂಕಿನ ಶಿರುಂದ ಗ್ರಾಮದಲ್ಲಿ ಪ್ರಾಥಮಿಕ ಶಾಲೆ ಓದಿದ ಕಣವಿಯವರಿಗೆ ಆ ಗ್ರಾಮದ ಪರಿಸರ ಅವರ ಮುಂದಿನ ಬದುಕಿಗೆ, ಚಿಂತನೆಗೆ, ಕಲ್ಪನಾಶಕ್ತಿಗೆ ತಳಪಾಯವನ್ನೊದಗಿಸಿದೆ. ಗ್ರಾಮದಲ್ಲಿನ ಕೃಷಿಕರ ಬದುಕು, ಹೆಣ್ಣು ಮಕ್ಕಳ ದುಡಿತ, ಎಲ್ಲ ಜಾತಿಯ ಜನರ ಸಹಬಾಳ್ವೆ, ಬಡವರ ಕಷ್ಟ, ಗ್ರಾಮ ದೇವತೆಗಳು, ಹಬ್ಬ-ಹುಣ್ಣಿಮೆ, ಆಚರಣೆ, ಅವರ ಪ್ರೀತಿ ಸಂತೋಷ, ನೋವು ನಲಿವು ಎಲ್ಲವೂ ಬಾಲ್ಯದಲ್ಲಿಯೇ ಕಣವಿಯವರ ಮೇಲೆ ಮೂಡಿದ ಪ್ರಭಾವಗಳು.

ಉನ್ನತ ಪ್ರಾಥಮಿಕ ವಿದ್ಯಾಭ್ಯಾಸಕ್ಕಾಗಿ ಧಾರವಾಡ ಹತ್ತಿರದ ಗರಗ ಗ್ರಾಮಕ್ಕೆ ಹೋದ ಕಣವಿಯವರಿಗೆ ಅಲ್ಲಿನ ಸ್ವಾತಂತ್ರ್ಯ ಹೋರಾಟದ ಅನುಭವವಾಗಿದೆ. ಗರಗ ಖಾದಿ ತಯಾರಿಕೆಗೆ ಇವತ್ತಿಗೂ ಖ್ಯಾತಿ ಪಡೆದಿದೆ. ೧೯೩೯-೪೦ರ ಸಂದರ್ಭದಲ್ಲಿ ಅಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯಹೋರಾಟಗಳು, ಗಾಂಧೀಜಿಯವರ ಮೂಲ ಶಿಕ್ಷಣ, ದೇಶೀಯತೆ ಇವು ಶಾಲಾ ಬಾಲಕ ಚನ್ನವೀರನ ಮೇಲೆ ತೀವ್ರವಾದ ಪರಿಣಾಮ ಬೀರಿವೆ. ಇವರ ಮಾವ ಚಂದ್ರಶೇಖರಪ್ಪ ಗೋಗೇರಿಯವರ ಸ್ವಾತಂತ್ರ್ಯ ಹೋರಾಟ, ಬಂಧನ,' ಇವೆಲ್ಲಾ ಅವರ ಮನೆಯ ಒಳಗಿನ ಅನುಭವಗಳಾಗಿವೆ. ಪರಿಣಾಮವಾಗಿ ಶಾಲಾ ಮಕ್ಕಳು ಸ್ವಾತಂತ್ರ್ಯ ಹೋರಾಟಕ್ಕೆ ಪೂರಕವಾಗಿ ನಡೆಯುತ್ತಿದ್ದ ಪ್ರಭಾತ್ ಫೇರಿಗಳಲ್ಲಿ ಹಾಡು, ಘೋಷಣೆ ಹೇಳುವಲ್ಲಿ ಕಣವಿ ಮುಂದೆ ನುಗ್ಗುತ್ತಾರೆ.

ಮುಂದೆ ೧೯೪೦ರಿಂದ ಧಾರವಾಡದ ಆರ್. ಎಲ್. ಎಸ್. ಹೈಸ್ಕೂಲ್‌ನಲ್ಲಿ ಸ್ವಾತಂತ್ರ್ಯ ಚಳುವಳಿಯ ವಾತಾವರಣದ ಬದಲಾಗಿ ಸಾಹಿತ್ಯ ಹಾಗೂ ಸಾಂಸ್ಕೃತಿಕ ವಾತಾವರಣ ಅವರಿಗೆ ಲಭಿಸಿತು. ಆ ಕಾಲದಲ್ಲಿ ಬಡ ವಿದ್ಯಾರ್ಥಿಗಳಿಗೆ ಆಶ್ರಯತಾಣವಾಗಿದ್ದ ಹಾಗೂ ಇವತ್ತಿನ ಆ ಭಾಗದ ಖ್ಯಾತನಾಮರ ಬಾಲ್ಯದ ಗರಡಿ ಮನೆಯಂತಿದ್ದ ಮುರುಘಾಮಠ ಕಣವಿಯವರಿಗೂ ಆಶ್ರಯ ಕೊಟ್ಟಿತ್ತು. ಹೈಸ್ಕೂಲ್‌ನಲ್ಲಿದ್ದಾಗಲೇ ಕಣವಿ ಒಳಗಿನ ಕವಿ ಸ್ಕೂಲಿನ ವಾರ್ಷಿಕ ಪತ್ರಿಕೆಯಲ್ಲಿ ಕವನ ಪ್ರಕಟಿಸಿದರು. ಆರಂಭದಲ್ಲಿ ಕುವೆಂಪು, ಬೇಂದ್ರೆ, ಮಧುರ ಚೆನ್ನರು ಪ್ರಭಾವ ಬೀರಿದ [illegible] ಕುವೆಂಪು ಹಾಗೂ ಮಧುರ ಚೆನ್ನರು ಕವಿ ಕಣವಿಯ ಆಸಕ್ತಿಯ ಕವಿಗಳಾದರು. ಇತ್ತ ಮುರುಘಾಮಠದಲ್ಲಿ ವಚನಕಾರರ, ಅನುಭಾವಿ ಕವಿಗಳ, ಮುಪ್ಪಿನ ಷಡಕ್ಷರಿ ಇಂಥವರ ಕಾವ್ಯಗಾಯನದ ವಾತಾವರಣ. ಆಗಾಗ ಮಠಕ್ಕೆ ಬರುತ್ತಿದ್ದ ಹರ್ಡೇಕರ ಮಂಜಪ್ಪ, ಆಲೂರು ವೆಂಕಟರಾಯರು, ಭೂಸನೂರಮಠ ಅವರ ಮಾತು ಹಾಗೂ ವ್ಯಕ್ತಿತ್ವ ಕಣವಿಯವರ ವ್ಯಕ್ತಿತ್ವದ ಮೇಲೆ ಪ್ರಭಾವ ಬೀರಿದವು. ಇಂಥ ವಾತಾವರಣದಲ್ಲಿ ಚಿಂತನೆಗಳನ್ನು ರೂಪಿಸಿಕೊಂಡ ಕಣವಿಯವರು ಮುರುಘಾ ಮಠದ ಭಾಷಣ ಸ್ಪರ್ಧೆಯಲ್ಲಿ ಭಾಗವಹಿಸಿ ಬಹುಮಾನವಾಗಿ ಬಿ. ಎಂ. ಶ್ರೀ. ಸಂಪಾದಿಸಿದ 'ಕನ್ನಡ ಬಾವುಟ' ಎಂಬ ಕಾವ್ಯ ಸಂಗ್ರಹದ ಕೃತಿಯನ್ನು ಪಡೆದರು. ಕನ್ನಡ ನಾಡಿನ ಖ್ಯಾತ ಕವಿಗೆ ದೊರೆತ ಮೊಟ್ಟಮೊದಲ ಪ್ರಶಸ್ತಿ ಅದಾಗಿತ್ತು. ಇವತ್ತಿಗೂ ಆ ದಿನ ನೆನೆದು ರೋಮಾಂಚನಗೊಳ್ಳುತ್ತಾರೆ ಕಣವಿಯವರು. ಇಂದು ಪಡೆದ 'ಪಂಪ ಪ್ರಶಸ್ತಿ', ಅಂದು ಭಾಷಣಕ್ಕಾಗಿ ಪಡೆದ 'ಕನ್ನಡ ಬಾವುಟ' ಬಹುಮಾನ ಇವೆರಡರಲ್ಲಿ ನಿಮಗೆ ಹೆಚ್ಚು ಖುಷಿ ಕೊಟ್ಟದ್ದು ಯಾವುದು ಎಂದು ಕೇಳಿದರೆ ಒಂದು ಕ್ಷಣ ಸುಮ್ಮನಿದ್ದು ಆ ಮೊದಲ ಪ್ರಶಸ್ತಿಯೇ ನನಗೆ ಹೆಚ್ಚು ಥ್ರಿಲ್ ಕೊಟ್ಟದ್ದು ಎನ್ನುತ್ತಾರೆ. ಕರ್ನಾಟಕ ಕಾಲೇಜಿನಲ್ಲಿ ಉನ್ನತ ವಿದ್ಯಾಭ್ಯಾಸ. ಆಗ ಕಣವಿ ಒಳಗಿನ ಕವಿ ಸ್ಪಷ್ಟವಾಗಿ ಒಡಮೂಡಿದ್ದಾನೆ. ೧೯೪೫ರಲ್ಲಿ 'ಕಾಡುಮಲ್ಲಿಗೆ' ಎಂಬ ಅವರ ಕವನ ಮೊದಲಬಾರಿಗೆ 'ಜೀವನ' ಪತ್ರಿಕೆಯಲ್ಲಿ ಪ್ರಕಟವಾಯಿತು. ಅಂದಿನಿಂದ ಇಂದಿನವರೆಗೂ ಕಾವ್ಯಕೃಷಿಯ ಓಟದಲ್ಲಿ ಕಣವಿಯವರು ಹಿಂತಿರುಗಿ ನೋಡಲಿಲ್ಲ. ಕಾವ್ಯಾನುಭವ ಮಂಟಪ ಕಟ್ಟಿದರು. ಸ್ನೇಹಿತರ ಕೂಟ ಕಟ್ಟಿದರು. ತಾವಷ್ಟೇ ಬೆಳೆಯದೆ ಯುವ ಕವಿಗಳ ಹಿಂಡನ್ನೇ ಕಟ್ಟಿಕೊಂಡು ಬೆಳೆದರು. ಬಸವರಾಜ ಕಟ್ಟೀಮನಿ, ಆಗ ಹುಬ್ಬಳ್ಳಿಯಲ್ಲಿದ್ದು ಕಮ್ಯುನಿಸ್ಟ್ ಪಕ್ಷದ 'ಜನಶಕ್ತಿ' ಪತ್ರಿಕೆ ನಡೆಸುತ್ತಿದ್ದ ನಿರಂಜನ, ಇಂಥವರ ಸಂಪರ್ಕ ಪಡೆದು ತಮ್ಮ ಚಿಂತನೆಗೆ ಇನ್ನೊಂದು ಆಯಾಮ ಪಡೆದುಕೊಂಡರು. ೧೯೪೯ರಲ್ಲೇ ತಮ್ಮ ಅನುಭವದ ಸಾರ ಸಂಗ್ರಹದ ಕುರುಹಾಗಿ 'ಕಾವ್ಯಾಕ್ಷಿ' ಕವನ ಸಂಕಲನ ಪ್ರಕಟಿಸಿದರು. ಆಗಿನ್ನೂ ಕಣವಿ ಬಿ.ಎ. ವಿದ್ಯಾರ್ಥಿ. ಸ್ವಂತ ಪರಿಶ್ರಮದಿಂದ, ಗ್ರಾಮೀಣ ಬದುಕಿನಿಂದ ಬೆಳೆದುಬಂದು ಇಂದು ಕನ್ನಡ ನಾಡಿನ ಕಾವ್ಯಲೋಕದ ಹೆಮ್ಮರವಾದ ಕವಿ ಕಣವಿಯವರ ಕಾವ್ಯ ಜೀವನ ಕುರಿತು ಹಲವಾರು ಪತ್ರಿಕೆಗಳು ಬರೆದಿವೆ. ಅವರ ಸಾಮಾಜಿಕ, ರಾಜಕೀಯ ಚಿಂತನೆಗಳನ್ನು ಓದುಗರಿಗೆ ಕೊಡುವುದು 'ಹೊಸತು' ಉದ್ದೇಶ. ಕಣವಿಯವರು ತಮ್ಮ ವಿಭಿನ್ನ ಆಲೋಚನೆಗಳನ್ನು 'ಹೊಸತು' ಜೊತೆ ಹಂಚಿಕೊಂಡಿದ್ದಾರೆ.

ಚೆಂಬೆಳಕಿನ ಕವಿಯೆಂದೇ ಹೆಸರಾದ ಚನ್ನವೀರ ಕಣವಿ ಕನ್ನಡ ಕಾವ್ಯ ಪರಂಪರೆಯಲ್ಲಿ ವಿಶಿಷ್ಟ ಸ್ಥಾನ ಪಡೆದಿದ್ದಾರೆ. ತಮ್ಮ ಹದಿಮೂರು ಕವನ ಸಂಕಲನಗಳ ಮೂಲಕ ನಾಲ್ಕು ನೂರಕ್ಕೂ ಹೆಚ್ಚು ಕವಿತೆಗಳನ್ನು ಪ್ರಕಟಿಸಿರುವ ಈ ಕವಿ ವ್ಯಕ್ತಿತ್ವ ಹಾಗೂ ಕವಿತ್ವದ ಮಧ್ಯೆ ಬಿರುಕಿಲ್ಲದ ಬದುಕು ನಡೆಸುತ್ತಿರುವವರು. ಹಾಗೇ ತಮ್ಮ ಬರಹಕ್ಕೆ ಬದ್ಧರಾಗಿ ಸಾಮಾಜಿಕ ಜವಾಬ್ದಾರಿ ರೂಪಿಸಿಕೊಂಡವರು. ಪ್ರೀತಿ, ಸ್ನೇಹ ಇವರ ಬದುಕಿನ ಹಾಗೂ ಕಾವ್ಯದ ಜೀವ ಧ್ವನಿ. ತಮ್ಮ ಬಾಲ್ಯದಿಂದ ತಾವು ನೋಡಿದ, ಅನುಭವಿಸಿದ ಬದುಕು, ಪರಿಸರ ಸಾಹಿತ್ಯ, ಹಲವಾರು ಸಾಹಿತ್ಯ ಪಂಥಗಳು, ತತ್ವ, ಹೀಗೆ ಕಂಡದ್ದಾವುದನ್ನೂ ನಿರಾಕರಿಸದೆ ಅದರಲ್ಲಿನ ಜೀವಪರ ಅಂಶಗಳನ್ನು ಹೀರುತ್ತಲೇ ಕವಿಯಾಗಿ ಬೆಳೆದವರು. ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ ಇಂಥ ಕನ್ನಡ ಸಾಹಿತ್ಯ ವಿಕಾಸದ ಘಟ್ಟಗಳನ್ನು, ಸ್ಥಿತ್ಯಂತರಗಳನ್ನು ಮೌನವಾಗಿ ನೋಡುತ್ತ, ಅದರಲ್ಲಿನ ಸಾಹಿತ್ಯಿಕ ತಾತ್ವಿಕ ಅಂಶಗಳನ್ನು ಗುರುತಿಸುತ್ತ ತಾವು ನಂಬಿದ ನೀತಿಗೆ ಅಳವಡಿಸುತ್ತ ಎಲ್ಲಿಯೂ ನಿಲ್ಲದೆ ಎಲ್ಲ ತತ್ವದೆಲ್ಲೆ ಮೀರಿ ತನ್ನದೇ ಆದ ರೀತಿಯಲ್ಲಿ ಬೆಳೆದ ಸುನೀತಿಯ ಸುನೀತಗಾರ ಈ ಕಣವಿ. ಇಂಥ ಕವಿಗೆ ಇವರು ಕನ್ನಡ ಸಾಹಿತ್ಯ ಲೋಕಕ್ಕೆ ಕೊಟ್ಟ ಕಾಣಿಕೆಗೆ ಪ್ರತಿಯಾಗಿ ಕನ್ನಡ ನಾಡು, ಜನತೆ ಕನ್ನಡನಾಡಿನ ಆದಿಕವಿಯ ಹೆಸರಿನ ಉನ್ನತ ಗೌರವ ಸೂಚಕವಾದ 'ಪಂಪ ಪ್ರಶಸ್ತಿ' ಕೊಟ್ಟು ಖುಷಿ ಪಟ್ಟಿದ್ದಾರೆ. ಈ ಪ್ರಶಸ್ತಿ ಪಡೆದ ಕವಿ ಕಣವಿ ಒಂದು ಸಂತೃಪ್ತಿಯ ನಗೆ ಚೆಲ್ಲುತ್ತಾರೆ.



ಮನ್ವಯತೆ. ಇಂಥದಕ್ಕೆ ಭಾರತ ಒಂದೇ ಉದಾಹರಣೆ. ಸಹಿಷ್ಣುತೆ, ಸಹನೆ ಹೇರಿಕೆಯಿಂದ ರುವಂಥದ್ದಲ್ಲ. ಅದು ಸಾಧನೆಯ ರೂಪದಲ್ಲೂ ಬರಲಾರದು. ಸಹಜವಾಗಿ ಬರಬೇಕು. ದುಕಿನ ಭಾಗವಾಗಬೇಕು. ನಮ್ಮ ದೇಶದ ಸಮನ್ವಯತೆ ಆ ರೀತಿಯಿಂದಲೇ ಬೆಳೆದು ಂದದ್ದು. ಇಂಥ ದೇಶದಲ್ಲಿ ಕೋಮುವಾದ ಎನ್ನುವುದೇ ದೇಶದ್ರೋಹ, 'ಮನುಷ್ಯ ಜಾತಿ ನೊಂದೆ ವಲಂ' ಎಂಬುದು ನಮ್ಮ ಮಂತ್ರವಾಗಬೇಕು.

**ಹೊ** : ಇಂಥ ಸಂದರ್ಭಕ್ಕೆ ಸಾಹಿತಿಯಾಗಿ ನೀವು ಹೇಗೆ ಪ್ರತಿಕ್ರಿಯಿಸುತ್ತೀರಿ ?

**ಕ** : ಲೇಖಕರು ಸೂಕ್ಷ್ಮ ಸಂವೇದಿಗಳಾದ್ದರಿಂದ ಅವರಿಗೆ ಸ್ಪಷ್ಟವಾದ ಕಲ್ಪನೆ. ಧೋರಣೆ ಬೇಕು. ಪ್ರಾಮಾಣಿಕತೆ ಇದ್ದರೆ ಅದು ಅವರ ಬರವಣಿಗೆಯಲ್ಲಿ ಬರುತ್ತದೆ.

**ಹೊ** : ಶಿಕ್ಷಣ ಕ್ಷೇತ್ರದೊಳಗೆ, ಅಂದರೆ ಪಠ್ಯದೊಳಗೆ, ಕೋಮುವಾದದ ವಿಷ ಬೆರೆಸುವ ಪ್ರಯತ್ನ ನಡೆಯುತ್ತಿದೆ. ನಿಮ್ಮ ಗಮನಕ್ಕೆ ಬಂದಿದೆಯೇ ?

**ಕ** : ಹೌದು ಗಮನಿಸಿದ್ದೇನೆ. ಇದು ಬಹಳ ಅಪಾಯಕಾರಿಯಾದದ್ದು, ಶಿಕ್ಷಣ ಕ್ಷೇತ್ರದೊಳಗೆ ಬಲವಾದ ಪ್ರತಿಭಟನೆ ಬರಬೇಕು ಹಾಗೂ ನಿರಂತರವಾದ ಎಚ್ಚರಿಕೆ ಇರಬೇಕು.

**ಹೊ** : ಇದಕ್ಕೆಲ್ಲ ಪರ್ಯಾಯವೇನು ?

**ಕ** : ಬರವಣಿಗೆ, ಪ್ರಕಟಣೆ, ನಮ್ಮ ಮಾಧ್ಯಮ, ಕಾರ್ಯಕರ್ತರ ಪಡೆ, ವೇದಿಕೆ ರಚಿಸುವುದರ ಮೂಲಕ ಮಾನವೀಯ ಮೌಲ್ಯಗಳ ಪ್ರಚಾರ ನಡೆಯಬೇಕು.

**ಹೊ** : ನಿಮಗೆ ಯಾವುದೇ ತಾತ್ವಿಕ ಪಂಥ ಅಥವಾ ಬದ್ಧತೆ ಇಲ್ಲ ಎಂಬ ಆರೋಪವಿದೆ...

**ಕ** : ಹೌದು ನಾನು ಯಾವುದೇ ಒಂದು ಪಂಥಕ್ಕೆ ಒಳಪಡಲು ಇಷ್ಟಪಡುವುದಿಲ್ಲ. ನನ್ನದು ಸ್ನೇಹಪರ, ಮಾನವೀಯ ಪಂಥ. ಬೇರೆ ಬೇರೆ ತತ್ವ ಹಾಗೂ ಪಂಥಗಳ ಬಗ್ಗೆ ನನಗೆ ಗೌರವವಿದೆ. ಆದರೆ ಈ ಪಂಥಗಳು ಹಾಗೂ ಗುಂಪುಗಳು ಇನ್ನೊಂದು ಪಂಥವನ್ನು ಟೀಕಿಸುವುದರಲ್ಲೇ ಹೆಚ್ಚು ಕಾಲ ಕಳೆಯುತ್ತವೆ. ಯಾವುದೇ ಚಳುವಳಿಗೆ ಒಂದು ಕಾಲ, ಅವಧಿ ಇರುತ್ತದೆ. ನಂತರ ಅದೇ ಒಂದು ವ್ಯವಸ್ಥೆ ಆಗುತ್ತದೆ. ನನ್ನ ಪ್ರಕಾರ ಪ್ರತಿಭಟನೆಗಿಂತ ಅಭಿಪ್ರಾಯ ಮೂಡಿಸುವುದು ಮಹತ್ವದ ವಿಷಯ. ನನ್ನತನ ಕಾಯ್ದುಕೊಳ್ಳಬೇಕು. ಗುಂಪಿನಲ್ಲಿ ನಮ್ಮತನವನ್ನು ಕಳೆದುಕೊಳ್ಳುತ್ತಿದ್ದೇವೆ. ದ್ವೇಷ ನಾನು ಒಪ್ಪಲಾರದ ವಿಷಯ. ಸಿದ್ಧಾಂತಗಳ ಒಳಜಗಳಗಳು ವ್ಯಕ್ತಿಗತ ದೂಷಣೆಯತ್ತ ತಿರುಗುತ್ತವೆ. ಜಗಳ ಹೊಸದೇನನ್ನೂ ಹುಟ್ಟಿಸುವುದಿಲ್ಲ.

**ಹೊ** : ನಿಮ್ಮ ಕಾವ್ಯದ ಮೂಲ ಸಂವೇದನೆ ಯಾವುದು ?

**ಕ** : ಮನುಷ್ಯ ಸಂಬಂಧ, ಸ್ನೇಹಪರತೆ, ಇಂಥ ವಿಷಯ ಕುರಿತು ಪ್ರಾಮಾಣಿಕ ಅಭಿವ್ಯಕ್ತಿ ಮಾಡಿರುವೆ. ನನ್ನ ಪಾಲಿಗೆ ಇದೇ ನನ್ನ ಸಾಧನೆ. ವ್ಯಕ್ತಿ ಸಮಾಜದ ಭಾಗ. ಅವನು ಎಷ್ಟೇ ಪ್ರಮುಖನಾಗಿದ್ದರೂ ಅವನಲ್ಲಿ ಸಮಾಜ ಪ್ರಜ್ಞೆ ಬೇಕು. ವ್ಯಕ್ತಿಹಿತ ಸಮಾಜ ಹಿತದಲ್ಲಿ ಅಡಗಿದೆ. ಪ್ರತಿ ಸಾಮಾಜಿಕ ಘಟನೆಗೂ ನನ್ನ ಸಂಬಂಧ ಗುರ್ತಿಸಬೇಕು. ಸಾಮುದಾಯಿಕ ಮೂಲದಿಂದ ಬರುವ ಸಂತೋಷ ಹೆಚ್ಚು ಖುಷಿ ಕೊಡುತ್ತದೆ. ಒಳಿತಿನಲ್ಲಿಯೇ ಸೌಂದರ್ಯ ಇದೆ.

**ಹೊ** : ಇಂದಿನ ರಾಜಕಾರಣದ ಬಗ್ಗೆ ಏನು ಹೇಳುತ್ತೀರಿ ?

**ಕ** : ಇವತ್ತಿನ ರಾಜಕೀಯದಲ್ಲಿ ಜಾತೀಯತೆ, ಕೋಮುವಾದ ತುಂಬಿ ತುಳುಕುತ್ತಿದೆ. ಹಾಗಂತ ಅದರಿಂದ ದೂರ ಇರಲಿಕ್ಕಾಗದು. ರಾಜಕೀಯಕ್ಕೆ ಮುಖಾಮುಖಿಯಾಗುತ್ತಲೇ ಅದನ್ನು ಬದಲಾಯಿಸುವ ಕ್ರಿಯೆ ನಡೆಯಬೇಕು. ಇಂಥ ಕೆಲಸದಲ್ಲಿ ಜಾತ್ಯತೀತರು ಸೋತಿದ್ದಾರೆ.

**ಹೊ** : ಇವತ್ತಿನ ಜಾಗತೀಕರಣ ಸಂದರ್ಭದಲ್ಲಿ ನಿಮ್ಮಂಥವರ ಜವಾಬ್ದಾರಿ ಏನು ?

**ಕ** : ಸ್ವದೇಶಿ ಬಗ್ಗೆ ಮತ್ತೆ ಚಳುವಳಿ ಆರಂಭವಾಗಬೇಕು. ಶಿಕ್ಷಣ ಮಾಧ್ಯಮ ಕನ್ನಡವಾಗಬೇಕು. ದೇಶೀಯ ವಿಷಯ ಬೇಕು. ಪ್ರಾಥಮಿಕ ಶಿಕ್ಷಣದಿಂದಲೇ ದೇಶೀ ಸಂಸ್ಕೃತಿ ಬಗ್ಗೆ ಕಾಳಜಿ ವಹಿಸಬೇಕು. ದೂರದರ್ಶನದ ಜಾಹಿರಾತುಗಳು ಭ್ರಮೆ ಹುಟ್ಟಿಸುತ್ತಿವೆ. ನಾವು ಬಡವರು ಎನ್ನುವುದನ್ನೇ ಮರೆಸುತ್ತಿವೆ. ಪಾಲಕರು ಮಕ್ಕಳ ಬಗ್ಗೆ ಹೆಚ್ಚಿನ ಜವಾಬ್ದಾರಿ ವಹಿಸಿಕೊಳ್ಳಬೇಕು. ಶಿಕ್ಷಣ ಕೇಂದ್ರಗಳು ಮತ್ತು ಪಾಲಕರು ಮಕ್ಕಳಿಗೆ ಪರ್ಯಾಯ ಸಂಸ್ಕೃತಿ ರೂಪಿಸಲು ಪ್ರಯತ್ನಪೂರ್ವಕವಾಗಿ ಕೆಲಸ ಮಾಡಬೇಕು.

**ಹೊ** : ಇಂಥ ಸಂದರ್ಭದಲ್ಲಿ ಸಾಹಿತ್ಯಲೋಕದ ಪ್ರತಿಕ್ರಿಯೆ ಏನು ?

**ಕ** : ಕಳೆದ ಶತಮಾನದಲ್ಲಿ ಸಾಕಷ್ಟು ಸಾಧನೆ ಮಾಡಿದ್ದೇವೆ. ಆದರೆ ಇಂದು ಈ ಕ್ಷೇತ್ರದಲ್ಲಿಯೂ ಹಣ ಮುಖ್ಯವಾಗುತ್ತಿದೆ. ಪರಿಶ್ರಮವಿಲ್ಲದ ಫಲದ ನಿರೀಕ್ಷೆ ಇಂದಿನ ಮಾದರಿಯಾಗುತ್ತಿದೆ. ನೋಯುವುದು, ಕಾಯುವುದು, ಬೇಯುವುದು ಇಂದಿನ ಶಬ್ದಕೋಶದಲ್ಲಿಯೇ ಇಲ್ಲ. ನಮ್ಮಲ್ಲಿ ಅಲ್ಪತೃಪ್ತಿ ದೂರವಾಗಬೇಕು. ಹೆಚ್ಚಿನ ಜವಾಬ್ದಾರಿ, ಹೆಚ್ಚಿನ ಶ್ರಮ ಬೇಕು.

ಡಾ॥ ಸಿದ್ದನಗೌಡ ಪಾಟೀಲ
ಪಟ್ಟಣಶೆಟ್ಟಿ ಬಿಲ್ಡಿಂಗ್ ಶ್ರೀನಗರ, ಧಾರವಾಡ - ೫೮೦ ೦೦೩

# ಮಮತೆಯ ಮೂರ್ತಿ ವೈಎನ್ಕೆ

*ವೈಎನ್‌ಕೆಯವರಿಗೆ 'ನವಕರ್ನಾಟಕ'ದ ಪ್ರಕಟಣೆಗಳಲ್ಲಿ ಅಪಾರ ಆಸಕ್ತಿ ಇದ್ದಿತು. ಅವರೇ ಸಂಪಾದಿಸಿ 'ಪುರೋಗಾಮಿ ಪ್ರಕಾಶನ' ಪ್ರಕಟಿಸಿದ್ದ ''ಜಾಕ್‌ಲಂಡನ್: ಜೀವನ-ಕೃತಿ'' ಎಂಬ ಹೊತ್ತಿಗೆಯನ್ನು ನವಕರ್ನಾಟಕ ಪುನರ್ ಪ್ರಕಟಿಸಲು ನೆರವಾದುದಲ್ಲದೆ ತಾವು ಸಂಪಾದಕರಾಗಿದ್ದ 'ಕನ್ನಡಪ್ರಭ' ಪತ್ರಿಕೆಯ ಪುಸ್ತಕ ವಿಮರ್ಶಾ ವಿಭಾಗದಲ್ಲಿ 'ನವಕರ್ನಾಟಕ' ಪ್ರಕಟಣೆಗಳಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡುತ್ತಿದ್ದರು. 'ನವಕರ್ನಾಟಕ'ದ ಹೆಮ್ಮೆಯ ಪ್ರಕಟಣೆ 'ನವಕರ್ನಾಟಕ ಜ್ಞಾನ-ವಿಜ್ಞಾನ ಕೋಶ'ದ ವಿಷಯದಲ್ಲಂತೂ ಅವರು ಅಪಾರ ಆಸಕ್ತಿ ತೋರಿದ್ದರು. ಪ್ರಕಟಣೆಯ ಪ್ರತಿ ಘಟ್ಟದಲ್ಲೂ ಪ್ರಗತಿಯ ಬಗೆಗೆ ವಿಚಾರಿಸುತ್ತ ಕೊನೆಗೆ ಅದರ ಪ್ರಕಟಣೆಯ ದಿನದಂದೇ 'ಕನ್ನಡ ಪ್ರಭ'ದಲ್ಲಿ ಅದರ ಬಗೆಗೆ ಸುದೀರ್ಘ ಲೇಖನವೊಂದನ್ನು ಚಿತ್ರಸಹಿತ ಪ್ರಕಟಿಸಿದ್ದರು.*

ಹಿರಿಯ ಪತ್ರಕರ್ತರಾಗಿ, ಸಾಹಿತ್ಯ ವಿಮರ್ಶಕರಾಗಿ ಹಾಗೂ ನಗೆ ಬರಹಗಾರರಾಗಿ ಹೆಸರು ಗಳಿಸಿ ಈಚೆಗೆ ಆಕಸ್ಮಿಕವಾಗಿ, ಅನಿರೀಕ್ಷಿತವಾಗಿ, ವಿಮಾನಯಾನ ಮಾಡುತ್ತಿದ್ದಾಗಲೇ ತೀವ್ರ ಹೃದಯಾಘಾತದಿಂದ ನಿಧನರಾದ ವೈಎನ್‌ಕೆಯವರಿಗೂ ನನಗೂ ಐವತ್ತಕ್ಕೂ ಹೆಚ್ಚು ವರ್ಷಗಳ ನಂಟು. ನನಗೆ ವೈಎನ್‌ಕೆಯವರ ಮೊದಲ ಪರಿಚಯವಾದದ್ದು ನಲವತ್ತರ ವರ್ಷಗಳಲ್ಲಿ. ಆಗ ಅವರು 'ದೇಶಬಂಧು' ಪತ್ರಿಕೆಯಲ್ಲಿ ಕೆಲಸ ಮಾಡುತ್ತಿದ್ದರು. ನಾನು ನ್ಯಾಷನಲ್ ಕಾಲೇಜಿನಲ್ಲಿ ಓದುತ್ತಿದ್ದೆ. ಮಾರ್ಕ್ಸ್‌ವಾದಿ ವಿಚಾರಧಾರೆಯಿಂದ ಆಕರ್ಷಿತನಾಗಿದ್ದ ನಾನು ಆಗಾಗ್ಗ ವೈಎನ್‌ಕೆಯವರನ್ನು 'ದೇಶಬಂಧು' ಕಾರ್ಯಾಲಯದಲ್ಲಿ ಸಂಧಿಸುತ್ತಿದ್ದೆ. ಅವರು ನನಗೆ "The Ragged Trousered Philanthropists", "The Iron Heel" ಮುಂತಾದ ಪುಸ್ತಕಗಳನ್ನು ಕೊಟ್ಟು, ಮಾರ್ಕ್ಸ್‌ವಾದಿ ವಿಚಾರಧಾರೆಯ ಬಗೆಗೆ ನನ್ನಲ್ಲಿದ್ದ 'ಆಕರ್ಷಣೆ'ಯನ್ನು 'ಆಸಕ್ತಿ'ಯನ್ನಾಗಿ ಪರಿವರ್ತಿಸಿದರು. ಆ ಕಾಲದಲ್ಲಿ ವೈಎನ್‌ಕೆ, ನ್ಯಾಷನಲ್ ಕಾಲೇಜಿನಲ್ಲಿ ರಸಾಯನಶಾಸ್ತ್ರ ಅಧ್ಯಾಪಕ ರಾಗಿದ್ದ ಕೆ. ಶ್ರೀನಿವಾಸನ್, ಎಂ. ಎಸ್. ಕೃಷ್ಣನ್ ಮುಂತಾದವರು ಮಾರ್ಕ್ಸ್‌ವಾದದಿಂದ ಪ್ರಭಾವಿತರಾಗಿದ್ದ ಪ್ರಮುಖ ಬುದ್ಧಿಜೀವಿಗಳಾಗಿದ್ದರು.

ಅನಂತರ ನಾನು ಮೈಸೂರಿಗೆ ಮಹಾರಾಜರವರ ಕಾಲೇಜಿನಲ್ಲಿ ಬಿ. ಎ. ಆನರ್ಸ್ ಓದಲು ಹೋದೆ. ಮೈಸೂರಿಗೆ ಬಂದಾಗಲೆಲ್ಲ ವೈಎನ್‌ಕೆ ನನ್ನನ್ನು ಭೇಟಿ ಯಾಗುತ್ತಿದ್ದರು. ನನ್ನನ್ನು ಗೋಪಾಲಕೃಷ್ಣ ಅಡಿಗರ ಮನೆಗೆ, ಚದುರಂಗರ ಮನೆಗೆ, ಕಲಾವಿದ ಆರ್‌ಎಸ್‌ಎನ್‌ರ ಮನೆಗೆ ಕರೆದೊಯ್ಯುತ್ತಿದ್ದರು. ಹೋದೆಡೆಯಲ್ಲೆಲ್ಲ ಅವರು ನಡೆಸುತ್ತಿದ್ದ ಸಾಹಿತ್ಯ ಕುರಿತ ಚರ್ಚೆ, ತಾವು ಆದೇ ತಾನೆ ಓದಿದ್ದ ಪುಸ್ತಕಗಳ ವಿಮರ್ಶೆ ನನಗೆ, ನನ್ನ ಓದಿಗೆ, ಬಹಳಷ್ಟು ಸಹಕಾರಿಯಾಗುತ್ತಿತ್ತು.

ಐವತ್ತರ ವರ್ಷಗಳಲ್ಲಿ ನಾನು ದೆಹಲಿಗೆ 'ಸೋವಿಯೆತ್ ದೇಶ' ಪತ್ರಿಕೆಯಲ್ಲಿ ಕೆಲಸ ಮಾಡಲು ಹೋದೆ. ಅಧ್ಯಾಪಕ ವೃತ್ತಿಯನ್ನು ಬಿಟ್ಟು ಈ ಕೆಲಸ ಕೈಗೊಳ್ಳುವಂತೆ ಪ್ರೇರಿಸಿದವರಲ್ಲಿ ವೈಎನ್‌ಕೆಯವರೂ ಒಬ್ಬರಾಗಿದ್ದರು. ಅಲ್ಲಿಗೆ ಹೋದ ಮೇಲೂ ನನ್ನ ಮತ್ತು ವೈಎನ್‌ಕೆಯವರ ನಡುವಿನ ನಂಟು ಕುಂದಲಿಲ್ಲ. ಅವರು ಅನೇಕ ಬಾರಿ ದೆಹಲಿಗೆ ಬಂದಿದ್ದರು. ಬಂದಾಗಲೆಲ್ಲ ನನ್ನನ್ನು ಭೇಟಿಯಾಗುತ್ತಿದ್ದರು. ಒಮ್ಮೆ 'ಪ್ರಜಾವಾಣಿ'ಗೆ ಉತ್ತಮ ವಿನ್ಯಾಸಕ್ಕಾಗಿ ಲಭಿಸಿದ್ದ ಪಾರಿತೋಷಕವನ್ನು ಪಡೆಯಲು ದೆಹಲಿಗೆ ಬಂದಾಗ ಆ 'ಅಧಿಕೃತ' ವ್ಯವಹಾರ ಮುಗಿದ ನಂತರ ಹೆಚ್ಚಿನ ವೇಳೆಯನ್ನು ಅವರು ನನ್ನೊಟ್ಟಿಗೇ ಕಳೆದರು. ಹೆಸರಾಂತ ಹೋಟೆಲಿನಲ್ಲಿ ಉಳಿಯಲು ವ್ಯವಸ್ಥೆ ಮಾಡಿದ್ದರೂ ಬಹುಮಟ್ಟಿಗೆ ನನ್ನ ಕೋಣೆಯಲ್ಲೇ ಇರುತ್ತಿದ್ದರು. ನನ್ನನ್ನು ಶ್ರೀ ಎಚ್. ವೈ. ಶಾರದಾ ಪ್ರಸಾದರಲ್ಲಿಗೆ, ಲೋದಿ ಕಾಲೋನಿಯಲ್ಲಿ ಮನೆ ಮಾಡಿದ್ದ ಶ್ರೀ ಬಿ. ವಿ. ಕಾರಂತ ಮತ್ತು ಶ್ರೀಮತಿ ಪ್ರೇಮಾ ಕಾರಂತರಲ್ಲಿಗೆ, ಕರೋಲ್‌ಬಾಗಿನಲ್ಲಿದ್ದ ಶ್ರೀ ಶಾ. ಬಾಲೂರಾಯರಲ್ಲಿಗೆ ಕರೆದೊಯ್ದಿದ್ದರು.

ಅನಂತರ ನಾನು ಮದ್ರಾಸಿಗೆ ವರ್ಗವಾಗಿ ಬಂದೆ. ಬೆಂಗಳೂರಿಗೆ ಹತ್ತಿರವಾದ್ದರಿಂದ ವೈಎನ್‌ಕೆ ಮತ್ತು ನನ್ನ ನಡುವಿನ ನಂಟು ಅಷ್ಟೂ ಹೆಚ್ಚು ಹತ್ತಿರವಾಯಿತು. ಮದ್ರಾಸಿಗೆ ಬಂದಾಗಲೆಲ್ಲ ವೈಎನ್‌ಕೆ ನನ್ನೊಡನೆಯೂ, ನಮ್ಮ ಕಾರ್ಯಾಲಯದಲ್ಲೇ ಆಗ ಕೆಲಸ ಮಾಡುತ್ತಿದ್ದ ಶ್ರೀ ಎಸ್. ದಿವಾಕರ್‌ರೊಡನೆಯೂ ಕಾಲ ಕಳೆಯುತ್ತಿದ್ದರು. ನಮ್ಮನ್ನು ಬೋಗ್‌ರೋಡ್‌ನಲ್ಲಿ ಮನೆ ಮಾಡಿದ್ದ ಶ್ರೀ ಗಿರೀಶ್ ಕಾರ್ನಾಡ್‌ರಲ್ಲಿಗೆ (ಅವರಾಗ ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್‌ನಲ್ಲಿ ಕೆಲಸ ಮಾಡುತ್ತಿದ್ದರು. ಮತ್ತು 'ಸಂಸ್ಕಾರ' ಚಲಚ್ಚಿತ್ರದ ಪೂರ್ವಾಭ್ಯಾಸಗಳಲ್ಲಿ ಬಹುವಾಗಿ ನಿರತರಾಗಿದ್ದರು) ಕರೆದೊಯ್ದಿದ್ದರು.

ಅನಂತರ ನಾನು ಎಪ್ಪತ್ತರ ವರ್ಷಗಳಲ್ಲಿ 'ಪ್ರಗತಿ ಪ್ರಕಾಶನ'ದಲ್ಲಿ ಕೆಲಸ ಮಾಡಲು ಮಾಸ್ಕೋಗೆ ಹೋದೆ. ದೂರ ಹೋದರೂ ನಮ್ಮ ನಂಟೇನೂ ದೂರಾಗಲಿಲ್ಲ. ವೈಎನ್‌ಕೆ ಅಲ್ಲಿಗೂ ಬಂದರು. ಶ್ರೀ ಮೊರಾರ್ಜಿ ದೇಸಾಯಿಯವರು ಸೋವಿಯೆತ್ ಒಕ್ಕೂಟಕ್ಕೆ ಅಧಿಕೃತ ಭೇಟಿ ನೀಡಿದಾಗ ಅವರೊಟ್ಟಿಗೆ ಬಂದಿದ್ದ ಪತ್ರಿಕಾ ತಂಡದಲ್ಲಿ ಶ್ರೀ ವೈಎನ್‌ಕೆಯವರೂ ಇದ್ದರು. ಅಧಿಕೃತ ಕಾರ್ಯಕಲಾಪಗಳನ್ನು ಬಿಟ್ಟು ಉಳಿದೆಲ್ಲ ಸಮಯವನ್ನೂ ವೈಎನ್‌ಕೆ ನಮ್ಮ ಮನೆಯಲ್ಲೇ ಕಳೆದರು. ತಮ್ಮ ನಗೆಚಾಟಿಕೆಗಳಿಂದ ನಮ್ಮ ಮನೆಯವರನ್ನೆಲ್ಲ ನಕ್ಕು ನಲಿದಾಡಿಸಿದರು. ಮಾಸ್ಕೋ ನಗರ ಅವರಿಗೆ ಬಹಳವಾಗಿ ಒಡಿಸಿತು. ಅಲ್ಲಿನ ವಿಶಾಲ ಬೀದಿಗಳು, ಎಲ್ಲೆಡೆಯೂ ಕಂಡುಬರುತ್ತಿದ್ದ ಶುಚಿ ರುಚಿ, ತುಂಬಿ ತುಳುಕುತ್ತಿದ್ದ ಹಸಿರು ಅವರಿಗೆ ಬಹಳ ಇಷ್ಟವಾಯಿತು.

ಸೋವಿಯೆತ್ ಒಕ್ಕೂಟದಲ್ಲಿ ಕಮ್ಯೂನಿಸ್ಟ್ ವ್ಯವಸ್ಥೆ ಕುಸಿದು ಬಿದ್ದ ನಂತರ ನಾನು ತಾಯ್ನಾಡಿಗೆ, ಬೆಂಗಳೂರಿಗೆ ಹಿಂದಿರುಗಿದೆ. ಈಗಂತೂ ನನ್ನ ವೈಎನ್‌ಕೆಯವರ ನಡುವಿನ ನಂಟು ಮತ್ತಷ್ಟು ಬಲಗೊಂಡಿತು. ಪ್ರತಿ ಭಾನುವಾರವೂ ಬೆಳಿಗ್ಗೆ ವೈಎನ್‌ಕೆ ವಿದ್ಯಾರ್ಥಿ ಭವನದಲ್ಲಿ ಮಾಮೂಲಿ ಮಸಾಲೆ ದೋಸೆ ತಿಂದನಂತರ ಒಬ್ಬರು-ಇಬ್ಬರು ಗೆಳೆಯರೊಂದಿಗೆ, ಗಾಂಧಿಬಜಾರಿನಲ್ಲೇ ಮನೆ ಮಾಡಿದ್ದ ನಮ್ಮ ಮನೆಗೆ ತಪ್ಪದೆ ಬರುತ್ತಿದ್ದರು. ಬಂದಾಗಲೆಲ್ಲ ನಮ್ಮ ಮನೆಯವರಿಗೆಲ್ಲ ತಮ್ಮ ವಿನೋದ ಸಾಹಿತ್ಯದ ರಸದೌತಣ ಉಣಬಡಿಸುತ್ತಿದ್ದರು. ನಮ್ಮ ಮನೆಯವರೂ ಪ್ರತಿ ಭಾನುವಾರವೂ ವೈಎನ್‌ಕೆಯವರ ಬರವಿಗಾಗಿ ಕಾಯುತ್ತಿದ್ದರೆಂದೇ ಹೇಳಬೇಕು. ಅವರನ್ನು 'ವಾರದ ವ್ಯಕ್ತಿ'ಯನ್ನಾಗಿ ಮಾಡಿದ್ದರು.

ಒಂದು ಭಾನುವಾರ ವೈಎನ್‌ಕೆ ನಮ್ಮ ಮನೆಗೆ ಬಂದಿದ್ದಾಗ ನಾನು ಅವರಿಗೆ ಅದೇ ಹಿಂದಿನ ದಿನ ಅಮೆರಿಕದ ಕ್ಯಾಲಿಫೋರ್ನಿಯಾದಿಂದ ನನಗೆ ಬಂದಿದ್ದ ನನ್ನ ಮಗಳ ಪತ್ರವನ್ನು ತೋರಿಸಿದೆ. ಆ ಪತ್ರದಲ್ಲಿ ನನ್ನ ಮಗಳು ತಾನು ಆಗಷ್ಟೆ ಓದಿದ್ದ ಒಂದು ಪುಸ್ತಕದಿಂದ ಒಂದು ಉದ್ಧರಣ ನೀಡಿದ್ದಳು :

"The Earth here is so kind
that if you tickle her with a hoe
She laughs with a harvest."

ಇದನ್ನು ವೈಎನ್‌ಕೆ ಬಹಳವಾಗಿ ಇಷ್ಟಪಟ್ಟರು. 'ಕನ್ನಡಪ್ರಭ'ದ ತಮ್ಮ 'Wonder ಕಣ್ಣು' ಅಂಕಣದಲ್ಲಿ ಬಳಸುವುದಾಗಿ ನನ್ನ ಮಗಳಿಗೆ ಬರೆದು ತಿಳಿಸುವಂತೆ ಹೇಳಿದರು.

ವೈಎನ್‌ಕೆಯವರದು ಅದೊಂದು ದೊಡ್ಡ ಗುಣವಾಗಿತ್ತು. ತಾವೇ ಹೊಸ ಹೊಸ ಪುಸ್ತಕಗಳನ್ನು ಓದುವ ಚಟ ಬೆಳೆಸಿಕೊಂಡಿದ್ದರ ಜೊತೆಗೆ ಇತರರಿಗೂ ಈ ಚಟ ಹಚ್ಚಿಸುತ್ತಿದ್ದರು. ಓದಿದ ಪುಸ್ತಕಗಳಲ್ಲಿ ನಮಗೆ ಇಷ್ಟವಾದ ಅಂಶಗಳನ್ನು, ಭಾಗಗಳನ್ನು, ಗುರುತು ಹಚ್ಚಿಕೊಂಡು ನಮ್ಮ ದೈನಂದಿನ ವ್ಯವಹಾರಗಳಲ್ಲಿ ಅವನ್ನು ಬಳಸುವಂತೆ ನಮ್ಮನ್ನು ಪ್ರೇರಿಸುತ್ತಿದ್ದರು. ಯಾವಾಗ ಭೇಟಿಯಾದರೂ ಅವರು ನಮ್ಮನ್ನು 'ಸುಮ್ಮನೆ ಇರಾನ ಅಂದರೆ ಇರಾಕ್ ಬಿಡುತ್ತಿರಲಿಲ್ಲ' (ಇರಾನ್-ಇರಾಕ್ ಯುದ್ಧ ಸಮಯದಲ್ಲಿ ಅವರು ಹಣೆದ ಜೋಕು).

ನನ್ನ ವಿಷಯದಲ್ಲೇ ಇದು ಎಷ್ಟು ನಿಜ ಎಂಬುದು ನನಗೀಗ ಅರಿವಾಗುತ್ತಿದೆ. ನನ್ನ ಬಿ.ಎ. ಆನರ್ಸ್ ಓದು ಮುಗಿದ ನಂತರ ಕೆಲಸಕ್ಕಾಗಿ ಪರದಾಡುತ್ತಿದ್ದಾಗ, ಉತ್ತಮ ಕಥೆಗಳನ್ನು ಭಾಷಾಂತರಿಸುವ, ಪತ್ರಿಕೆಗಳಿಗೆ ಲೇಖನಗಳನ್ನು ಬರೆಯುವ ಆಸಕ್ತಿಯನ್ನು ನನ್ನಲ್ಲಿ ಮೂಡಿಸಿದವರಲ್ಲಿ ಶ್ರೀ ನಿರಂಜನ, ಶ್ರೀ ಇ.ಆರ್. ಸೇತೂರಾಮ್, ಶ್ರೀ ಎಂ.ಬಿ. ಸಿಂಗ್‌ರ ಜೊತೆಗೆ ವೈಎನ್‌ಕೆಯವರೂ ಒಬ್ಬರಾಗಿದ್ದರು. ನಾನು 'ಪ್ರಜಾವಾಣಿ'ಯಲ್ಲಿ ವಾರವಾರವೂ ಆರು ತಿಂಗಳ ಕಾಲ 'ವಿಶ್ವದರ್ಪಣ' ಅಂಕಣ ಬರೆಯಲು ಅವಕಾಶ

ಲಭಿಸಿದುದಕ್ಕೆ ಇವರೆಲ್ಲ ಕಾರಣರು.

ನಾನು ಮೈಸೂರಿನಲ್ಲಿ ಓದುತ್ತಿದ್ದಾಗ ನಮ್ಮ ಪ್ರಾಧ್ಯಾಪಕರಾಗಿದ್ದ ಪ್ರೊ॥ ಸಿ. ಡಿ. ನರಸಿಂಹಯ್ಯನವರು "Literary Criterion" ಎಂಬ ತ್ರೈಮಾಸಿಕ ಪತ್ರಿಕೆಯೊಂದನ್ನು ಪ್ರಕಟಿಸುತ್ತಿದ್ದರು. ಅದರಲ್ಲಿ ನಾನು ಬರೆದ "Marxist Interpretation of Literature" ಎಂಬ ಲೇಖನವನ್ನು ವೈಎನ್‌ಕೆ ಓದಿ ಮೆಚ್ಚಿಕೊಂಡಿದ್ದರು. ಅಂತೆಯೇ ಆ ಪತ್ರಿಕೆಯಲ್ಲೊಮ್ಮೆ ಷೇಕ್ಸ್‌ಪಿಯರನ ಕುರಿತು ಪ್ರಕಟವಾಗಿದ್ದ ವಿಮರ್ಶಾತ್ಮಕ ಲೇಖನವೊಂದರಲ್ಲಿ ಮಾರ್ಕ್ಸ್‌ವಾದಿ ವಿಮರ್ಶೆಯ ಬಗೆಗೆ ಕೆಲವು ತೆಗಳಿಕೆಯ ಮಾತುಗಳಿದ್ದುವು. ನಾನು ಅದಕ್ಕೆ ಪ್ರತ್ಯುತ್ತರವಾಗಿ ಒಂದು ಲೇಖನ ಬರೆದು ಐವಾರ್ ಮಾಂಟೆಗೋ, ಜಾಕ್ ಲಿಂಡ್ಸೇ, ಹೊವಾರ್ಡ್ ಫಾಸ್ಟ್ ಮತ್ತಿತರರ, ಖ್ಯಾತ ಲೇಖಕರ ಮಾತುಗಳನ್ನುದ್ಧರಿಸಿ ಮಾರ್ಕ್ಸ್‌ವಾದಿ ವಿಮರ್ಶೆಯೂ ಒಂದು ನಿಯಮಬದ್ಧ ನಿಲುವಿನಿಂದ ಮಾಡಿದ ಮೌಲ್ಯಯುತ ಅಭಿವ್ಯಕ್ತಿಯಾಗಿದ್ದು ಅದನ್ನು ಸಾರಾಸಗಟಾಗಿ ತೆಗಳತಕ್ಕದ್ದಲ್ಲವೆಂದು ತಿಳಿಸಿ, ಕೊನೆಯಲ್ಲಿ ಈ ಮಾತುಗಳನ್ನು ಬರೆದಿದ್ದೆ : "Let not the flames of cold war stretch their tongues into the realm of letters too and consume the little knowledge and sanity of judgement left in us in the evolution of a literary criterion." ಆ ಲೇಖನವೇನೂ ಪ್ರಕಟವಾಗಲಿಲ್ಲ. ಆದರೆ ಅದರ ಈ



ಕೊನೆಯ ಮಾತುಗಳನ್ನು ವೈಎನ್‌ಕೆ ಬಹಳವಾಗಿ ಮೆಚ್ಚಿ ಪದೇ ಪದೇ ಅದರ ಬಗೆಗೆ ಹೇಳುತ್ತಿದ್ದರು.

ಅದೇ ರೀತಿ ಮತ್ತೊಮ್ಮೆ ನಮ್ಮ ಮತ್ತೊಬ್ಬ ಪ್ರಾಧ್ಯಾಪಕರಾಗಿದ್ದ ಪ್ರೊ॥ ಎಸ್.ವಿ. ರಂಗಣ್ಣನವರಿಗೆ ಶ್ರೀ ಕೆ. ವಿ. ಸುಬ್ಬಣ್ಣ ಮತ್ತಿತರರು 'ಬಾಗಿನ' ಎಂಬ ಗೌರವ ಗ್ರಂಥ ಸಮರ್ಪಿಸಲು ನಿರ್ಧರಿಸಿದಾಗ, ಅದರಲ್ಲಿ ರಷ್ಯದ ಕ್ರಾಂತಿಕಾರಿ ಕವಿ ಮಯಕೋವ್‌ಸ್ಕಿಯ ಬಗೆಗೆ ಒಂದು ಲೇಖನ ಬರೆಯಲು ನನಗೆ ಬೇಕಾದ ಸಾಮಗ್ರಿ ಒದಗಿಸಿ ಸಹಾಯ ಮಾಡಿದವರು ವೈಎನ್‌ಕೆ ಅವರೇ.

ನಾನು ಈಚೆಗೆ ಗಾಂಧಿಬಜಾರಿನಿಂದ ನಮ್ಮ ಮನೆಯನ್ನು ತ್ಯಾಗರಾಜನಗರಕ್ಕೆ ಬದಲಿಸಿದ ನಂತರ ವೈಎನ್‌ಕೆಯವರೊಂದಿಗೆ ನನ್ನ ಸಂಪರ್ಕ ದೂರವಾಣಿಗಷ್ಟೇ ಸೀಮಿತವಾಯಿತು. ಆದರೂ ಪ್ರತಿ ಭಾನುವಾರ ಬಂದಾಗಲೂ ನಾವು ಅವರನ್ನು ನೆನಪಿಸಿಕೊಳ್ಳುತ್ತಲೇ ಇದ್ದೆವು.

ಅಮೆರಿಕಕ್ಕೆ ಹೋಗಿಬಂದ ನಂತರ ನಮ್ಮ ಹೊಸ ಮನೆಗೆ ಖಂಡಿತ ಬರುವುದಾಗಿ ವೈಎನ್‌ಕೆ ಮಾತು ಕೊಟ್ಟಿದ್ದರು. ಆದರೆ ಅದು ಈಡೇರಲೇ ಇಲ್ಲ. 'ಅಲ್ಲಿದೆ ನಮ್ಮ ಮನೆ, ಇಲ್ಲಿಗೆ ಬಂದಿರುವೆ ಸುಮ್ಮನೆ' ಎನ್ನುವಂತೆ ಅವರು ಆ ಮನೆಗೆ ಹೊರಟೇ ಹೋದರು.

ಅವರು ನಮ್ಮೊಡನೆ ಈಗ ಇಲ್ಲದಿದ್ದರೂ ಅವರು ನಮ್ಮ ಬಗೆಗೆ, ವಿಶೇಷವಾಗಿ ನನ್ನ ಬಗೆಗೆ, ತೋರಿದ ಮಮತೆ ಮಾತ್ರ ಎಂದೂ ಮಾಸದಂತೆ ಚಿರಸ್ಥಾಯಿಯಾಗಿ, ಹಸಿರಾಗಿ, ಉಳಿದೇ ಇದೆ.

ಕೆ. ಎಲ್. ಗೋಪಾಲಕೃಷ್ಣ ರಾವ್
'ಗೋಕುಲ', ನಂ. ೨೬೧, ೨ನೇ ಕ್ರಾಸ್, ಸಿ. ಟಿ. ಬೆಡ್,
ತ್ಯಾಗರಾಜನಗರ, ಬೆಂಗಳೂರು - ೫೬೦ ೦೨೮

---

(೨೫ ಪುಟದಿಂದ)

ಹಸಿರು, ಆದರೆ ಅಲ್ಲಿ ಯಾರಿಗೂ ಇಲ್ಲ ಉಸಿರು; ಅವರ ಮಾಜಿ ಮುಖಂಡರು ತೂಗುಹಾಕಿದ ಒಂದೇ ಒಂದು ಮೇಲ್ಪಂಕ್ತಿ ಇದು, ''ಬರೀ ಪ್ರಚಾರ, ಅದೂ ಅಗ್ಗದ ಪ್ರಚಾರ''. ಅಂಬೇಡ್ಕರರು ಒಂದು ಮಾತು ಹೇಳಿದ್ದರು, ''ಈ ನಾಡಿನ ಪುನರ್‌ನಿರ್ಮಾಣದ ಸಲುವಾಗಿ ವಂಚಿತವರ್ಗಗಳ ಹೋರಾಟವನ್ನು ಇಲ್ಲಿಯವರೆಗೆ ತಂದು ನಿಲ್ಲಿಸಿದ್ದೇನೆ, ಇಲ್ಲಿಂದ ಮುಂದೆ ನಡೆಸುವವರು ಮಾತ್ರ ಅದನ್ನು ನಡೆಸಬಹುದಾಗಿದೆ. ಆದರೆ ಆ ಹೋರಾಟವನ್ನು ಹಿಂದಕ್ಕೆ ತಳ್ಳುವ ಹಕ್ಕು ಯಾರಿಗೂ ಇಲ್ಲ.'' ಬಹುಶಃ ವಂಚಿತವರ್ಗ ಇಂದು ಮನನ ಮಾಡಬೇಕಿರುವುದು ಈ ಸತ್ಯವನ್ನೇ. ಹೊರತು, ಅದರ ದರ್ಶನಹೀನ ದಲಿತ ಮುಖಂಡರ ಮುಖವಾಣಿಯನ್ನಲ್ಲ ಎಂಬುದು ಬಹುಶಃ ಇನ್ನೂ ಮನಮುಟ್ಟಿರುವಂತೆ ತೋರುವುದಿಲ್ಲ. ಅದರ ಪರಿಣಾಮ ನಾಡಿನ ದಲಿತ ಚಳವಳಿ ಕುಸಿದುಬಿದ್ದು ನೆಲದಿಂದ ಪುನಃ ಎಷ್ಟರಮಟ್ಟಿಗೆ ತಲೆಯೆತ್ತಲು ಸಾಧ್ಯವಾಗಲಿಲ್ಲವೆಂದರೆ, ತೊಂಬತ್ತರ ನಂತರ ಮತ್ತೊಂದು ಮರ್ಮಘಾತ ಅದರ ಮೇಲೆ ಎರಗಿತು : ದಲಿತರು ದುರ್ಬಲರು ಮತ್ತು ಅಲ್ಪಸಂಖ್ಯಾತ ಜನಶಕ್ತಿಗಳನ್ನು ''ಬಹುಜನ ಸಮಾಜ ಪಕ್ಷ''ವೆಂದು ಒಗ್ಗೂಡಿಸಿ, ಆ ಶಕ್ತಿ ಲಾಂಛನವನ್ನು ಉತ್ತರ ಭಾರತದಿಂದ ಹೊತ್ತು ತಂದು, ಕನ್ನಡ ನೆಲದ ಗಡಿದಾಟದ ಕಾನ್ಷಿರಾಮ್‌ರವರು, ಆ ಪಕ್ಷವನ್ನು ಗಡಿಪ್ರಾಂತದಲ್ಲಿ ಸುಮ್ಮನೆ ಬಿಸಾಕಿ ಹೋಗಿದ್ದರೂ, ಅದನ್ನು ನಮ್ಮ ನಾಡಿನೊಳಗೆ ಕರೆತಂದು ಬೆಳೆಸುವ ಪ್ರಗತಿಪರರಿಗಾಗಲಿ, ಬಹುಶ್ರುತ ಬಹುಜನ ಮಾನ್ಯರಿಗಾಗಲಿ ಕೊರತೆಯಿರಲಿಲ್ಲ. ಮನುಷ್ಯ ಜೀವನದ ಮೂಲಭೂತ ಸತ್ಯದ ಶೋಧನೆಯಲ್ಲಿ ತೊಡಗಿ, ಸಾಮಾನ್ಯರಲ್ಲಿ ಸಾಮಾನ್ಯರನ್ನೂ ಏನೇನೂ ಗತಿಯಿಲ್ಲದ ನಿರ್ಗತಿಕರನ್ನೂ ಲೋಕಮಾನ್ಯ ಶರಣರನ್ನಾಗಿ ಕಂಡದ್ದು ಕನ್ನಡ ನೆಲ. ಆದರೆ, ಕಾನ್ಷಿರಾಮರು ಮಾಡಿದ ಒಂದೇ ಒಂದು ತಪ್ಪೆಂದರೆ, ಬಹುಜನ ಸಮಾಜ ಪಕ್ಷವನ್ನು ತಂದು ಅದೇ ದಲಿತ ಚಳವಳಿಯ ಮಾಜಿ ನೇತಾರರ ಕೈಯಲ್ಲಿಟ್ಟು, ಅವರನ್ನು ನಂಬಿ ಉತ್ತರ ಪ್ರದೇಶಕ್ಕೆ ವಾಪಸಾದರು. ಅದರ ಪರಿಣಾಮ, ಮೈಕೊಡವಿ ಮತ್ತೆ ಮೇಲೇಳಲು ಯತ್ನಿಸಿದ ಅದೇ ಬಹುಜನ ಶಕ್ತಿ, ಕೇವಲ ಅನತಿ ಕಾಲದಲ್ಲಿ, ಅದೇ ದಲಿತ ಚಳವಳಿಯ ಮಾಜಿ ಮುಖಂಡರ ಹಸ್ತದಲ್ಲೂ, ಜನತಾದಳದ ಅವರ ಮಾಜಿ ಖಜಾನೆ ಪ್ರಭುಗಳ ಪಕ್ಷರಾಜಕಾರಣದ ಚಕ್ರದಡಿಯಲ್ಲೂ ಸಿಲುಕಿ ಅದು ಗಂಭೀರ ಗಾಯಾಳುವಾಗಿ ಬಿದ್ದುಹೋಯಿತು.

ಇಷ್ಟೆಲ್ಲಾ ಆದಾಗ್ಯೂ, ಒಂದು ಮೂಲಭೂತ ಸತ್ಯವನ್ನಂತೂ ಮರೆಯುವಂತಿಲ್ಲ; ದಲಿತ ಚಳವಳಿ ಇನ್ನೊಂದು ಛಿದ್ರಗೊಳ್ಳಲು ಅದರ ಮುಖಂಡರ ದರ್ಶನಹೀನ ಸ್ಥಿತಿ ಮತ್ತು ಅವರು ಸೃಷ್ಟಿಸಿದ ಮತ್ತು ಅವರದೇ ಆದ ಜ್ಞಾನಶೂನ್ಯ ಗೊಂದಲಗಳು ಕಾರಣವೆಂಬುದು ಕೇವಲ ಹೊರನೋಟಕ್ಕೆ ಮಾತ್ರ ಸತ್ಯ. ಅಷ್ಟೇ ಅಲ್ಲದೆ, ಸಾಹಿತ್ಯದಂಥ ಕಲಾ ಮಾಧ್ಯಮಗಳ ನೆಲೆಗಳಿಂದ ಹೊರಟ ಅದೇ ದಲಿತ ಮುಖಂಡರು, ನಾಡಿನ ಭಾವನಾತ್ಮಕ ಸಮುದಾಯದ ಬದುಕಿಗೆ ತಮ್ಮ ಶೋಧನೆ ಮತ್ತು ಚಿಂತನೆಗಳಿಂದ ವಿಶೇಷ ಕೊಡುಗೆಯನ್ನೇನೂ ಮಾಡಿದವರಲ್ಲ. ಇನ್ನೂ ಸರಿಯಾಗಿ ಹೇಳಬೇಕೆಂದರೆ, ಈ ಮುಖಂಡರಲ್ಲಿ ಯಾರೂ ಅಂಬೇಡ್ಕರರನ್ನು ಆಮೂಲಾಗ್ರವಾಗಿ ಓದಿಕೊಂಡವರೂ ಅಲ್ಲ. ಏಕೆಂದರೆ, ಈ ಮುಖಂಡರಿಗೆ ಸರ್ಕಾರಿ ಸವಲತ್ತುಗಳು ಸುಲಭವಾಗಿದ್ದುದರಿಂದ, ಅಂಬೇಡ್ಕರರನ್ನು ಓದುವ ಅಗತ್ಯ ಅವರಿಗೆ ಬೀಳಲಿಲ್ಲ. ಬದಲಾಗಿ ದಲಿತೇತರರಾದ ಕೆಲವು ಮೀಡಿಯೋಕರ್ ಬುದ್ಧಿಜೀವಿಗಳ ಸಖ್ಯವಷ್ಟೇ ಅವರಿಗೆ ಸಾಕಾಗಿತ್ತು. ಆದಾಗ್ಯೂ ಒಂದು ಜೀವಂತ ಸತ್ಯಸಂಗತಿಯೆಂದರೆ, ಅವಮಾನ ಮತ್ತು ಅನ್ಯಾಯಗಳ ನಡುವೆಯೇ ತಲೆಯೆತ್ತಿದ ಹಿಂದುಳಿದ ಮತ್ತು ದಲಿತ ವರ್ಗದ ಜನಶಕ್ತಿಯನ್ನು ಕೊಲ್ಲುವುದು ಯಾರಿಂದಲೂ ಎಂದಿಗೂ ಸಾಧ್ಯವಿಲ್ಲ; ಅದು ಜೀವಂತವಾಗಿಯೂ ಇದೆ, ಸಶಕ್ತವಾಗಿಯೂ ಇದೆ. ಆದರೆ ಒಂದೆಡೆ ಅವರ ಮಾಜಿ ಮುಖಂಡರು, ಇನ್ನೊಂದೆಡೆ ಅವರ ಅದೇ ಕೆಲವು ಮೀಡಿಯೋಕರ್ ಬುದ್ಧಿಜೀವಿ ಸಖರು, ದಲಿತ ಚಳವಳಿಯ ಹಿಂದಿನ ಜನಶಕ್ತಿಯು, ಒಂದು ಸಂಘಟನಾತ್ಮಕ ಶಕ್ತಿಯಾಗಿ ನಿಲ್ಲಲು ಬಿಡುತ್ತಿಲ್ಲ, ಅಷ್ಟೆ. ಆದರೆ ಈ ಅಸ್ಪೃಶ್ಯ ಹಾಗೂ ವಂಚಿತವರ್ಗದ ಆತ್ಮಗಳಲ್ಲಿನ ಆತ್ಮಜಾಗೃತಿಯ ಚೇತನ ಮತ್ತು ಆತ್ಮಗೌರವದ ಅಕ್ಷೀಣ ಆಕಾಂಕ್ಷೆ ಎಂದೆಂದಿಗೂ ಅಂಬೇಡ್ಕರ್ ಮಾತ್ರ ಎಂಬುದು ಸದ್ಯಕ್ಕಂತೂ ಆಚಂದ್ರಾರ್ಕ ಸತ್ಯವೇ ಆಗಿದೆ.

ಡಾ॥ ಮ. ನ. ಜವರಯ್ಯ
ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ
ಮಾನಸಗಂಗೋತ್ರಿ., ಮೈಸೂರು - 570 006

# ಗಾಂಧೀಜಿ ಮತ್ತು ಅವರ ದೈವಕಲ್ಪನೆ

ಎಷ್ಟು ಜನರ ಹೃದಯಗಳು ಇಂದು ದುಃಖತಪ್ತವಾಗಿ ವಿಲಪಿಸುತ್ತಿವೆಯೋ ನನಗೆ ತಿಳಿಯದು. ನನ್ನ ಹೃದಯವಂತೂ ಹಾಗೆ ಮಾಡುತ್ತಿದೆ. ಗಾಂಧೀಜಿಯವರು ನಮ್ಮನ್ನು ಬಿಟ್ಟು ಹೋದ ಈ ಐವತ್ತು ವರ್ಷಗಳಿಂದೀಚೆಗೆ ಎಂದೂ ನನ್ನ ಹೃದಯ ಇಷ್ಟು ತೀವ್ರವಾಗಿ ವಿಲಪಿಸಿದುದಿಲ್ಲ. ಭಾರತೀಯನೊಬ್ಬ – ಅವನು ಯಾವುದೇ ಪಂಗಡಕ್ಕೆ ಸೇರಿದವನಾಗಿರಬಹುದು – ವಿದೇಶೀ ಕ್ರೈಸ್ತ ಪಾದ್ರಿಯೊಬ್ಬರನ್ನು ಜೀವಂತವಾಗಿ ಸುಟ್ಟು ಬೇಯಿಸುವಂತಹ ಘೋರ ದಿನ, ಕ್ರೈಸ್ತ ಪ್ರಾರ್ಥನಾಮಂದಿರಗಳನ್ನು ಭಸ್ಮಗೊಳಿಸುವಂತಹ ದುರ್ದಿನ, ಬರಬಹುದೆಂದು ನಾನು ಎಂದೂ ಉನ್ಮತ್ತ ಕನಸು ಮನಸಿನಲ್ಲೂ ಎಣಿಸಿರಲಿಲ್ಲ.



ಮೂವತ್ತರ ವರ್ಷಗಳಲ್ಲಿ ನಾನು ಶಾಲಾ ಬಾಲಕನಾಗಿದ್ದಾಗ ಗಾಂಧೀಜಿಯವರ ಕರೆಯ ಮೇರೆಗೆ ಪ್ರತಿದಿನ ಬೆಳಗ್ಗೆ ರಾಮನಾಮ ಜಪಿಸುತ್ತ 'ಪ್ರಭಾತ ಫೇರಿ'ಗಳಲ್ಲಿ ಮೈಲಿಗಟ್ಟಲೆ ಮೆರವಣಿಗೆ ಹೋಗುತ್ತಿದ್ದುದು, ಆ ಪ್ರಭಾತ ಫೇರಿಗಳಲ್ಲಿ ಕ್ರೈಸ್ತ ಪಾದ್ರಿಗಳು, ಮುಸ್ಲಿಮ್ ಮೌಲ್ವಿಗಳು, ಹಿಂದೂ ನಾಯಕರು ಎಲ್ಲರೂ ಮತಭೇದವಿಲ್ಲದೆ ಪಾಲ್ಗೊಳ್ಳುತ್ತಿದ್ದುದು, ನನಗಿನ್ನೂ ನೆನಪಿದೆ.




ಅನಂತರ ನಲವತ್ತರ ವರ್ಷಗಳಲ್ಲಿ ಕಾಲೇಜು ಸೇರಿದೆ. ಅದು ಅಮೆರಿಕನ್ ಪಾದ್ರಿಯೊಬ್ಬರು ನಡೆಸುತ್ತಿದ್ದ ಹುಲ್ಲು ಜೋಪಡಿಯ ಮನೆಯಾಗಿದ್ದಿತು. ಅಲ್ಲಿ ಪ್ರತಿ ಶುಕ್ರವಾರ ಸಂಜೆ ೫ ಗಂಟೆಗೆ ಗಾಂಧಿ ಪ್ರಾರ್ಥನಾ ಕೂಟಗಳು ಜರಗುತ್ತಿದ್ದುವು. ಅಲ್ಲಿ ನಾವು ಬೈಬಲ್, ಗೀತೆ ಹಾಗೂ ಕುರಾನ್‌ಗಳಿಂದ ಸ್ತುತಿಗೀತೆಗಳನ್ನು ಕೇಳುತ್ತಿದ್ದೆವು, ಹೇಳುತ್ತಿದ್ದೆವು. ಪ್ರತಿ ವಾರವೂ ಸರದಿಯಲ್ಲಿ ನಾವು ೧೫ರಿಂದ ೩೦ ನಿಮಿಷಗಳವರೆಗೆ ಪ್ರಾರ್ಥನಾ ಸಭೆ ನಡೆಸುತ್ತಿದ್ದೆವು. ಅಂಬರ್ ಚರಕಗಳಿಂದ ನೂಲು ತೆಗೆಯುತ್ತಿದ್ದೆವು. ಓಹ್, ಅದೆಂಥ ಭಾವೋನ್ಮತ್ತದ ವಾತಾವರಣವಾಗಿದ್ದಿತು! ಸದಾ ಕಾಲ ನೆನಪಿನಲ್ಲಿಟ್ಟದ್ದು ಸವಿಯುವಂತಹುದಾಗಿದ್ದಿತು. ಇಂದಿಗೂ ನಾವೆಲ್ಲ ಹಾಡುತ್ತಿದ್ದ 'ಭಗವತ್ ಪ್ರಾರ್ಥನೆ' ನನ್ನ ಮೆಚ್ಚಿನ ಸ್ತುತಿ ಗೀತೆಯಾಗಿದೆ.

ಆ ಕಾಲದ ಗಾಂಧೀವಾದಿಗಳು ಈಗ ಎಲ್ಲಿ ಹೋದರು –ನನಗೆ ಆಶ್ಚರ್ಯವಾಗುತ್ತದೆ. ಯುವಕರು ಇಂದು ಇಷ್ಟು ಉತ್ಸಾಹಶೂನ್ಯರಾಗಿದ್ದಾರೆ? ಅವರು ತಮ್ಮ ಹೃದಯ ಶೋಧನೆ ನಡೆಸಲು ಇದೀಗ ಸರಿಯಾದ ಕಾಲವಾಗಿದೆ. ತಾವು ಇಂದಿಗೆ ಅಪ್ರಸ್ತುತ ಎಂದೇಕೆ ಅವರು ಭಾವಿಸುವಂತಾಗಿದ್ದಾರೆ? ಗಾಂಧೀಜಿಯವರಿಗೆ ಅತ್ಯಂತ ಪ್ರೀತಿಪಾತ್ರವಾಗಿದ್ದಂಥ ರಾಮ ನಾಮ ಜಪ ಹಾಗೂ ಚರಕಗಳನ್ನು ತಾವು ಕೈಗೊಂಡು ಆ ಹಿತ ಸಾಧಿಸಲು ಅವರೇಕೆ ಈಗ ಹಿಂಜರಿಯುತ್ತಿದ್ದಾರೆ?

ಸೂರತ್ ನಗರದಲ್ಲಿ ಇಗರ್ಜಿಗಳನ್ನು ಸುಟ್ಟುಹಾಕಿದ ಸಮಯದಲ್ಲಿ ಗಾಂಧೀಜಿಯವರು ಜೀವಂತವಾಗಿದ್ದಿದ್ದರೆ ಆ ಸವಾಲನ್ನು ಹೇಗೆ ಎದುರಿಸುತ್ತಿದ್ದರು ಎಂಬ ಬಗೆಗೆ ಗಾಂಧಿವಾದಿಗಳು ಸ್ವಲ್ಪ ಯೋಚನೆ ಮಾಡಿ ನೋಡಲಿ. ಗಾಂಧಿಯವರು ಕ್ರಿಸ್ತನ ಬಗೆಗೆ ಎಂಥ ಪೂಜ್ಯ ಭಾವನೆ ಹೊಂದಿದ್ದರು ಎಂಬುದರ ಕುರಿತು ಚಿಂತಿಸಲಿ. ಗಾಂಧೀಜಿಯವರ ಸ್ಮರಣೆಯ ಸಲುವಾಗಿ ಅವರು ಹೀಗೆ ಮಾಡಬೇಕಾದುದಿಲ್ಲ. ಆದರೆ ತಮ್ಮದೇ ಹಿತದ, ತಮ್ಮ ದೇಶದ ಹಿತದ ಸಲುವಾಗಿ, ಬರಲಿರುವ ಪೀಳಿಗೆಗಳ ಹಾಗೂ ಜಗತ್ತಿನ ಹಿತದ ಸಲುವಾಗಿ, ಅವರು ಇಂದು ಅಂತಹ ಚಿಂತನೆ ಮಾಡಬೇಕಾಗಿದೆ.

ಕ್ರಿಸ್ತ, ರಾಮ ಅಥವಾ ಕೃಷ್ಣರ ಬಗೆಗ ಗಾಂಧಿಯವರು ಕಿಂಚಿತ್ತಾದರೂ ಭೇದಭಾವ ಹೊಂದಿದ್ದರೆ? ಇಂದಿನ ಗಾಂಧಿವಾದಿಗಳೂ ಅಂಥ ಭೇದಭಾವರಾಹಿತ್ಯವನ್ನು ತೋರುವರೆ? ಆದರೆ ಇದಕ್ಕಿಂತ ಹೆಚ್ಚು ಮುಖ್ಯವಾದ ಇನ್ನೊಂದಂಶವಿದೆ : ಇಂದಿನ ಗಾಂಧಿವಾದಿಗಳು, ಗಾಂಧಿಯವರು ಹೊಂದಿದ್ದಂತೆ ರಾಮ, ಕೃಷ್ಣ, ಕ್ರಿಸ್ತ ಅಲ್ಲಾಹ್ ಅಥವಾ ಬೇರಾವುದೇ ಹೆಸರಿನ ದೇವರ ಬಗೆಗೆ ಅಂಥದೇ ನಂಬಿಕೆ ಹೊಂದಿದ್ದಾರೆಯೇ? ಇದೇ ಅತ್ಯಂತ ಮುಖ್ಯ ಪ್ರಶ್ನೆಯಾಗಿದೆ.

ನಾನು ಈ ವಿಷಯ ಇಷ್ಟು ವಿವರವಾಗಿ ಪ್ರಸ್ತಾಪಿಸುತ್ತಿರುವೆನೇಕೆಂದರೆ, ಮೂಲಭೂತವಾದಿಗಳು ನಮ್ಮ ಮುಂದಿಟ್ಟಿರುವ ಸವಾಲನ್ನು ನಮ್ಮ ನಿರೀಶ್ವರವಾದಿ ಜಾತ್ಯಾತೀತ ಎಂದು ಹೇಳಿಕೊಳ್ಳುವಂಥ ಜನರು ಎದುರಿಸಲಾರರು ಎಂಬ ಭಾವನೆ ನನ್ನಲ್ಲಿ ಬೇರೂರಿರುವುದಾಗಿದೆ. 'ಜಾತ್ಯಾತೀತ' ಎಂದು ಹೇಳಿಕೊಳ್ಳುವಂಥ ಈ ಜನ ದಿನ ಬೆಳಗಾದರೆ ಸಾವಿರ ಸಾವಿರ ಸಂಖ್ಯೆಯಲ್ಲಿ ದೇವ ದೇವತೆಗಳ ಗುಡಿಗಳಿಗೆ, ಮೈಲಿಗಟ್ಟಲೆ ದೂರದ ಬೆಟ್ಟದ ತುದಿಯ ಮಂದಿರಗಳಿಗೆ, ತಮ್ಮ ಆಸೆ ಆಕಾಂಕ್ಷೆಗಳು ಈಡೇರಲೆಂದು ಯಾತ್ರೆ ಕೈಗೊಳ್ಳುತ್ತಾರೆ. ಪೂಜಾರಿಗಳ ಬಳಿಗೆ, ಜ್ಯೋತಿಷಿಗಳ ಬಳಿಗೆ ಹೋಗುತ್ತಾರೆ. ದೇವಾಲಯಗಳಿಗೆ, ಚರ್ಚುಗಳಿಗೆ, ಮಸೀದಿಗಳಿಗೆ ಹೋಗಿ ಯಜ್ಞ ಮಾಡುತ್ತಾರೆ. ಕ್ರಿಯಾವಿಧಿಗಳನ್ನು ನೆರವೇರಿಸುತ್ತಾರೆ. ತಮ್ಮ ಆಸೆಗಳು ನೆರವೇರಲೆಂದು ಪ್ರಾರ್ಥಿಸುತ್ತಾರೆ. ಆದರೆ ಇವರು ಯಾವುದೇ ಗಾಂಧಿ ಪ್ರಾರ್ಥನಾ ಸಭೆಗೆ ಹೋಗುವ ಧೈರ್ಯ ತೋರುತ್ತಿಲ್ಲ. ಸಭೆಗೆ ಹೋಗುವುದು ಹಾಗಿರಲಿ, ಮನೆಯಲ್ಲೇ ಕುಳಿತು, ಗಾಂಧಿಯವರು ಮಾಡುತ್ತಿದ್ದಂತೆ ಮನಸ್ಸಿನಲ್ಲೇ ರಾಮ, ಅಲ್ಲಾಹ್ ಅಥವಾ ಕ್ರಿಸ್ತನ ನಾಮ ಸ್ಮರಣೆ ಮಾಡುತ್ತಾರೆಯೇ? ಅದೂ ಇಲ್ಲ.

ಸ್ವಲ್ಪದರಲ್ಲಿ ಹೇಳುವುದಾದರೆ, ಈ 'ಜಾತ್ಯಾತೀತ'ರು ಯಾವುದೇ 'ಜಾತ್ಯಾತೀತ' ದೇವರ ಪ್ರಾರ್ಥನೆ ಮಾಡರು. ಅವರು ಕ್ರಿಶ್ಚಿಯನ್ ದೇವರಿಗೆ, ಹಿಂದೂ ದೇವರಿಗೆ ಅಥವಾ ಮುಸ್ಲಿಮ್ ದೇವರಿಗಷ್ಟೇ ಪ್ರಾರ್ಥನೆ ಸಲ್ಲಿಸಬಲ್ಲರು. ದೇವರಷ್ಟೇ ಜಾತ್ಯಾತೀತ ಎಂದು ಅನೇಕ ಪವಿತ್ರಾತ್ಮರಂತೆ ಗಾಂಧಿಯವರೂ ಮನಗಂಡಿದ್ದರು. ಅಂಥ ದೇವರು ಯಾವುದೇ ಧರ್ಮದ ಅಥವಾ ಪಂಥದ ಸೋಂಕಿನಿಂದ ಮುಕ್ತ. ಗಾಂಧಿಯವರು ಅಂಥ ದೇವರನ್ನು

> ಮಹಿಳೆಯರ ಸಾಮಾಜಿಕ ಸ್ಥಾನಮಾನದ ವಿಷಯದಲ್ಲಿ, ಅವರ ವೈವಾಹಿಕ ರೀತಿ ನಿಯಮಾವಳಿಗಳ ವಿಷಯದಲ್ಲಿ, ಯಾವುದೇ ರೀತಿಯ ಯಾವುದೇ ಬಗೆಯ ಶಾಸ್ತ್ರ ವಾಕ್ಯಗಳನ್ನು ನೆಪಮಾಡಿ ಶೋಷಿಸುವುದು ಶುದ್ಧ ತಪ್ಪು..... ಹಿಂದುಳಿದ ವರ್ಗ ಜಾತಿಗಳಂತೆ ಮಹಿಳೆಯರಿಗೂ ಸಂಸ್ಕೃತ ವಿದ್ಯಾಭ್ಯಾಸ, ಸನಾತನ ಆಧ್ಯಾತ್ಮಿಕ ಸಂಸ್ಕೃತಿ ಅತ್ಯವಶ್ಯ. ಇದರಿಂದ ಅವರು ತಮ್ಮ ಸಮಸ್ಯೆಗಳನ್ನು ತಾವೇ ಪರಿಹರಿಸಿಕೊಳ್ಳಲು ಸಮರ್ಥರಾಗುತ್ತಾರೆ.
>
> – ಸ್ವಾಮಿ ವಿವೇಕಾನಂದ

'ಕಂಡಿದ್ದರು'. ಅವನ ಧ್ವನಿಯನ್ನು 'ಆಲಿಸುತ್ತಿದ್ದರು'. ಅವನ ಸೇವಕನಾಗಿದ್ದರು. ನಿಮ್ಮಲ್ಲಿ ಶಸ್ತ್ರಾಸ್ತ್ರಗಳೇ ಇಲ್ಲ, ನೀವೆಂಥ ಹೋರಾಟ ನಡೆಸುವಿರಿ ಎಂದು ಕೆಲವರು ಗಾಂಧಿಯವರ ಅಹಿಂಸಾ ಹೋರಾಟವನ್ನು ಜರಿದಾಗ ಗಾಂಧಿ ಹೇಳುತ್ತಿದ್ದರು: "ನನ್ನ ಬಳಿ ಜಗತ್ತಿನಲ್ಲೇ ಅತ್ಯಂತ ಶಕ್ತಿಯುತವಾದ ಅಸ್ತ್ರವಿದೆ. ಅದೇ ರಾಮನಾಮ." ಆದರೆ ಅವರ ರಾಮ ಕೇವಲ ಅಯೋಧ್ಯೆಯ ರಾಮನಾಗಿರಲಿಲ್ಲ. ಸತ್ಯವೇ ದೇವರು. ಅದೇ ಶಕ್ತಿ, ಅದೇ ಜೀವನದ ಸಾರ. ಅದು ಪರಿಶುದ್ಧವಾದುದು. ಅದು ನಿರ್ಗುಣ ಪ್ರಜ್ಞೆ. ಅದು ಸನಾತನ, ಶಾಶ್ವತ..... ಆದ್ದರಿಂದ ಸೀತೆಯ ಪತಿ ದಶರಥನ ಪುತ್ರ ಎನ್ನುವಂಥ ರಾಮನು ನನ್ನ ಮಟ್ಟಿಗೆ ಒಂದು ಸರ್ವಶಕ್ತ ಸತ್ತ್ವ. ಅದನ್ನು ನಮ್ಮ ಹೃದಯದಲ್ಲಿ ಅಂಕಿತಗೊಳಿಸಿಕೊಂಡರೆ ನಮ್ಮೆಲ್ಲ ದುಃಖಗಳೂ ಮಾನಸಿಕ ನೈತಿಕ ಹಾಗೂ ಭೌತಿಕ ಸಂಕಟಗಳೂ ದೂರವಾಗುವುವು.

ಇಂದು ಮೂಲಭೂತವಾದಿಗಳು ರಾಷ್ಟ್ರದ ಏಕತೆಗೆ, ಉಳಿವಿಗೆ ಭಾರಿ ಗಂಡಾಂತರ ಒಡ್ಡಿದ್ದಾರೆ. ಅವರ ವಿರುದ್ಧ ಜಾತ್ಯಾತೀತ ಎಂದು ಹೇಳಿಕೊಳ್ಳುವಂಥ ಒಂದು ಹೊಸ ರಂಗ ರೂಪಿಸುವುದರಿಂದಷ್ಟೇ ಅದನ್ನು ನಿವಾರಿಸಲು ಸಾಧ್ಯವಿಲ್ಲ ಎಂದು ನಾನು ಹೇಳಬಯಸುತ್ತೇನೆ. ಮನುಷ್ಯನಿಗೆ ಹೊಟ್ಟೆಗೆ ಒಟ್ಟಿದ್ದರಷ್ಟೇ ಸಾಲದು. ಅವನಿಗೆ, ಬದಿಯಲ್ಲಿ ಒಬ್ಬ ದೇವರೂ ಬೇಕು. ಅಂಥ ದೇವರು ಯಾವತ್ತೂ ಇದ್ದಾನೆ, ಎಲ್ಲರಿಗೂ ಸಿಗುವಂತಿದ್ದಾನೆ. ಆ ದೇವರಂತೂ ಜಾತ್ಯಾತೀತ. ಮನುಷ್ಯನು ಜಾತ್ಯಾತೀತನಾಗಲಾರ. ಅವನಿಗೆ ಅನೇಕ ಮಿತಿಗಳಿವೆ. ಅವನು ದೇವರ ಪೂಜೆಗೆ ತನ್ನದೇ ವಿಧಿ ನಿಯಮಗಳನ್ನು, ವಿಶಿಷ್ಟ ಆಚರಣೆಗಳನ್ನು ರೂಪಿಸಿಕೊಂಡಿರುತ್ತಾನೆ. ಇವುಗಳನ್ನೆಲ್ಲ ಸೇರಿಸಿ 'ಧರ್ಮ' ಎಂಬ ಒಂದು ಹಣೆಪಟ್ಟಿ ಹಚ್ಚಿಕೊಂಡಿರುತ್ತಾನೆ. ನಮ್ಮ ನಾಯಕರೂ ನಮ್ಮ ಬೋಧಕರೂ ಈ ಸೂಕ್ಷ್ಮ ವ್ಯತ್ಯಾಸವನ್ನರಿತು ಸರ್ವರಿಗೂ ಸಮನಾದ ಆ ಒಂದೇ ಜಾತ್ಯಾತೀತ ದೇವರನ್ನು ಪೂಜಿಸುವಂತೆ, ಪ್ರಾರ್ಥಿಸುವಂತೆ ಜನಸಾಮಾನ್ಯರಿಗೆ ಮಾರ್ಗದರ್ಶನ ನೀಡಬೇಕು. ಅಂಥ ಜಾತ್ಯಾತೀತ ದೇವರಲ್ಲಷ್ಟೇ ನಂಬಿಕೆ ಇರಿಸುವಂತೆ, ಅಂಥ ದೇವರ ಬಳಿಗಷ್ಟೇ ತಮ್ಮ ದುಃಖ ದುಗುಡಗಳನ್ನು ಒಯ್ಯುವಂತೆ ಜನರ ಮನ ಒಲಿಸಬೇಕು. ಗಾಂಧಿ, ಕ್ರಿಸ್ತ, ಮಹಮ್ಮದರು ಮಾಡಿದುದು ಇದನ್ನೇ. ಬುದ್ಧನೂ ಹಾಗೆಯೇ ಮಾಡಿ ಅಂಥ ದೇವರನ್ನು ಸತ್ಯವೆಂದು ಆರಾಧಿಸಿದ. ವೇದಾಂತಿಗಳಂತೆ ಗಾಂಧೀಜಿಯವರೂ ಅಂಥ ದೇವರನ್ನೇ ಪರಮ ಸತ್ತ್ವವೆಂದು ಕರೆದರು.

ನೀವು ಹೇಳುವುದಾದರೆ, ಮನುಷ್ಯ — ಎಷ್ಟು ಸುಸಂಸ್ಕೃತನಾಗಿರಬಹುದು, ಆಧುನಿಕನಾಗಿರಬಹುದು- ದೇವರಿಲ್ಲದೆ ಬಾಳಲಾರ. ಅವನನ್ನು ನಿಜವಾದ ದೇವರ ಬಳಿಗೆ ಹೋಗುವಂತೆ ಮಾರ್ಗದರ್ಶನ ನೀಡದಿದ್ದರೆ ಅವನು ವಿಧಿಯಿಲ್ಲದೆ ಮೂಲಭೂತವಾದಿಗಳ ಮಿಥ್ಯಾ ದೇವರ ಬಳಿಗಷ್ಟೇ ಹೋಗುತ್ತಾನೆ. ಗಾಂಧೀಜಿಯವರ ೫೦ನೆಯ ಸಾವಿನ ವಾರ್ಷಿಕಾಚರಣೆಯ ಸಂದರ್ಭದಲ್ಲಿ ಜಗತ್ತಿನಾದ್ಯಂತ ಪ್ರಕಟಗೊಂಡ ಸಾಹಿತ್ಯದಲ್ಲೆಲ್ಲ ಅಂಥ ಜಾತ್ಯಾತೀತ ದೇವರ ಬಗೆಗೆ ಗಾಂಧೀಜಿಯವರು ಹೊಂದಿದ್ದ ನಿಚ್ಚಳ ನಂಬಿಕೆಯ ವಿಷಯ ಏನೂ ಹೇಳದೆ ಹೋದುದು ವಿಷಾದನೀಯ. ಅಂಥ ಜಾತ್ಯಾತೀತ ದೈವಕಲ್ಪನೆಯ ಬಗೆಗೆ ವಿಚಾರ ಪ್ರತಿಪಾದನೆಯೇ ಗಾಂಧೀಯವರ ಬಾಳ ಪ್ರಧಾನ ಗುರಿಯಾಗಿದ್ದಿತು.

ಎಂ. ಬಿ. ಲಾಲ್
ನಿವೃತ್ತ ಸಂಪಾದಕರು, ದಿ ಸ್ಟೇಟ್ಸ್‌ಮನ್, ಡಿ-೨೦, ಪ್ರೆಸ್ ಎನ್‌ಕ್ಲೇವ್, ಸಾಕೇತ, ನವದೆಹಲಿ - ೧೧೦ ೦೧೭

ಅನು -ಕೆ. ಎಲ್. ಗೋಪಾಲಕೃಷ್ಣರಾವ್

# ವಿಷವೃಕ್ಷ ಪರಿಸರದ ಪಕ್ಷ



*ವಿಷಕನ್ಯೆಯರ ಬಗ್ಗೆ ಚರಿತ್ರೆಯಲ್ಲಿ, ಪುರಾಣಗಳಲ್ಲಿ ಸಾಕಷ್ಟು ಸಂಗತಿಗಳನ್ನು ನೀವು ಓದಿರುತ್ತೀರಿ. ಶತ್ರುವನ್ನು ಕೊಲ್ಲಲು ವಿಷ ಉಣಿಸಿ ಬೆಳೆಸಿದ ಕನ್ಯೆಯರನ್ನು ಹಿಂದೆ ಬಳಸುತ್ತಿದ್ದರಂತೆ. ಅವಳೊಂದಿಗೆ ಕೂಡಿಕೊಂಡ ರಾಜ ಬೆಳಗಾಗುವುದರಲ್ಲಿ ಗೊಟಕ್. ಇಂಥ ಉಲ್ಲೇಖಗಳು ಮಹಾಭಾರತದಲ್ಲೂ ಇವೆ. 'ಅಕಟ, ಪಾಂಡು ಮಹೀಶ ವಿಷಕನ್ನಿಕೆಯೆನ್ನನು ಮುಟ್ಟಿದೈ'-ಪಾಂಡು, ಮಾದ್ರಿಯನ್ನು ಕೂಡಿಕೊಂಡಾಗ, ಆಕೆ ಒಂದೇ ಸಮನೆ ಹೀಗೆ ಚೀತ್ಕರಿಸಿದಳಲ್ಲ. (ಋಷಿ ಶಾಪ ಎಂಬುದು ಬೇರೆಯ ಮಾತು). ಇದು ಪುರಾಣದ ಮಾತಾಯಿತು. ಈಗ ಆಹಾರ ಪದಾರ್ಥಗಳಲ್ಲಿ ಬೆರೆತ ಅಥವಾ ಬೆರೆಸಿದ ವಿಷದಿಂದ ನಾವು ನಿತ್ಯವೂ ವಿಷಕಂಠರಾಗುತ್ತಿದ್ದೇವೆ. ಸಸ್ಯಗಳೂ ವಿಷಕಾರಿಯಾಗುತ್ತಿವೆ. ಪರಿಸರದಲ್ಲಿ ಸೀಸದ ಅಂಶ ಹೆಚ್ಚಾಗಿ ನಮ್ಮ ಪುಪ್ಪುಸಗಳು ವಿಷದ ಗಾಳಿಯನ್ನೇ ಉಸಿರಾಡುತ್ತಿವೆ. ಫ್ಯಾಕ್ಟರಿಗಳ ಹೊರಸೂಸುಗಳಲ್ಲೂ ವಿಷ-ವಿಷ-ವಿಷ. ಬೆಂಗಳೂರಿನ 'ಪುಣ್ಯಹಾರಿಣಿ' ನದಿ ವೃಷಭಾವತಿಯ ಉದ್ದಕ್ಕೂ ಸೀಸದ ವಿಷ ಅಲ್ಲಿನ ಗಿಡಮರಗಳಿಗೂ ತರಕಾರಿಗಳಿಗೂ ಅಂಟಿಕೊಂಡಿದೆ. ಅವುಗಳಿಂದ ಬರುತ್ತಿರುವುದು ಪಾಪಲೇಪಿತ ಫಲ.*

*ನೆಲದ ತುಂಬೆಲ್ಲ ಹರಡಿದ ಮಣ್ಣಿನಲ್ಲಿ ಅತಿ ಸೂಕ್ಷ್ಮ ಕಣಗಳಾಗಿ ಬೆರೆತ ಘನಘೋರ ವಿಷಧಾತುಗಳನ್ನು ಹೊರದೂಡಿ, ಪರಿಸರವನ್ನು ಸ್ವಚ್ಛವಾಗಿರಿಸಿಕೊಳ್ಳುವುದು ಹೇಗೆ ? ಇದೀಗ ವಿಜ್ಞಾನಿಗಳು ವೃಕ್ಷ ಸಂಕುಲಕ್ಕೆ ಮೊರೆಹೋಗಿದ್ದಾರೆ. ಅಮೆರಿಕಾದ ಸ್ಯಾನ್‌ಡಿಯಾಗೋದ ಸಂಶೋಧಕರು ಇತ್ತೀಚೆಗೆ ಕೆಲವು ವೃಕ್ಷಗಳನ್ನು ಗುರುತಿಸಿದ್ದಾರೆ. ಅವು ನೆಲದ ಮಣ್ಣಿನಲ್ಲಿ ಸಂಗ್ರಹವಾಗಿರುವ ವಿಷಕಾರಿ ಧಾತುಗಳನ್ನು ಹೀರಿ ಎಲೆಗೆ ರವಾನಿಸಿ ಅಲ್ಲಿ ವಿಷದ ಗೋದಾಮು ಮಾಡುತ್ತವೆಂದು ವರದಿ. ಇವು ವಿಷದ ಸಾಂದ್ರತೆಯಿಂದ ಸಾಯುವುದಿಲ್ಲವೆ ? ವಿಷವನ್ನು ಅರಗಿಸಿಕೊಳ್ಳುವುದು ಹೇಗೆ ? ಕೆಲವು ಸಸ್ಯಗಳಲ್ಲಿ ಫೈಟೋ ಕ್ಯಾಲಾಟಿನ್ ಎಂಬ ಸಹಜ ಪೆಪ್ಟೈಡ್ ಲಭ್ಯವಿದೆ. ಇದನ್ನು ಉತ್ಪಾದಿಸಲೆಂದೇ ಕೆಲವು ಬಗೆಯ ಜೀನ್‌ಗಳಿವೆ. ಇವು ಕ್ಯಾಡ್‌ಮಿಯಮ್ ಮತ್ತು ಪಾದರಸದಂತಹ ವಿಷಕಾರಿ ಧಾತುಗಳನ್ನು ಸಲೀಸಾಗಿ ಬಂಧಿಸುತ್ತವೆಂದು ಸಂಶೋಧನೆಗಳು ದೃಢಪಡಿಸಿವೆ. ಯಾವ ಯಾವ ಪ್ರದೇಶಗಳಲ್ಲಿ ವಿಷಕಾರಿ ಧಾತುಗಳಿಂದ ಮಣ್ಣು ಮಾಲಿನ್ಯವಾಗಿದೆಯೋ ಅಲ್ಲಿ ಇಂಥ ಸಸ್ಯಗಳನ್ನು ಬೆಳೆಯಲು ಭಾರಿ ಸಿದ್ಧತೆಗಳು ನಡೆಯುತ್ತಿವೆ. 'ಅಪರಾಧಂಗಳ ಮನ್ನಿಸು' ಎಂದು ವೃಕ್ಷಗಳಿಗೆ ಸುತ್ತು ಹಾಕಬೇಕಾದ ಅನಿವಾರ್ಯತೆ ಈಗ ವಿಜ್ಞಾನಿಗಳ ಸರದಿ. ಒಂದೇ ಒಂದು ತಾಪತ್ರಯ ಎಂದರೆ ಎಲೆಗಳಲ್ಲಿ ಸಂಗ್ರಹಗೊಂಡ ವಿಷಧಾತುಗಳು ಮತ್ತೆ ಪರಿಸರಕ್ಕೆ ಸೋರಿ ಬರದಂತೆ ನಿಭಾಯಿಸುವುದು ಹೇಗೆ ? ನಿಜಕ್ಕೂ ಇದು ವಿಷವೃತ್ತವೇ.*

ಟಿ. ಆರ್. ಅನಂತರಾಮು
ನಂ. ೩೮೭೮, ೨ನೇ ಹಂತ, ೧೩ನೇ ಮೇನ್, ಕುಮಾರಸ್ವಾಮಿ ಲೇಔಟ್, ಬೆಂಗಳೂರು - ೫೬೦ ೦೭೮

# ವೈಚಾರಿಕತೆಯ ಹರಿಕಾರ ಶಾಂತಿದೂತ ತತ್ತ್ವಜ್ಞಾನಿ ಬರ್ಟ್‌ರೆಂಡ್ ರಸೆಲ್

ಎ. ಶ್ರೀನಿವಾಸಮೂರ್ತಿ

ಹತ್ತು ಹಲವು ಚಿಂತಕರನ್ನು, ಜ್ಞಾನಿಗಳನ್ನು, ಸಂತರನ್ನು ಮಾಧ್ಯಮಗಳು ಶತಮಾನದ ವ್ಯಕ್ತಿಗಳೆಂದು ಹೆಸರಿಸಿವೆ. ಆದರೆ ಆಶ್ಚರ್ಯದ ಸಂಗತಿ ಎಂದರೆ ಕಳೆದ ಶತಮಾನದಲ್ಲಿ ಬೌದ್ಧಿಕ ಜಗತ್ತಿನಲ್ಲಿ ಪದೇ ಪದೇ ಶತಮಾನದ ತತ್ತ್ವಜ್ಞಾನಿ, ಮಹಾನ್ ಚಿಂತಕನೆಂದು ಹೆಸರಿಸಲ್ಪಡುತ್ತಿದ್ದ ಬರ್ಟ್‌ರೆಂಡ್ ರಸೆಲ್‌ರನ್ನು ಆಧುನಿಕ ಮಾಧ್ಯಮಗಳು ಮರೆತಿರುವುದು.

ಅವರು ಮಾನವತಾವಾದಿ, ನಾಸ್ತಿಕ, ವಿಚಾರವಂತ, ಮೇಧಾವಿ, ಶಾಂತಿದೂತ, ವಾಗ್ಮಿ, ಪ್ರಬುದ್ಧ ಲೇಖಕ, ಕಳೆದ ಶತಮಾನದ ಸುಪ್ರಸಿದ್ಧ ತತ್ವಜ್ಞಾನಿ, ಗಣಿತಜ್ಞ, ಇದು ಅವರ ಪಾಂಡಿತ್ಯ. ಅವರು ಬರೆದ ನೂರಾರು ಪುಸ್ತಕಗಳಲ್ಲಿ, ಸಾವಿರಾರು ಉಪನ್ಯಾಸಗಳಲ್ಲಿ ತುಂಬಿ ತುಳುಕುತ್ತಿದೆ. ಎಲ್ಲಕ್ಕಿಂತಲೂ ಮಿಗಿಲಾಗಿ ರಸೆಲ್ ಒಬ್ಬ ಶ್ರೇಷ್ಠ ವಿಶ್ವಶಾಂತಿಯ ಪ್ರತಿಪಾದಕರಾಗಿದ್ದರೆಂದು ಗುರುತಿಸಲ್ಪಡುತ್ತಾರೆ.

**ಬಾಲ್ಯ :** ಬರ್ಟ್‌ರೆಂಡ್ ಆರ್ಥರ್ ವಿಲಿಯಮ್ ರಸೆಲ್ ಜನ್ಮ ತಾಳಿದ್ದು ೧೮೭೨ರ ಮೇ ೧೮ರಂದು. ಶ್ರೀಮಂತ ಲಾರ್ಡ್ಸ್ ಮನೆತನದಲ್ಲಿ ರಸೆಲ್ ಜನಿಸಿದ್ದರೂ ಇವರೆಂದೂ ಡಂಭಾಚಾರ ಪ್ರದರ್ಶಿಸಲಿಲ್ಲ. ಬಾಲ್ಯದಲ್ಲಿ ಅನಾಥ, ಅಜ್ಜಿ ಸಾಕಿದ ಮಗು. ಎಲ್ಲರಂತೆ ಶಾಲೆಗೆ ಹೋಗಲಿಲ್ಲ. ಮನೆಯಲ್ಲೇ ಪಾಠ-ಪ್ರವಚನ ಸಾಂಪ್ರದಾಯಿಕ ರೀತಿಯಲ್ಲಿ.

ಸದಾ ಏಕಾಂತದಲ್ಲಿ ಚಿಂತನೆ. ಪ್ರಾಯದಲ್ಲಿ ಇವರು ಈ ಸಾಂಪ್ರದಾಯಿಕ ಶಿಕ್ಷಣ ಮುಗಿಸಿ ನಂತರ ೧೮೯೦ರಲ್ಲಿ ಕೇಂಬ್ರಿಜ್‌ನ ಟ್ರಿನಿಟಿ ಕಾಲೇಜಿನಲ್ಲಿ ವ್ಯಾಸಂಗ ಆರಂಭಿಸಿದರು. ಸದಾ ವಿಚಾರಮಗ್ನರಾಗಿದ್ದು ಇತರೆ ಸಹಪಾಠಿಗಳಿಂದ ದೂರವಿದ್ದು, ಕಲಿತ ರಸೆಲ್‌ಗೆ ಗಣಿತ ಮತ್ತು ತತ್ವಜ್ಞಾನದಲ್ಲಿ ಆಳವಾದ ಆಸಕ್ತಿ, ಪಾಂಡಿತ್ಯವಿತ್ತು. ೧೮೯೫ರಲ್ಲಿ ಅವರು ಪ್ರಸಿದ್ಧ ಟ್ರಿನಿಟಿ ಕಾಲೇಜಿನ ಫೆಲೋ ಆಗಿ ಆಯ್ಕೆಗೊಂಡರು.

**ಕೃತಿ-ಪರಿಶ್ರಮ :** ಗಣಿತ ಶಾಸ್ತ್ರದಲ್ಲಿ ಇದ್ದಷ್ಟೇ ಕುತೂಹಲ, ಜ್ಞಾನ ಅವರಿಗೆ ಇತರ ವಿಷಯಗಳಲ್ಲೂ ಇತ್ತು. ಹಾಗೆಯೇ ರಾಜಕೀಯ, ರಾಜನೀತಿಯಲ್ಲೂ ಆಸಕ್ತಿ ಬೆಳೆಸಿಕೊಳ್ಳುತ್ತಾ ಹೋದರು. ಸಮಾಜ ವಾದವನ್ನು ಪ್ರತಿಪಾದಿಸುತ್ತಾ ಬೆಳೆದ ರಸೆಲ್ ಪ್ರಸಿದ್ಧ ಫೇಬಿಯನ್ ಸಂಘದ ಸದಸ್ಯರೂ ಆಗಿದ್ದರು. ಪ್ಯಾರಿಸ್ ನಗರದ ದೂತಾವಾಸದಲ್ಲಿ ಸ್ವಲ್ಪಕಾಲವಿದ್ದು ಗಣಿತ ಶಾಸ್ತ್ರದಲ್ಲಿ ಸಂಶೋಧನೆ ಮಾಡುತ್ತಾ **ಗಣಿತ ಶಾಸ್ತ್ರದ ತತ್ವಗಳು** ಎಂಬ ಕೃತಿಯನ್ನು ೧೯೦೩ರಲ್ಲಿ ಪ್ರಕಟಿಸಿದರು.

ಈ ಗ್ರಂಥ ರಸೆಲ್ಲರಿಗೆ ಗಣಿತ ಶಾಸ್ತ್ರದಲ್ಲಿರುವ ಅಪಾರ ಪಾಂಡಿತ್ಯಕ್ಕೆ ಸಾಕ್ಷಿಯಾಗಿ ನಿಂತಿದೆ. ೧೯೧೦ರಲ್ಲಿ ಅವರ ಸಮಕಾಲೀನ ಗಣಿತಜ್ಞರಾದ ಆಲ್‌ಫ್ರೆಡ್ ವೈಟ್‌ಹೆಡ್‌ರವರ ಜೊತೆಗೂಡಿ ಬರೆದ ಮತ್ತೊಂದು ಗಣಿತಕೃತಿ ಹೊರಬಂತು. ಈ ಕೃತಿಗಳು ರಸೆಲ್ಲರಿಗೆ ಅಂದಿನ ಸುಪ್ರಸಿದ್ಧ ಗಣಿತಜ್ಞ ಎಂಬ ಕೀರ್ತಿಯನ್ನು ತಂದವು.

**ಶಾಂತಿದೂತ :** ಗಣಿತವೂ ಸೇರಿದಂತೆ ಅವರು ಜೊತೆಯಲ್ಲೇ ಹಲವು ವಿವಿಧ ಶಾಸ್ತ್ರಗಳನ್ನು ಅಭ್ಯಸಿಸುತ್ತಾ ರಾಜಕೀಯದಲ್ಲೂ ಸಕ್ರಿಯವಾಗಿ ವ್ಯವಹರಿಸುವ ಸ್ಥಿತಿಗೆ ಬಂದರು. ೧೯೧೪-೧೮ರ ಪ್ರಥಮ ಜಾಗತಿಕ ಯುದ್ಧದ ಸಮಯದಲ್ಲಿ ಶಾಂತಿವಾದಿಯಾಗಿ ಯುದ್ಧದ ಪ್ರವೃತ್ತಿಯನ್ನು ಪ್ರಬಲವಾಗಿ ವಿರೋಧಿಸುತ್ತಾ ಕಡ್ಡಾಯವಾಗಿ ಸೈನ್ಯದಲ್ಲಿ ಭರ್ತಿಯಾಗಬೇಕೆಂಬ ಅಂದಿನ ಬ್ರಿಟನ್ನಿನ ನೀತಿಯನ್ನು ಪ್ರತಿಭಟಿಸಿದಾಗ ಸರ್ಕಾರದ ತೀವ್ರ ಕೋಪಕ್ಕೆ ಗುರಿಯಾಗಿ ಆರು ತಿಂಗಳು ಕಾರಾಗೃಹವಾಸ ಅನುಭವಿಸಬೇಕಾಗಿ ಬಂತು. ಬ್ರಿಟಿಷ್ ಸರಕಾರ ಅವರನ್ನು ದೇಶದ್ರೋಹಿ ಎಂದು ಹಣೆಪಟ್ಟಿ ಹಚ್ಚಿ ಅಧ್ಯಾಪಕ ಹುದ್ದೆಯಿಂದ ಹೊರದೂಡಿ ಅವರ ಖಾಸಗೀ ಗ್ರಂಥಾಲಯವನ್ನು ಮುಟ್ಟುಗೋಲು ಹಾಕಿಕೊಂಡು ನಾನಾ ಬಗೆಯ ಕಿರುಕುಳ ಕೊಡಲಾರಂಭಿಸಿತು. ಅವರ ಅಮೆರಿಕಾ ಯಾತ್ರೆಗೆ ತಡೆಯೊಡ್ಡಿ, ಅವರ ಚಲನ-ವಲನಗಳ ಮೇಲೆ ಹದ್ದಿನ ಕಣ್ಣಿಟ್ಟು ಅವರು ಬರೆದ ಒಂದು ದೀರ್ಘ ಯುದ್ಧ ವಿರೋಧಿ ಲೇಖನವನ್ನು ವಿರೋಧಿಸಿ ಸೆರೆಮನೆಗೆ ದಬ್ಬಲಾಯಿತು.

> *ಬ್ರಿಟನ್ನಿನಲ್ಲಿ ಅಣ್ವಸ್ತ್ರಗಳ ಶೇಖರಣೆ ಒಂದು ನೀತಿಯಾಗಿ ಅಂಗೀಕೃತವಾದಾಗ ಅದನ್ನು ಸಂಪೂರ್ಣವಾಗಿ ವಿರೋಧಿಸಿದ ರಸೆಲ್ ತಮ್ಮ ೮೯ನೆಯ ವಯಸ್ಸಿನಲ್ಲಿ ಪ್ರತಿಭಟನೆಯಲ್ಲಿ ಪಾಲ್ಗೊಂಡರು. ಆರು ದಶಕಗಳಿಗೂ ಮೀರಿ ಲೇಬರ್ ಪಕ್ಷದ ಸದಸ್ಯರಾಗಿದ್ದ ಅವರು ತಮ್ಮ ಸದಸ್ಯತ್ವವನ್ನು ಹಿಂತೆಗೆದುಕೊಂಡರು. ವಸಾಹತುಶಾಹಿಯ ವಿರೋಧಿಯಾಗಿದ್ದ ರಸೆಲ್‌ಗೆ ವಸಾಹತುಗಳಲ್ಲಿ ನಡೆಯುತ್ತಿದ್ದ ಲೂಟಿ, ದೌರ್ಜನ್ಯಗಳಿಗಿಂತಲೂ ಹೊಸದಾಗಿ ಅಸ್ತಿತ್ವಕ್ಕೆ ಬಂದಿದ್ದ ಸಮಾಜವಾದಿ ಸೋವಿಯೆತ್ ಒಕ್ಕೂಟದಲ್ಲಿ ನಡೆಯುತ್ತಿದ್ದಿತೆನ್ನಲಾದ ಸ್ವಾತಂತ್ರ್ಯ ಅಪಹರಣವು ಘೋರವಾಗಿ ಕಂಡವು. ಸೈದ್ಧಾಂತಿಕವಾಗಿ ಸಮಾಜವಾದಕ್ಕೆ ಬದ್ಧರಾಗಿದ್ದ ರಸೆಲ್ ಒಂದು ಇಡೀ ಶತಮಾನದ ಬೌದ್ಧಿಕ ಜೀವನಕ್ಕೆ ಮಹಾನ್ ಸಂಕೇತ. ಬಹುಮುಖ ಪ್ರತಿಭೆಗೆ ಇನ್ನೊಂದು ಹೆಸರು.*
>
> *''ಪ್ರೇಮದ ಅಪೇಕ್ಷೆ, ಜ್ಞಾನದ ಸತತ ಅನ್ವೇಷಣೆ, ಬವಣೆಪಡುವ ಜನರ ಬಗ್ಗೆ ಅತೀವ ಅನುಕಂಪ - ಈ ಮೂರೂ ಭಾವನೆಗಳು ನೋಡಲು ಸರಳವೆನಿಸಿದರೂ, ಪ್ರಬಲವಾಗಿ ನನ್ನ ಜೀವನದ ಗತಿಯನ್ನು ನಿಯಂತ್ರಿಸಿವೆ.'' **–ರಸೆಲ್.***

ಯುದ್ಧ ನಿಂತ ನಂತರ ರಸೆಲ್ ಚೀನಾ ರಷ್ಯಾಗಳಿಗೆ ಭೇಟಿಯಿತ್ತು ಅಧ್ಯಯನಾಕಾಂಕ್ಷಿಯಾಗಿ ಅಲ್ಲಿನ ವಿಶ್ವವಿದ್ಯಾನಿಲಯಗಳಲ್ಲಿ ಬೋಧನೆ ಉಪನ್ಯಾಸ ಮಾಡಿದರು. ಅದೇ ಹೊತ್ತಿನಲ್ಲಿ ಲೆನಿನ್ ಬಗ್ಗೆ ಭ್ರಮನಿರಸನಗೊಂಡರು. **ಬೊಲ್ಷೆವಿಸಮ್‌ನ ತತ್ತ್ವ-ಅನುಸರಣೆ** ಎಂಬ ಅವರ (೧೯೨೦)ಕೃತಿ ಕಮ್ಯುನಿಸ್ಟರ ಕಾರ್ಯವಿಧಾನವನ್ನು ತೀವ್ರವಾಗಿ ಟೀಕಿಸಿದ, ಖಂಡಿಸಿ ಬರೆದ ಗ್ರಂಥ. ರಸೆಲ್‌ರ ವಿರೋಧಾಭಾಸಗಳಲ್ಲಿ ಇದೊಂದು.

ಇಂಗ್ಲೆಂಡಿಗೆ ಮತ್ತೆ ಹಿಂತಿರುಗಿ ಲಂಡನ್ ವಿಶ್ವವಿದ್ಯಾಲಯದಲ್ಲಿ ಬೋಧಿಸುತ್ತಾ ನಂತರದ ಜೀವನವನ್ನು ಸದಾ ತತ್ವ ಚಿಂತನೆ, ಉಪನ್ಯಾಸ ಮತ್ತು ಗಂಭೀರ ಬರವಣಿಗೆಯಲ್ಲಿ ಕಳೆದರು. ನಿಗೂಢ ವ್ಯಕ್ತಿತ್ವದ ಜ್ಞಾನಿ ಎಂದು ಹೆಸರಾದರು.

**ಶಿಕ್ಷಣ ತಜ್ಞ :** ಶಿಕ್ಷಣದಲ್ಲಿ ಕ್ರಾಂತಿಕಾರಿ ಬದಲಾವಣೆ ಅಗತ್ಯವೆಂದು ಅವರು ಭಾವಿಸಿದ್ದರು. ಆಗ ಇಂಗ್ಲೆಂಡಿನ ಶಿಕ್ಷಣ ಪದ್ಧತಿ ಕ್ರೈಸ್ತಧರ್ಮದ ಬಿಗಿಮುಷ್ಟಿಯಲ್ಲಿದ್ದು ವಿಜ್ಞಾನ ವಿರೋಧಿಯಾಗಿತ್ತು. ೧೯೨೭-೩೨ರಲ್ಲಿ ಅವರು ತಮ್ಮ ಪತ್ನಿಯೊಡಗೂಡಿ ಕ್ರಾಂತಿಕಾರಿ ಪ್ರಯೋಗಗಳನ್ನು ಮಾಡುವ ಉದ್ದೇಶದಿಂದ ತಮ್ಮದೇ ಶಾಲೆಯನ್ನು ಆರಂಭಿಸಿದರು. ಅವರ ಶಾಲೆಯಲ್ಲಿ ಶಿಕ್ಷಣ ಪದ್ಧತಿ ಮಕ್ಕಳಿಗೆ ಪೂರ್ಣ ವಿಚಾರ ಸ್ವಾತಂತ್ರ್ಯವನ್ನು ಕೊಡುವುದಾಗಿತ್ತು. ಶಿಕ್ಷಣ ಕ್ರಮ ಹೇಗಿರಬೇಕು, ಅದು ಬುದ್ಧಿಯನ್ನು ಹೇಗೆ ಪ್ರಚೋದಿಸಬೇಕು ಎಂಬುದನ್ನು ಕುರಿತು ಅವರು ಒಂದು ಗ್ರಂಥವನ್ನು ಬರೆದರು. ಈ ಗ್ರಂಥ ಜಗತ್ತಿನ ಹಲವಾರು ಚಿಂತನಶೀಲರನ್ನು ಆಕರ್ಷಿಸಿತು. ಆದರೆ ಅವರ ಈ ವಿಶಿಷ್ಟ ಪ್ರಯೋಗಗಳು ಫಲಕಾರಿಯಾಗಲಿಲ್ಲ. ಆದರೂ ರಸೆಲ್ಲರು ಧೃತಿಗೆಡದೆ ಈ ಸಮಯದಲ್ಲಿ ವಿಚಾರ ಪ್ರಚೋದಕವಾದ ಹಲವಾರು ಬೃಹತ್ ಗ್ರಂಥಗಳನ್ನು ಬರೆದರು. ಇವೆಲ್ಲ ವಿಶ್ವದಾದ್ಯಂತ ವಿದ್ವಜ್ಜನರಿಂದ ಚರ್ಚೆ ಪ್ರಚೋದಿಸಿದವು.

**ನಾಸ್ತಿಕವಾದ :** ಈ ಮಧ್ಯೆ ರಸೆಲ್ಲರು ವಿಜ್ಞಾನ, ದೇವರು, ಧರ್ಮ, ನಂಬಿಕೆ, ಅಂಧಶ್ರದ್ಧೆ ಭೌತವಾದ,

ಲೌಕಿಕ, ಭೌತಿಕ, ತಾರ್ಕಿಕ ಹಾಗೂ ಆಧ್ಯಾತ್ಮಿಕ ವಿಷಯಗಳ ಬಗ್ಗೆ ಹಲವಾರು ಗ್ರಂಥಗಳನ್ನು ರಚಿಸಿ, ಉಪನ್ಯಾಸ ಪ್ರವಾಸವನ್ನಾರಂಭಿಸಿದರು. ಮಾನವರ ನಂಬಿಕೆ, ವಿಚಾರಗಳಿಗೆ ಹೊಸ ಹೊಸ ಅರ್ಥವನ್ನು, ವಿಶ್ಲೇಷಣೆಯನ್ನು ಕೊಡುವ ಈ ಗ್ರಂಥಗಳು ವಿಚಾರ ಪ್ರಚೋದನೆಗೆ ಎಡೆ ಮಾಡಿಕೊಡುತ್ತಾ ಸಂಪ್ರದಾಯ ವಾದಿಗಳ ಭಾವನೆಗಳಿಗೆ ಸವಾಲು ಒಡ್ಡುತ್ತಿದ್ದುವು.

೧೯೩೯-೪೫ರ ದ್ವಿತೀಯ ವಿಶ್ವಸಮರದ ಸಮಯದಲ್ಲಿ ಅವರು ಯುದ್ಧವನ್ನು ವಿರೋಧಿಸುತ್ತಲೇ ಅಮೆರಿಕಾ ಪ್ರವಾಸ ಕೈಗೊಂಡರು. ವಿನಾಶಕಾರಿ ಯುದ್ಧದ ವಾತಾವರಣ, ತಳಮಳಗೊಂಡ ದಾಂಪತ್ಯ ಜೀವನದಿಂದ ರಸೆಲ್ ನೊಂದರು. ಅಮೆರಿಕಾದಲ್ಲಿ ಅವರು ಬರೆದ **ವಿವಾಹ ಮತ್ತು ನೈತಿಕತೆ** ಎಂಬ ಪುಸ್ತಕ ಭಾರಿ ಬಿರುಗಾಳಿಯನ್ನೆಬ್ಬಿಸಿತು. ಸಂಪ್ರದಾಯ ವಾದಿಗಳು ಕ್ರೈಸ್ತಧರ್ಮದ ನಂಬಿಕೆಗಳಿಗೆ ವಿರುದ್ಧ ವೆನ್ನಲಾಗಿದ್ದ ಲೈಂಗಿಕ ನೀತಿಯ ವಿಚಾರಗಳನ್ನು ನ್ಯಾಯಾಲಯಕ್ಕೆ ಕೊಂಡೊಯ್ದರು. ಅವರು ಒಬ್ಬ ಸಮಾಜ ವಿರೋಧಿಯೆಂದೂ, ಧರ್ಮನಿಂದಕರೆಂದೂ ವಾದಿಸಲಾಯಿತು. ನ್ಯಾಯಾಲಯವೂ, ದುರದೃಷ್ಟ ವಶಾತ್ ಅವರನ್ನು ನಿಂದಿಸಿದ್ದರಿಂದ ರಸೆಲ್ ತಮ್ಮ ಉಪನ್ಯಾಸಕ ಹುದ್ದೆಯನ್ನು ಕಳೆದುಕೊಳ್ಳಬೇಕಾಯಿತು. ಆದರೂ ಅವರು ಹಿಂಜರಿಯದೆ ತಮ್ಮ ವೈಚಾರಿಕ ಜೀವನ ಹಾಗೂ ಬರವಣಿಗೆಯನ್ನು ಮುಂದುವರೆಸಿದರು.

**ನೊಬೆಲ್ ಪ್ರಶಸ್ತಿ ವಿಜೇತ** : ಅವರು ಬರೆದ 'ಪಾಶ್ಚಿಮಾತ್ಯ ತತ್ತ್ವಜ್ಞಾನದ ಇತಿಹಾಸ' ಎಂಬ ಬೃಹತ್ ಗ್ರಂಥಕ್ಕೆ ನೊಬೆಲ್ ಪ್ರಶಸ್ತಿಯನ್ನು ನೀಡಿ ರಸೆಲ್‌ರನ್ನು ಗೌರವಿಸಲಾಯಿತು. ಅನಂತರ ಅವರು ರಾಯಲ್ ಸೊಸೈಟಿಯ ಫೆಲೋ ಆದರು. ಜೊತೆಗೆ ಆರ್ಡರ್ ಆಫ್ ಮೆರಿಟ್‌ಅನ್ನು ಪಡೆದರು. ಹೀಗೆ ಮೂರು ಉನ್ನತ ಪ್ರಶಸ್ತಿ ಪಡೆದ ರಸೆಲ್ ಒಬ್ಬ ಅಪರೂಪದ ಚಿಂತಕರೆನಿಸಿದ್ದಾರೆ.

ಇವರ ಅಭಿಪ್ರಾಯಗಳಲ್ಲಿ ಸ್ವಲ್ಪವೂ ಭಯ, ಗೊಂದಲ ಕಾಣುವುದಿಲ್ಲ. ಪ್ರಬುದ್ಧ ಭಾಷೆಯ ಬಳಕೆ ಅವರನ್ನು ಒಬ್ಬ ಶ್ರೇಷ್ಠ ಲೇಖಕನನ್ನಾಗಿಸಿದೆ. **ಸುಖಸಾಧನೆ** ಎಂಬ ಅವರ ಗ್ರಂಥ ಒಂದು ಅಮೂಲ್ಯವಾದ ವಿವೇಕ ಚೂಡಾಮಣಿ ಎನ್ನಬಹುದು. ಸಾಮಾನ್ಯ ಮನುಷ್ಯ ಹೇಗೆ ಸುಖಿಯಾಗಬಹುದು ಎಂಬುದನ್ನು ವಿಚಾರಪೂರಿತವಾಗಿ ಅವರು ಈ ಪುಸ್ತಕದಲ್ಲಿ ವಿವರಿಸಿ ಬರೆದಿದ್ದಾರೆ. ಪ್ರತಿಯೊಬ್ಬರೂ ತಪ್ಪದೆ ಓದಲೇಬೇಕಾದ ಪುಸ್ತಕ ಇದು. ೧೯೭೦ರ ಫೆಬ್ರವರಿ ೧೪ರಂದು 'ಹಾಂಕಾಂಗ್' ಜ್ವರಕ್ಕೆ ತುತ್ತಾಗಿ ರಸೆಲ್ ತಮ್ಮ ೧೦೦ನೆಯ ವಯಸ್ಸಿನಲ್ಲಿ ಕಾಲವಾದರು.



*ಕಲಾವಿದ ಆರ್‌ಎಸ್ ಎನ್ ರಚಿಸಿದ ರೇಖಾಚಿತ್ರ*

**ವಿಚಾರ ಧಾರೆ** : ಬರ್ಟ್‌ರೆಂಡ್ ರಸೆಲ್ ಹಲವು ವ್ಯಕ್ತಿತ್ವಗಳ ಒಂದು ಅಪೂರ್ವ ಸಂಗಮ. ಮಹಾನ್ ಸಾಧನೆಯ ಮಾನವತಾವಾದಿ. ವೈಜ್ಞಾನಿಕ ಚಿಂತನೆ ಯಿಂದಲೇ ಮಾನವನ ಸಕಲ ಸಮಸ್ಯೆಗಳಿಗೆ ಸಮರ್ಪಕ ಉತ್ತರ ದೊರಕಿಸಿಕೊಳ್ಳಬಹುದೆಂದು ಅವರ ಅಚಲವಾದ ನಂಬಿಕೆ. ಇದನ್ನವರು ತಮ್ಮ 'ಸಮಾಜದ ಮೇಲೆ ವಿಜ್ಞಾನದ ಪ್ರಭಾವ' ಎಂಬ ಗ್ರಂಥದಲ್ಲಿ ವಿವರವಾಗಿ ಬರೆದಿದ್ದಾರೆ. ಇದೆಲ್ಲವನ್ನು ತಿಳಿಸುವಾಗ ಅವರು ತೋರುವ ಬೌದ್ಧಿಕ ಪ್ರಾಮಾಣಿಕತೆ ಅವರ ಅಮೂಲ್ಯವಾದ ಹಿರಿಯ ಗುಣ. ಒಂದು ಉಪನ್ಯಾಸದಲ್ಲಿ ''ನೀವು ನಿಮ್ಮ ಅಭಿಪ್ರಾಯಗಳನ್ನು ಗಂಭೀರವಾಗಿ ಪರಿಗಣಿಸುತ್ತೀರಾ'' ಎಂಬ ಪ್ರಶ್ನೆಗೆ ಉತ್ತರಿಸುತ್ತಾ ''ಇಲ್ಲ, ನಾನು ಎಂದೂ ನನ್ನ ಅಭಿಪ್ರಾಯವೇ ಅಂತಿಮ ಸತ್ಯವೆಂದು ಗಂಭೀರವಾಗಿ ಹೇಳುವುದಿಲ್ಲ. ಆದರೆ ನಾನು ನನ್ನ ವಾದವನ್ನು ಮಂಡಿಸುವಾಗ, ಪ್ರಾಮಾಣಿಕತೆಯಿಂದ, ಸ್ಪಷ್ಟವಾಗಿ ತಿಳಿಸುತ್ತೇನೆ'' ಎಂದರಂತೆ. ಹಾಗೇ, ''ಮತ್ತೊಬ್ಬರು ನನ್ನ ಅಭಿಪ್ರಾಯವನ್ನು ಸರಿಯಲ್ಲವೆಂದು ವೈಜ್ಞಾನಿಕ ಆಧಾರಗಳೊಡನೆ ಪ್ರಾಮಾಣೀಕರಿಸಿದರೆ ನನ್ನ ಅಭಿಪ್ರಾಯವನ್ನು ಬದಲಿಸಲು ಸದಾ ಸಿದ್ಧ'' ಎಂದಿದ್ದಾರೆ.

ವಿಜ್ಞಾನದ ಪರಿಮಿತಿಯೊಳಗಿನ ವಿಚಾರಧಾರೆಯ ಬಗ್ಗೆ ಅವರು ಮೂರು ಮೂಲ ನಿಯಮಗಳನ್ನು ಪ್ರತಿಪಾದಿಸಿದ್ದಾರೆ.

೧. ನಮ್ಮ ಅಭಿಪ್ರಾಯಗಳನ್ನು ವೈಜ್ಞಾನಿಕ ಸಾಕ್ಷ್ಯಾಧಾರಗಳೊಡನೆ ವಿಶ್ಲೇಷಣೆಗಳ ಸಹಿತ ಮಂಡಿಸಬೇಕು.

೨. ಈ ಭೌತಿಕ ಜಗತ್ತು ಒಂದು ಬದಲಿಸಲಾಗದ ಸ್ವಯಂಪ್ರೇರಿತ, ಸ್ವಯಂಚಾಲಿತ ವಿಶ್ವನಿಯಮಗಳ ಪರಿಪೂರ್ಣ ವ್ಯವಸ್ಥೆ (ಪೂಜೆ, ಪ್ರಾರ್ಥನೆಗಳು ನಿಷ್ಪ್ರಯೋಜಕ).

೩. ಭೂಮಿಯ ಸೃಷ್ಟಿ ವಿಶ್ವದಲ್ಲಿನ ಮೂಲ ಉದ್ದೇಶವಲ್ಲ. ಉದ್ದೇಶವೆಂಬ ಕಲ್ಪನೆಯೇ ಅರ್ಥ ವಿಹೀನವಾದದ್ದು, ಅವೈಜ್ಞಾನಿಕವಾದದ್ದು. ಭೂಮಿ ಬರೇ ಮಾನವನಿಗಾಗಿ ಅಲ್ಲ.

ರಸೆಲ್ ನಿರೀಶ್ವರವಾದಿಯಾದರೂ, ಮಾನವೀಯ ಮೌಲ್ಯಗಳು ವೈಜ್ಞಾನಿಕ ಪರಿಧಿಯೊಳಗೆ ಬರಬಾರದು ಎಂದು ಹೇಳುತ್ತಾರೆ. ನಾಸ್ತಿಕವಾದವೆಂದರೆ ಮಾನವೀಯ ಗುಣಗಳ ತಿರಸ್ಕಾರ ಎಂದು ಆಪಾದಿಸುವ ಆಸ್ತಿಕರ ಅನಿಸಿಕೆಗೆ ಇದು ವಿರುದ್ಧವಾಗಿದೆ. ಶಾಂತಿದೂತನಾಗಿ ಅವರು ಸತತವಾಗಿ ಯುದ್ಧದ ವಿರುದ್ಧ ಹೋರಾಟ ಮಾಡುತ್ತಾ ಅಣ್ವಸ್ತ್ರ, ಶೀತಲ ಯುದ್ಧದ ಬಗ್ಗೆಯೂ ಪದೇ ಪದೇ ತೀವ್ರ ಅಸಮಾಧಾನ, ವಿರೋಧವನ್ನು ವ್ಯಕ್ತಪಡಿಸುತ್ತಿದ್ದರು. ಇದು ಅವರ ಅನುಪಮ ಚಿಂತನೆಗೆ ಕಿರೀಟ ಪ್ರಾಯವಾಗಿತ್ತು. ರಸೆಲ್ ಅಣ್ವಸ್ತ್ರದ ದುರ್ಬಳಕೆಯ ಬಗ್ಗೆ ವಿಶ್ವಸಂಸ್ಥೆಗೆ ವಿಶೇಷವಾದ, ದೀರ್ಘವಾದ ಮನವಿಯನ್ನು ಸಲ್ಲಿಸಿದ್ದರು. ಈ ಮನವಿಗೆ ಸುಮಾರು ಒಂಬತ್ತು ಸಾವಿರ ವಿಜ್ಞಾನಿಗಳ ಅನುಮೋದನೆ ಹಾಗೂ ಸಹಿ ಇತ್ತು. ಮುಂದುವರಿದ ರಾಷ್ಟ್ರಗಳು ಪ್ರತಿಬಾರಿ ಅಣ್ವಸ್ತ್ರ ಪರೀಕ್ಷೆಗಳನ್ನು ನಡೆಸಿದಾಗಲೂ ರಸೆಲ್ ಪ್ರತಿಭಟಿಸುತ್ತಲೇ ಇದ್ದರು. ಅಣ್ವಸ್ತ್ರದ ಅಪಾಯದ ಬಗ್ಗೆ ಅವರು ತಮ್ಮ 'ಮಾನವನಿಗೆ ಭವಿಷ್ಯವಿದೆಯೇ' ಎಂಬ ಗ್ರಂಥದಲ್ಲಿ ವಿವರವಾಗಿ ಚರ್ಚಿಸಿದ್ದಾರೆ. ಅಣ್ವಸ್ತ್ರಗಳ ಅಪರಿಮಿತ ಶಕ್ತಿ ಹಾಗೂ ಅದರ ರಾಜಕೀಯ ದುರ್ಬಳಕೆ ಬಗ್ಗೆ ತಿಳಿಯಬೇಕಾದಲ್ಲಿ ರಸೆಲ್ಲರ ಈ ಪುಸ್ತಕವನ್ನು ಪ್ರತಿಯೊಬ್ಬ ವಿಚಾರವಂತನೂ ಓದಬೇಕು. ಮಾನವ ಜನಾಂಗ ಅಣ್ವಸ್ತ್ರದಿಂದ ಹೇಗೆ ಸ್ವಯಂನಾಶವಾಗುತ್ತದೆ ಎಂಬ ವಿವರಣೆ ಇದರಲ್ಲಿದೆ.

ಬರ್ಟ್‌ರೆಂಡ್ ರಸೆಲ್‌ರಿಂದ ಬರುವ ಸೈದ್ಧಾಂತಿಕ ಸಂದೇಶದ ಸಾರಂಶ ಇಷ್ಟು: ಧರ್ಮ, ದೇವರು ಬರೀ ನಂಬಿಕೆಗಳಾಗಬಾರದು. ಮೌಲ್ಯಗಳು ಜೀವನವನ್ನು ಸುಖಮಯವನ್ನಾಗಿಸಬೇಕು, ಸದುದ್ದೇಶದ ಸಾರ್ಥಕ ಜೀವನಕ್ಕೆ ದಾರಿ ದೀಪಗಳಾಗಬೇಕು. ವಿಚಾರ ವಾದದಿಂದ ನಿರ್ಧರಿಸಿದ ನಿರ್ಣಯಗಳು ಎಂದೂ ನಮ್ಮನ್ನು ತಪ್ಪುದಾರಿಗೆ ಎಳೆಯುವುದಿಲ್ಲ. ಜ್ಞಾನವು ಒಂದು ಅದ್ಭುತ ಶಕ್ತಿ. ಅದರಿಂದ ಲಾಭದಷ್ಟೇ ನಷ್ಟವೂ ಇದೆ- ಅದರ ದುರ್ಬಳಕೆಯಿಂದ. ಹಾಗಾಗಿ ಜ್ಞಾನದ ಜೊತೆಗೆ ವಿವೇಕವೂ ಬೆಳೆದರೆ ಕ್ಷೇಮ, ಸಂತೋಷವಿದೆ.

ಎ. ಶ್ರೀನಿವಾಸಮೂರ್ತಿ
ಎ-೨೭, ಸಿ.ಐ.ಎಲ್. ಬಡಾವಣೆ, ಸಂಜಯನಗರ, ಬೆಂಗಳೂರು-೯೪

**ಕವಲುಗಳು**

*ಮನಸ್ಸು ಮತ್ತು ಮನುಷ್ಯ*
*ಒಂದಾಗಿ ಹೋಗುವುದಿಲ್ಲ*
*ಹಾಗಿಲ್ಲದಿದ್ದಲ್ಲಿ, ಎಂದೆಂದಿಗೂ*
*ದಾರಿಗೆ ಕವಲುಗಳೇ ಇರುತ್ತಿರಲಿಲ್ಲ.*

**- ಹಾಲಾಡಿ ಮಾರುತಿರಾವ್**

# ಕೃಷಿಗಿರುವ ಘೋರ ಕುತ್ತುಗಳು

ಭಾರತ ದೇಶದ ಜನಸಂಖ್ಯೆಯು ಬೆಳೆಯುತ್ತಲೇ ಇದೆ. ನಲ್ವತ್ತರ ದಶಕದಲ್ಲಿದ್ದ ಮೂವತ್ತಮೂರು ಕೋಟಿ ಜನಸಂಖ್ಯೆಯು ಈಗ ಎಂಬತ್ತು ಕೋಟಿಗಿಂತಲೂ ಹೆಚ್ಚಾಗಿದೆ. ಈ ಬೆಳೆಯುತ್ತಿರುವ ಜನಸಂಖ್ಯೆಗೆ ಆಹಾರೋತ್ಪತ್ತಿ ಹೆಚ್ಚಾಗಲೇಬೇಕಾಗಿದೆ. ಆದರೆ ಆಹಾರೋತ್ಪತ್ತಿ ಮಾಡುವ ಭೂಮಿಯನ್ನು ಹೆಚ್ಚು ಮಾಡುವುದು ಸಾಧ್ಯವಿಲ್ಲ. ಇತ್ತೀಚಿನ ದಿನಗಳಲ್ಲಿ ನಗರ-ಪಟ್ಟಣಗಳ ಬೆಳವಣಿಗೆ ಹೆಚ್ಚಾಗುತ್ತಿದ್ದು, ಸುತ್ತಮುತ್ತಲಿದ್ದ ಕೃಷಿ ಭೂಮಿಯು ಕೃಷಿಯೇತರ ಜಮೀನುಗಳಾಗಿ ಮಾರ್ಪಾಡಾಗಹತ್ತಿವೆ. ಈ ಹಿಂದಿನ ಒಂದು ದಶಕದಲ್ಲಿ ಇದು ಎಷ್ಟಾಗಿದೆ ಎಂಬುದು ನಿಗೂಢವಾಗಿಯೇ ಉಳಿದಿದೆ. ಸರಕಾರದವರು ಕೂಡ ಈ ಗುಟ್ಟನ್ನು ಹೊರಗೆಡಹಿಲ್ಲ. ಎಷ್ಟೋ ಸಾವಿರ ಹೆಕ್ಟೇರ್ ಜಮೀನು ಕೃಷಿಯೇತರ ಜಮೀನುಗಳಾಗಿ ಪರಿವರ್ತನೆಗೊಂಡು ಕೃಷಿ ಸಾಗುವಳಿ ಮಾಡುವ ಜಮೀನು ಕಡಿಮೆಯಾಗಹತ್ತಿದೆ. ಕೃಷಿ ಉತ್ಪತ್ತಿ ಕಡಿಮೆಯಾಗುತ್ತಿರುವುದಕ್ಕೆ ಇದೂ ಒಂದು ಕಾರಣವೆಂದು ಹೇಳಬಹುದು.

ಕೃಷಿ ವಿಜ್ಞಾನಿಗಳು, ಆಡಳಿತಗಾರರು, ರಾಜಕಾರಣಿಗಳು, ಬುದ್ಧಿಜೀವಿಗಳು, ಕೃಷಿ ಉತ್ಪತ್ತಿ ಹೆಚ್ಚಾಗಲೇಬೇಕೆಂದು ಭಾಷಣ ಮಾಡುತ್ತಾ ಬಂದಿದ್ದಾರೆ. ಇದೊಂದು ದ್ವಂದ್ವ. ಕೃಷಿಭೂಮಿಯನ್ನು ಕೃಷಿಯೇತರ ಭೂಮಿಯನ್ನಾಗಿ ಮಾಡುವುದನ್ನು ಕೈಬಿಡದೆ ಉತ್ಪಾದನೆಯ ಘೋಷಣೆ ಸಮಂಜಸವೇ ?

ಈಗ ರೈತರು ಎದುರಿಸಬೇಕಾಗಿರುವ ದೊಡ್ಡ ಕುತ್ತು ಯಾವುದೆಂದರೆ ರೈತನು ಉತ್ಪಾದಿಸುವ ಮಾಲಿಗೆ ಬೆಲೆ ಕಟ್ಟುವವರು ಯಾರು ಎಂಬುದರಲ್ಲಿದೆ. ರೈತನು ಕೃಷಿ ಉತ್ಪತ್ತಿ ಮಾಡುವಾಗ ಅನೇಕ ಕಷ್ಟ-ನಷ್ಟಗಳನ್ನು ಎದುರಿಸಬೇಕಾಗುತ್ತದೆ. ಅಕಾಲಿಕ ಹಾಗೂ ಅಲ್ಪಮಳೆ (ಅನಾವೃಷ್ಟಿ) ಮತ್ತು ಅತಿವೃಷ್ಟಿ, ಬೆಂಕಿ, ಬಿರುಗಾಳಿ, ಪ್ರಾಣಿ- ಪಕ್ಷಿ ಪಿಡುಗು, ಸಸ್ಯ ರೋಗಾದಿಗಳು, ಕಸ-ಕಳೆ ಮುಂತಾದವುಗಳಿಂದ ಕೃಷಿ ಉತ್ಪತ್ತಿಗೆ ಒದಗುವ ಹಾನಿ ಅಪಾರ. ಕಳೆದೆರಡು ವರ್ಷಗಳಲ್ಲಿ ರೊಕ್ಕದ ಬೆಳೆ ಮತ್ತು ಆಹಾರದ ಬೆಳೆಗಳಾದ ಹತ್ತಿ, ತೊಗರಿ ಮುಂತಾದ ಬೆಳೆಗಳಿಗೆ ಸಸ್ಯ-ಕೀಟ ಪಿಡುಗುಗಳಿಂದ ಆದ ಹಾನಿಯನ್ನು ತಾಳಲಾರದೆ ರೈತರು ಆತ್ಮಹತ್ಯೆ ಮಾಡಿಕೊಂಡ ಅನೇಕ ಉದಾಹರಣೆಗಳೂ ಉಂಟು. ಕೃಷಿ ಉತ್ಪತ್ತಿ ನಾಶಕ್ಕೆ ಮೂಷಕ ಪಿಡುಗುಗಳಾದ ಹೆಗ್ಗಣ, ಇಲಿಗಳಿಂದ ಆಗುವ ನಷ್ಟವೂ ಬಹಳ. ರೈತನು ಹಾಗೂ ಅವನ ಹೆಂಡತಿ-ಮಕ್ಕಳು ಭೂಮಿಯಲ್ಲಿ ಸತತ ದುಡಿದು ಬೆವರು ಸುರಿಸಿ ದುಡಿಯುತ್ತಾ ಬಂದರೂ ಕೆಲವು ಬಾರಿ ನಿರೀಕ್ಷಿಸಿದಷ್ಟು ಬೆಳೆ ಬರುವುದಿಲ್ಲ. ಉತ್ಪತ್ತಿಯು ಹೆಚ್ಚಾಗಿ ಬಂದರೂ ಅದಕ್ಕೆ ಯೋಗ್ಯ ಬೆಲೆ ಸಿಗುತ್ತಿಲ್ಲ. ಇದು ಎಲ್ಲರ ಅನುಭವಕ್ಕೆ ಬಂದಿದೆ. ಉದಾಹರಣೆಗೆ, ಬೆಂಡೆ, ಬದನೆ, ಈರುಳ್ಳಿ, ಆಲೂಗಡ್ಡೆ, ಟೊಮೆಟೋ ಮುಂತಾದವುಗಳ ಬೆಲೆ ನೆಲಮಟ್ಟಕ್ಕೆ ಕುಸಿಯುವುದನ್ನು ಕಂಡಿದ್ದೇವೆ. ಕೆಲವು ವೇಳೆ ಪೇಟೆಯಲ್ಲಿ ಈ ಮಾಲುಗಳಿಗೆ ಬೆಲೆ ಹೆಚ್ಚಾಗಿದ್ದರೂ ರೈತನಿಗೆ ಪೇಟೆಯ ಬೆಲೆಯ ಮೂರನೆಯ ಒಂದು ಭಾಗವೂ ಸಿಗುವುದಿಲ್ಲ. ತತ್ಪರಿಣಾಮವಾಗಿ ಬೆಳೆಗಾರನಿಗೂ ಲಾಭವಿಲ್ಲ, ಬಳಕೆದಾರರಿಗೂ ಲಾಭವಿಲ್ಲ. ಈ ವಿಷಯವನ್ನು ಕೃಷಿ ಮಾರುಕಟ್ಟೆಯ ತಜ್ಞರು, ಕೃಷಿ ಉತ್ಪತ್ತಿ ಮಾರುಕಟ್ಟೆಗಳು ದೀರ್ಘಾಲೋಚನೆ ಮಾಡುವ ಕಾಲ ಬಂದೊದಗಿದೆ.

ಔದ್ಯೋಗಿಕ ರಂಗದಲ್ಲಿ, ಔಷಧಿ ತಯಾರಿ ಮಾಡುವುದನ್ನು ಮೊದಲುಹಿಡಿದು, ತಾವು ಉತ್ಪಾದಿಸಿದ ಮಾಲಿಗೆ ಸಂಘ-ಸಂಸ್ಥೆಗಳನ್ನು ಕಟ್ಟಿ ತನ್ಮೂಲಕ ತಾವು ಉತ್ಪಾದಿಸಿದ ಮಾಲಿಗೆ ಬೆಲೆ ಕಟ್ಟುವ ಅಧಿಕಾರವನ್ನು ಇಟ್ಟುಕೊಂಡಿದ್ದಾರೆ. ಇಷ್ಟೇ ಏಕೆ ? ಹೋಟೆಲ್‌ಗಳಲ್ಲಿಯೂ ಕೂಡ ಊಟ-ತಿಂಡಿ-ತಿನಿಸು ಮಾರುವ ಹೋಟೆಲ್ ಮಾಲೀಕರೂ ಕೂಡ ಸಂಘ ಸಂಸ್ಥೆಗಳನ್ನು ಕಟ್ಟಿಕೊಂಡು ತಾವು ಉತ್ಪಾದಿಸಿದ ಮಾಲಿಗೆ ತಮ್ಮದೇ ಆದ ಬೆಲೆಕಟ್ಟುವ ಅಧಿಕಾರವನ್ನಿಟ್ಟುಕೊಂಡಿದ್ದಾರೆ. ಎಲ್ಲರೂ ಹೇಳುವುದು ನಮ್ಮ ನಾಡು ಕೃಷಿನಾಡು, ನಮ್ಮ ನಾಡಿನ ಜನಸಂಖ್ಯೆಯಲ್ಲಿ ಶತ ಎಪ್ಪತ್ತರವರೆಗೆ ಕೃಷಿಯನ್ನೇ ಅವಲಂಬಿಸಿದ್ದಾರೆ ಎಂದು. ಆದರೆ ಕೃಷಿಯನ್ನು ಅವಲಂಬಿಸಿದ ಜನಸಂಖ್ಯೆಯ ಪಾಡೇನು ? ರೈತನು ಉತ್ಪಾದಿಸಿದ ಮಾಲಿಗೆ ಯೋಗ್ಯಬೆಲೆ ದೊರಕಿಸುವುದೊಂದೇ ಉಪಾಯವೆಂದು ಯಾರಿಗೂ ತಿಳಿದಿಲ್ಲವೇ ? ಅಥವಾ, ತಿಳಿದೂ ಅಸಡ್ಡೆಯೇ ?

ಇನ್ನು ಎರಡನೆಯ ಕುತ್ತೆಂದರೆ ಕೃಷಿ ಕಾರ್ಮಿಕರ ಕೊರತೆ. ದೊಡ್ಡ ಪ್ರಗತಿಪರ ರೈತರು ಕೃಷಿ ಕಾರ್ಮಿಕರ ಕೊರತೆಯುಂಟಾಗಿ ವ್ಯವಸಾಯವನ್ನೇ ಕೈಬಿಡಹತ್ತಿದ್ದಾರೆ. ಒಬ್ಬರು ಎಷ್ಟೆಲ್ಲಿ ಓದಿದರೆ ಅವರಿಗೆ ಸರ್ಕಾರಿ ನೌಕರಿ ಬೇಕು; ಇಲ್ಲದಿದ್ದರೆ ನಗರ-ಪಟ್ಟಣಗಳಲ್ಲಿ ಬೇರೇನೋ ಕೀಳು ಮಟ್ಟದ ಕೆಲಸಕ್ಕೆ ಬರುತ್ತಾರೆ. ಆದರೆ ಕೃಷಿ-ಕಾರ್ಯಗಳನ್ನು ಮಾಡುವುದಿಲ್ಲ. ಕೃಷಿ ಉದ್ಯಮದಲ್ಲಿ ಸುಲಭಕ್ಕೆ ಏನೂ ಸಿಗುವುದಿಲ್ಲ. ಬೆವರು ಸುರಿಸಿ ದುಡಿದರೆ ಮಾತ್ರ ಕೃಷಿ ಉತ್ಪತ್ತಿ. ಆರ್ಥಿಕ ತಜ್ಞರು, ಆಡಳಿತಗಾರರು, ರಾಜಕಾರಣಿಗಳು ಜನರಿಗೆ ದುಡಿಯಲು ಕೆಲಸವಿಲ್ಲವೆಂದು ಹೇಳುತ್ತಿದ್ದಾರೆ. ಆದರೆ ಕೃಷಿ ಉದ್ಯೋಗದಲ್ಲಿ ಎಷ್ಟೊಂದು ಕೆಲಸವಿದೆ ! ದುಡಿಯುವವರಿಗೆ ಅಲ್ಲಿ ಉದ್ಯೋಗದ ಅಭಾವವೇ ಇಲ್ಲ. ಕಾಯಕವೇ ಕೈಲಾಸವೆಂದು ಮಹಾಮಾನವತಾವಾದಿ ಶಿವಶರಣ ಬಸವಣ್ಣನವರು ಹೇಳಿದ್ದಾರೆ. ಏಸುಕ್ರಿಸ್ತ ಸ್ವಾಮಿಯು ದುಡಿಮೆಯೇ ಪೂಜೆ ಎಂದು ಹೇಳಿದ್ದಾರೆ. ಸತ್ಯ-ಶುದ್ಧ ಕಾಯಕವು ಕೃಷಿಯಲ್ಲಿ ದೊರಕುತ್ತದೆ. ಭಾರತದಲ್ಲಿ, ಅದೂ ಕರ್ನಾಟಕದಲ್ಲಿ ನೈಸರ್ಗಿಕ ಸಂಪನ್ಮೂಲಗಳಿಗೆ ಕೊರತೆಯಿಲ್ಲ. ಆದರೆ ದುಡಿಮೆಯ ಕೊರತೆಯಿರುತ್ತದೆ.

ಕೃಷಿಕನು ಬೆಳೆದ ಮಾಲಿಗೆ ಯೋಗ್ಯ ಬೆಲೆ ಸಿಗಬೇಕಾದರೆ ಕೃಷಿ ಆರ್ಥಿಕ ತಜ್ಞರು ಬಹಳ ಆಳವಾಗಿ, ಯಾವ ಹಂಗಾಮಿನಲ್ಲಿ ಯಾವ ಬೆಳೆಯನ್ನು ಹೆಚ್ಚಾಗಿ ಬೆಳೆಯಬೇಕು, ಯಾವ ಬೆಳೆಯನ್ನು ಕಡಿಮೆ ಬೆಳೆಯಬೇಕು, ಮುಂತಾದವುಗಳನ್ನು ಅಭ್ಯಸಿಸಿ ರೈತರಿಗೆ ಮುನ್ಸೂಚನೆ ಕೊಡುವ ಪದ್ಧತಿಯು ಬಳಕೆಗೆ ಬರಬೇಕು. ನಮ್ಮ ದೇಶ ಕೃಷಿ ನಾಡು, ಕೃಷಿಯೇ ನಮ್ಮ ನಾಡಿನ ಬೆನ್ನೆಲುಬು. ಆದರೆ ಯೋಜನಾ ಮಂಡಳಿಗಳಲ್ಲಿ ಕೃಷಿ ಆರ್ಥಿಕ ತಜ್ಞರು ಇರದೇ ಇರುವುದು ಒಂದು ವಿಷಾದಕರ ವಿಷಯ; ಇದ್ದರೆ ಅವರೇನು ಮಾಡುತ್ತಿದ್ದಾರೆಂಬುದು ಕುತೂಹಲದ ವಿಷಯ.

**ಎಸ್. ಎಸ್. ಕಟಗಿಹಳ್ಳಿ ಮಠ**
ನಂ. ೧೨೩, ೧೬ನೇ ಕ್ರಾಸ್, ೧ನೇ ಬ್ಲಾಕ್,
ರಾಜಾಜಿನಗರ, ಬೆಂಗಳೂರು - ೧೦




### ಲೇಖಕರ ಗಮನಕ್ಕೆ

ಹೊಸತು ಧ್ಯೇಯಕ್ಕೆ ಪೂರಕವಾದ ವಿಚಾರಪೂರ್ಣ ಲೇಖನಗಳಿಗೆ ಸ್ವಾಗತವಿದೆ. ಲೇಖನಗಳನ್ನು ಬಿಳಿಯ ಹಾಳೆಯ ಮೇಲೆ ಒಂದೇ ಮಗ್ಗುಲಿನಲ್ಲಿ ಸ್ಪಷ್ಟವಾದ ಅಕ್ಷರಗಳಲ್ಲಿ ಬರೆದಿರಬೇಕು. ವಿವಿಧ ಶೀರ್ಷಿಕೆಗಳಿಗೆ ಲಭ್ಯವಿರುವ ಪುಟಗಳಿಗೆ ಅನುಗುಣವಾಗಿ ಅತಿ ದೀರ್ಘವಲ್ಲದ ಬರಹಗಳಾದರೆ ಅನುಕೂಲ. ಲೇಖನಗಳನ್ನು ಹಿಂದಕ್ಕೆ ಪಡೆಯಬಯಸುವವರು ಅಂಚೆ ಚೀಟಿ ಸಹಿತ ಸ್ವವಿಳಾಸದ ಲಕೋಟೆ ಇರಿಸುವುದನ್ನು ಮರೆಯಬಾರದು.

ಸಂಪಾದಕ, ಹೊಸತು

# ಸಾಂಬಾರ ಪದಾರ್ಥಗಳು ಮತ್ತು ಆರೋಗ್ಯ

**ಭಾ**ರತವು ಬಹುಕಾಲದಿಂದಲೂ ಸಾಂಬಾರ ಪದಾರ್ಥಗಳ ತವರು ಎಂದು ಖ್ಯಾತಿ ಪಡೆದಿದೆ. ಇಂದು ಸಾಂಬಾರ ಪದಾರ್ಥಗಳ ರಾಜನೆಂದು ಕರೆಯಲ್ಪಡುತ್ತಿರುವ (ಕರಿ) ಮೆಣಸು, ಸಾಂಬಾರ ಪದಾರ್ಥಗಳ ರಾಣಿಯೆಂದು ಕರೆಯಲ್ಪಡುತ್ತಿರುವ ಏಲಕ್ಕಿ ಮೊದಲುಗೊಂಡು ಶುಂಠಿ, ಅರಿಶಿನ, ಮೆಣಸಿನಕಾಯಿ, ಲವಂಗ, ಜಾಯಿಕಾಯಿ, ದಾಲ್ಚಿನ್ನಿ, ದನಿಯ, ಮೆಂತ್ಯ, ಜೀರಿಗೆ, ಬೆಳ್ಳುಳ್ಳಿ, ಕೇಸರಿ ಮುಂತಾದ ನಲವತ್ತಕ್ಕೂ ಹೆಚ್ಚು ಸಾಂಬಾರ ಪದಾರ್ಥಗಳ ಬೆಳೆಯನ್ನು ಭಾರತದಲ್ಲಿ ಮಾತ್ರ ಕಾಣಲು ಸಾಧ್ಯ. ಔಷಧೀಯ ಗುಣಗಳಿರುವುದರಿಂದ ಅವನ್ನು ಕೆಲವು ಆಯುರ್ವೇದ ಔಷಧಿಗಳ ತಯಾರಿಕೆಯಲ್ಲಿ, ಹಾಗೂ ಕಾಂತಿವರ್ಧಕ ಮೌಲ್ಯಗಳಿರುವುದರಿಂದ ಸೌಂದರ್ಯ ಮತ್ತು ಮೈಕಾಂತಿಗಳ ರಕ್ಷಣೆಯ ವಸ್ತುಗಳ ತಯಾರಿಕೆಯಲ್ಲೂ ಉಪಯೋಗಿಸಲಾಗಿದೆ. ಇತ್ತೀಚೆಗೆ ನಡೆಸಿದ ಅನೇಕ ಅಧ್ಯಯನಗಳಿಂದ ಭಾರತದಲ್ಲಿ ಒಬ್ಬ ವ್ಯಕ್ತಿಯು ಒಂದು ವರ್ಷದಲ್ಲಿ ಸುಮಾರು 2,140 ಗ್ರಾಂ. ಸಾಂಬಾರ ಪದಾರ್ಥಗಳನ್ನು ಬಳಸುತ್ತಿರುವುದಾಗಿ ತಿಳಿದು ಬಂದಿದೆ. ಸಾಂಬಾರ ಪದಾರ್ಥಗಳನ್ನು ಆಮದು ಮಾಡಿಕೊಳ್ಳುತ್ತಿರುವ ಅಮೆರಿಕಾದಲ್ಲಿ ಅದು ಕೇವಲ 765 ಗ್ರಾಂ. ಆಗಿದೆ. (ಕರಿ) ಮೆಣಸಿನ ಬಳಕೆಯನ್ನು ಮಾತ್ರ ಲೆಕ್ಕಕ್ಕೆ ತೆಗೆದುಕೊಳ್ಳುವುದಾದರೆ ಭಾರತದಲ್ಲಿ ಅದು ಕೇವಲ 20 ಗ್ರಾಂ. ಇದ್ದರೆ ಅಮೆರಿಕಾದಲ್ಲಿ 100 ಗ್ರಾಂ. ಇದೆ.

**ಸಾಂಬಾರ ಪದಾರ್ಥಗಳಲ್ಲಿರುವ ಪೋಷಕಾಂಶಗಳು**

ಪ್ರತಿಯೊಂದು ಸಾಂಬಾರ ಪದಾರ್ಥದಲ್ಲೂ ಒಂದು ಬಗೆಯ ವಿಶಿಷ್ಟ ಪರಿಮಳವಿದೆ. ಇದಕ್ಕೆ ಅದರಲ್ಲಿರುವ ಚಂಚಲ ತೈಲವೇ ಕಾರಣ. ಉದಾಹರಣೆಗೆ ಮೆಣಸಿನಲ್ಲಿ ಪೈಪರೀನ್, ಶುಂಠಿಯಲ್ಲಿ ಜಿಂಜೆರಾಲ್, ಮೆಣಸಿನಕಾಯಿಯಲ್ಲಿ ಕ್ಯಾಪ್‌ಸೈಸಿನ್, ಅರಿಶಿನದಲ್ಲಿ ಕುರ್ಕುಮಿನ್, ಲವಂಗದಲ್ಲಿ ಯುಜಿನಾಲ್, ಪುದೀನಾದಲ್ಲಿ ಮೆಂಥಾಲ್ ಇವೆ. ಸಾಂಬಾರ ಪದಾರ್ಥಗಳಲ್ಲಿನ ತೀಕ್ಷ್ಣ ಅಥವಾ ಕಟು ರುಚಿಗೆ ಕಾರಣ ಅವುಗಳಲ್ಲಿ ಅಡಗಿರುವ ಕೆಲವು ಪೋಷಕಾಂಶಗಳಾಗಿವೆ. ಉದಾ: ಪ್ರೊಟೀನ್, ಕೊಬ್ಬು, ಕಾರ್ಬೋಹೈಡ್ರೇಟ್, ಖನಿಜಗಳು ಮುಂತಾದವು. ಕೆಲವು ಮುಖ್ಯ ಸಾಂಬಾರ ಪದಾರ್ಥಗಳ 100 ಗ್ರಾಂ. ನಲ್ಲಿನ ಪೋಷಕಾಂಶಗಳು ಮತ್ತು ಕ್ಯಾಲೋರಿ ಶಕ್ತಿಯನ್ನು ಕೆಳಗೆ ಕೊಡಲಾಗಿದೆ:

| ಸಾಂಬಾರ ಪದಾರ್ಥ | ಪ್ರೊಟೀನ್ | ಕೊಬ್ಬು | ಕಾರ್ಬೋಹೈಡ್ರೇಟ್ | ಖನಿಜ | ಕ್ಯಾಲೋರಿ ಶಕ್ತಿ |
|---|---|---|---|---|---|
| ಕರಿಮೆಣಸು | 11.5 | 6.8 | 49.2 | 4.4 | 304 |
| ಏಲಕ್ಕಿಬೀಜ | 10.2 | 2.2 | 42.1 | 5.4 | 229 |
| ಹಸಿಶುಂಠಿ | 2.3 | 0.9 | 12.3 | 1.2 | 67 |
| ಅರಿಶಿನ | 6.3 | 5.1 | 69.4 | 3.5 | 349 |
| ಮೆಣಸಿನ-ಕಾಯಿ | 15.9 | 6.2 | 81.6 | 6.1 | 246 |
| ಲವಂಗ | 5.2 | 8.9 | 46.0 | 5.2 | 285 |
| ಜಾಯಿಕಾಯಿ | 7.5 | 36.4 | 28.5 | 1.7 | 472 |
| ಜಾಪತ್ರೆ | 6.5 | 24.4 | 47.8 | 1.6 | 437 |
| ಕೊತ್ತಂಬರಿ-ಬೀಜ | 14.1 | 16.1 | 21.6 | 4.4 | 288 |
| ಜೀರಿಗೆ | 18.7 | 15.0 | 36.6 | 5.8 | 356 |
| ಮೆಂತ್ಯ | 26.2 | 5.8 | 44.1 | 3.0 | 323 |
| ಬೆಳ್ಳುಳ್ಳಿ | 6.3 | 0.1 | 29.8 | 1.0 | 145 |
| ಇಂಗು | 4.0 | 1.1 | 67.8 | 7.0 | 297 |

ಆಹಾರ ಪದಾರ್ಥಗಳಲ್ಲಿ ಸಾಂಬಾರ ಪದಾರ್ಥಗಳನ್ನು ಉಪಯೋಗಿಸುವುದರಿಂದ ಅವು ನಮ್ಮ ನಾಲಿಗೆಯಲ್ಲಿರುವ ರುಚಿ ಮೊಗ್ಗು (Taste bud)ಗಳನ್ನು ಪ್ರಚೋದಿಸಿ ಜೊಲ್ಲು ರಸವನ್ನು ಹೆಚ್ಚುಮಾಡುತ್ತವೆ.



ಶುಂಠಿ ಬೇಸಾಯ

ಅಮೈಲೀಸ್‌ಸ್ರಾವವನ್ನು ಹೆಚ್ಚಿಸುತ್ತವೆ. ಬಾಯಲ್ಲಿ ಆಹಾರ ಶೇಷ ಮತ್ತು ಜೀವಾಣುಗಳ ಕಾರಣದಿಂದಾಗಿ ಉಂಟಾಗುವ ಮಾಲಿನ್ಯವನ್ನೂ ಅದು ತಡೆಯುತ್ತದೆ. ಪಚನ ಮಾರ್ಗದ ನಯವಾದ ಚರ್ಮವು ಶಾಖ, ರಾಸಾಯನಿಕ ವಸ್ತು ಮತ್ತು ಚಲನೆಗಳಿಂದ ಉದ್ರೇಕಗೊಳ್ಳುವುದನ್ನು ಅದು ತಡೆಯುತ್ತದೆ.

ಸಾಂಬಾರ ಪದಾರ್ಥಗಳಲ್ಲಿ ಸಾಮಾನ್ಯವಾಗಿ ಆಂಟಿಬ್ಯಾಕ್ಟೀರಿಯಾ ಮತ್ತು ವಾತಹರ ಕ್ರಿಯೆಯು ಇರುವುದರಿಂದ ಜಠರ ಮತ್ತು ಕರುಳಿನಲ್ಲಿರುವ ವಾಯುವನ್ನೇ ಅದು ತೇಗು ಮತ್ತು ಅಪಾನ ವಾಯುವಿನ ಮೂಲಕ ಹೊರದೂಡಲು ಉಪಕರಿಸುತ್ತದೆ. ಆಹಾರ ಪದಾರ್ಥವನ್ನು ಎಣ್ಣೆಯಲ್ಲಿ ಕರಿಯುವಾಗ ಅದರಲ್ಲಿ ಕೆಲವು ಹಾನಿಕಾರಕ ಅಂಶಗಳು ಉತ್ಪತ್ತಿಯಾಗುವ ಸಂಭವವಿದೆ. ಹಾಗೆ ಉತ್ಪನ್ನವಾಗುವ ಅಂಶಗಳು ನಮ್ಮ ಜೀವಕೋಶಕ್ಕೆ ತೊಂದರೆಯನ್ನುಂಟುಮಾಡುತ್ತವೆ. ಈ ಹಾನಿಕಾರಕ ಅಂಶಗಳನ್ನು ಪರಿಣಾಮಶೂನ್ಯ ಮಾಡುವ ಅಂಶಗಳು ಕೆಲವು ಸಾಂಬಾರ ಪದಾರ್ಥಗಳಲ್ಲಿವೆ. ಕೆಲವು ಸಾಂಬಾರ



ಕರಿಮೆಣಸು

ಪದಾರ್ಥಗಳಿಗೆ ಪೂತಿನಾಶಕ ಗುಣವಿರುವುದಲ್ಲದೆ ದೊಡ್ಡ ಕರುಳಿನಲ್ಲಿರುವ ಅಹಿತಕರ ಸೂಕ್ಷ್ಮಾಣು ಜೀವಿಗಳ ಪ್ರಕ್ರಿಯೆಯನ್ನು ಅದು ಕ್ರಮೇಣ ತಡೆಯುತ್ತದೆ. ಸಾಂಬಾರ ಪದಾರ್ಥಗಳಲ್ಲಿ ಕ್ಯಾನ್ಸರನ್ನು ತಡೆಯುವ ಗುಣವೂ ಇದೆಯೆಂದು ಆಯುರ್ವೇದ ಪಂಡಿತರು ಹೇಳುವುದುಂಟು. ಆ ಬಗ್ಗೆ ಸಂಶೋಧನೆಗಳು ಇನ್ನೂ ನಡೆಯಬೇಕಾಗಿದೆ. ಜೀರ್ಣಶಕ್ತಿಗೆ ತೊಂದರೆ ಇದ್ದಲ್ಲಿ ಬೆಳ್ಳುಳ್ಳಿ ಅದರ ಶಮನಕ್ಕೆ ಒಳ್ಳೆಯದು. ಅದರಲ್ಲಿನ ಗಂಧಕದ ಅಂಶವು ಬ್ಯಾಕ್ಟೀರಿಯಾವನ್ನು ಪ್ರತಿರೋಧಿಸುವ ಮತ್ತು ವಿಷಕಾರಿ ಬೂಷ್ಟು ಹಿಡಿಯುವುದನ್ನು ತಡೆಯುವ ಗುಣವುಳ್ಳದ್ದಾಗಿದೆ. ಬೆಳ್ಳುಳ್ಳಿ ರಸದ ಸೇವನೆ ರಕ್ತದಲ್ಲಿನ ಕೊಲೆಸ್ಟರಾಲ್ ಅನ್ನು ಕಡಿಮೆ ಮಾಡಿ ರಕ್ತವನ್ನು ಶುದ್ಧಿಮಾಡುತ್ತದೆಂದು ಇತ್ತೀಚೆಗೆ ನಡೆಸಿದ ಸಂಶೋಧನೆಗಳಿಂದ ತಿಳಿದುಬಂದಿದೆ. ಈರುಳ್ಳಿ ಸೇವನೆಯೂ ಸಹ ರಕ್ತದಲ್ಲಿನ ಕೊಲೆಸ್ಟರಾಲ್ ಮತ್ತು ಗ್ಲೂಕೋಸ್ ಅಂಶಗಳನ್ನು ಕಡಿಮೆ ಮಾಡುತ್ತದೆ. ಜೀರಿಗೆ, ಇಂಗು, ಸಾಸುವೆ ಮುಂತಾದವುಗಳಿಗೆ ಸೂಕ್ಷ್ಮಜೀವಿಗಳನ್ನು ಪ್ರತಿರೋಧಿಸುವ ಶಕ್ತಿ ಇದೆ.

ಸಾಂಬಾರ ಪದಾರ್ಥಗಳನ್ನು ಇಡಿಯಾಗಿಯೋ, ಪುಡಿ ರೂಪದಲ್ಲೋ ಅಥವಾ ಅದರಿಂದ ಭಟ್ಟಿ ಇಳಿಸಿದ ರೂಪದಲ್ಲೋ ಕೂದಲು, ಚರ್ಮ ಮತ್ತು ಮುಖದ ಛಾಯೆಯನ್ನು ಅಂದಗೊಳಿಸಲು ಬೇಕಾದ ವಸ್ತುಗಳ ತಯಾರಿಕೆಯಲ್ಲಿ ಉಪಯೋಗಿಸುತ್ತಾರೆ. ಉದಾಹರಣೆಗೆ ಅರಿಶಿನವನ್ನು ಪುಡಿ ರೂಪದಲ್ಲಿ ಚರ್ಮವು ನುಣುಪಾಗಲು, ಮತ್ತು ಚರ್ಮದ ಮೇಲೆ ಬೆಳೆಯುವ ಅನಾವಶ್ಯಕ ಕೂದಲುಗಳನ್ನು ತೆಗೆದುಹಾಕಲು ಉಪಯೋಗಿಸುತ್ತಾರೆ. ಹಾಗೆಯೇ ಅರಿಶಿನದ ಗಡ್ಡೆಯನ್ನು ಎಮ್ಮೆಯ ಹಸಿಹಾಲಿನಲ್ಲಿ ಅರೆದು ದೊರಕಿದ ಪೇಸ್ಟ್ ಅನ್ನು ಮುಖದಲ್ಲಿ ಮೊಡವೆ ಕಲೆಗಳು, ತುರಿ ಕಜ್ಜಿಗಳು, ಮುಂತಾದವುಗಳ ನಿವಾರಣೆಗೆ ಉಪಯೋಗಿಸುತ್ತಾರೆ. ಲವಂಗ, ದಾಲ್ಚಿನ್ನಿ ಮತ್ತು ಮೆಣಸನ್ನು ಬೆರೆಸಿ ಮಾಡಿದ ಪೇಸ್ಟನ್ನು ಮುಖದ ಮೇಲಿನ ಮೊಡವೆಗಳ ನಿವಾರಣೆಗೆ ಉಪಯೋಗಿಸುವುದುಂಟು. ಅಂತೆಯೇ ಮೆಂತ್ಯವನ್ನು ರಾತ್ರಿ ನೆನೆಸಿಟ್ಟು ಬೆಳಿಗ್ಗೆ ಮೆತ್ತಗಾದ ಮೇಲೆ ಅದನ್ನೇ ಪೇಸ್ಟಿನಂತೆ ಅರೆದು ತಲೆಗೆ ಮೆತ್ತಿ ಅರ್ಧ ಗಂಟೆ ಹಾಗೇ ಬಿಟ್ಟು ತೊಳೆದರೆ ತಲೆಯಲ್ಲಿನ ಹುಣ್ಣು ಮತ್ತು ಹೊಟ್ಟನ್ನು ನಿವಾರಿಸಬಹುದು. ಅದೇ ಪೇಸ್ಟನ್ನು ರಾತ್ರಿ ಮಲಗುವಾಗ ಮುಖಕ್ಕೆ ಹಚ್ಚಿ ಬೆಳಿಗ್ಗೆ ಬಿಸಿನೀರಿನಿಂದ ತೊಳೆದರೆ ಮೊಡವೆಗಳಿಗೆ ಶಮನ ಉಂಟಾಗುತ್ತದೆ. ಆದ್ದರಿಂದ ಸಂಬಾರ ಪದಾರ್ಥಗಳ ಕೃಷಿ ಬಹಳ ಉಪಯುಕ್ತವಾಗಿದೆ.

ಎಂ. ಎಸ್. ಲಕ್ಷ್ಮಣಾಚಾರ್
[illegible]

# ಭಯೋತ್ಪಾದಕರ ವಿರುದ್ಧ ಅಂತರರಾಷ್ಟ್ರೀಯ ಕ್ರಮ ಅಗತ್ಯ

ವ್ಯವಸ್ಥೆಯ ವಿರುದ್ಧ ಬಂಡೆದ್ದಾಗ, ವಿದೇಶೀ ಆಳ್ವಿಕೆಯ ವಿರುದ್ಧ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸುತ್ತಿರುವಾಗ, ಸರ್ವಾಧಿಕಾರ, ದಬ್ಬಾಳಿಕೆಗಳನ್ನು ಎದುರಿಸಿ ನಿಂತಾಗ ವ್ಯಕ್ತಿಗಳು ಅಥವಾ ಗುಂಪುಗಳು ಸಾಹಸ ಚರ್ಯೆಗಳಲ್ಲಿ ತೊಡಗುವುದು ಅಪರೂಪವೇನಲ್ಲ. ಅಂಥ ಪ್ರಕರಣಗಳನ್ನು ನಾವು ಇತಿಹಾಸದಲ್ಲಿ ಕಾಣುತ್ತೇವೆ. ಈ ಘಟನೆಗಳು ಸೀಮಿತವಾದ್ದಾಗಿದ್ದರೂ ಪೀಡಕರ ವಿರುದ್ಧದ ಕ್ರಮಗಳು. ಅಮಾಯಕ ಜನರ ಮೇಲೆ ನಡೆಸಿದ ದೌರ್ಜನ್ಯವಲ್ಲ. ಅವು ಪರಿಸ್ಥಿತಿಯ ತೀವ್ರತೆಯನ್ನು ಬೆಳಕಿಗೆ ತರಲು, ಜನತೆಯ ಕಣ್ತೆರೆಸಿ ಅವರನ್ನು ಹೋರಾಟದಲ್ಲಿ ನಿರತರಾಗುವಂತೆ ಪ್ರೇರೇಪಿಸಲು ಸಹಾಯಕವಾಗಿದ್ದುವು. ಶತ್ರುವಿನ ಕ್ರೌರ್ಯದ ಹಾಗೂ ಆಳುವ ವರ್ಗಗಳ ಭಯೋತ್ಪಾದನೆ ವಿರುದ್ಧ ವಾಗಿ ವ್ಯಕ್ತಗೊಳ್ಳುತ್ತಿದ್ದ ಪ್ರತಿಭಟನೆಗಳಲ್ಲಿ ಅವೂ ಒಂದು. ಇಂಥ ಘಟನೆಗಳಲ್ಲಿ ತ್ಯಾಗ ಬಲಿದಾನಗಳಿಗೇ ಮಹತ್ವ. ಆದರೆ ಆಳುವವರ ದೃಷ್ಟಿಯಲ್ಲಿ ಅವು 'ಭಯೋತ್ಪಾದಕ ಹಿಂಸಾಕೃತ್ಯಗಳು'.

ನಮ್ಮ ದೇಶದ ಹಾಗೂ ಇತರ ದೇಶಗಳ ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಇಂಥ ಪ್ರಕರಣಗಳು ಹಲವು. ಅವೆಲ್ಲ ದೇಶಪ್ರೇಮದಿಂದ ಪ್ರೇರಿತವಾದ ಅಸಾಧಾರಣ ತ್ಯಾಗ ಬಲಿದಾನಗಳಿಂದ ಕೂಡಿದ ಪ್ರಕರಣಗಳು. ಎರಡನೇ ಮಹಾಯುದ್ಧದ ಕಾಲದಲ್ಲಿ ನಾಜೀ ಆಕ್ರಮಣದ ವಿರುದ್ಧ ಯುರೋಪಿನ ಹಲವು ದೇಶಗಳಲ್ಲಿ ದೇಶಪ್ರೇಮಿಗಳು ನಡೆಸಿದ ಭೂಗತ ಹೋರಾಟವನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಅವೆಲ್ಲ ರೋಮಾಂಚಕಾರಿ ಸಾಹಸಗಳು.

ಆದರೆ ಕಳೆದ ಮೂರು ನಾಲ್ಕು ದಶಕಗಳಿಂದ ನಡೆಯುತ್ತಿರುವ ವಿಧ್ವಂಸಕ ಕೃತ್ಯಗಳು, ಅಮಾಯಕ ಜನರ ಅಪಹರಣ ಹಾಗೂ ವಿಮಾನಾಪಹರಣ ಕೃತ್ಯಗಳು, ಜನಸಾಮಾನ್ಯರನ್ನು ಕಂಗೆಡಿಸುವಂಥ ಭಯಾನಕ ಚರ್ಯೆಗಳಾಗಿವೆ. ಆಧುನಿಕ ಶಸ್ತ್ರಗಳಾದ ಎಕೆ-೪೭ ಬಂದೂಕುಗಳ ಉಪಯೋಗ, ಆರ್‌ಡಿಎಕ್ಸ್‌ನಂಥ ಆಸ್ಫೋಟಕಗಳ ಬಳಕೆ ನೂರಾರು ಮಂದಿ ಯಾವುದಕ್ಕೂ ಸಂಬಂಧವಿಲ್ಲದ ಜನಸಾಮಾನ್ಯರನ್ನು ಬಲಿ ತೆಗೆದುಕೊಂಡಿವೆ. ಇವು ವ್ಯವಸ್ಥೆಯ ವಿರುದ್ಧವಾಗಿಯೋ ಅಥವಾ ವಿದೇಶೀ ಆಳ್ವಿಕೆಯ ಅಥವಾ ದಬ್ಬಾಳಿಕೆಯ ಎದುರಾಗಿಯೋ ನಡೆಯುತ್ತಿರುವ ಹೋರಾಟವಾಗಿಲ್ಲ. ಬದಲಾಗಿ ಅವು ಕೆಲಬಾರಿ ಸಂಕುಚಿತ ಮತೀಯ ಅಥವಾ ಇತರ ಮೂಲಭೂತವಾದಿ ಸಂಬಂಧಿತ ವಿಷಯಗಳಿಗಾಗಿ ನಡೆಯುತ್ತಿರುವ ದೌರ್ಜನ್ಯದ ಕ್ರಮಗಳು. ಅವು ಆಳುವ ವರ್ಗಗಳಲ್ಲಿ ಅಥವಾ ಆಡಳಿತ ವಲಯಗಳಲ್ಲಿ ಭಯ ಹುಟ್ಟಿಸುವುದಕ್ಕಿಂತ ಹೆಚ್ಚಾಗಿ ಜನಸಾಮಾನ್ಯರನ್ನು ಆತಂಕಕ್ಕೀಡುಮಾಡಿವೆ, ಮಾಡುತ್ತಿವೆ. ಜನಬೆಂಬಲವಿಲ್ಲದೆ, ಕೆಲವೊಮ್ಮೆ ವಿದೇಶೀಯರ ಕುಮ್ಮಕ್ಕಿನಿಂದ ಕೂಲಿ ಸಿಪಾಯಿಗಳು ನಡೆಸುತ್ತಿರುವ ಭಯಾನಕ ಕಗ್ಗೊಲೆಗಳಾಗಿವೆ. ಇಂಥ ಕೃತ್ಯಗಳೆಲ್ಲವನ್ನೂ 'ಹೇಡಿ ಕ್ರಮಗಳು' ಎಂದು ಸುಲಭವಾಗಿ ತಳ್ಳಿಹಾಕಬಹುದು. ಆದರೆ ಅವು ಸಂಘಟಿತ ರೀತಿಯಲ್ಲಿ ಮುಂದುವರಿದಾಗ ನಿಜಕ್ಕೂ ಆತಂಕಕಾರಿ.

**ಅಮೆರಿಕಾ ಸರ್ಕಾರದ ನೆರವಿನಿಂದ ಇಸ್ರೇಲ್ ಒಂದು ಸ್ವತಂತ್ರ ರಾಜ್ಯವನ್ನು 'ಹೈಜಾಕ್' ಮಾಡಿಕೊಂಡು ಹೋಗಿತ್ತು. ಅದೇ ಪ್ಯಾಲಿಸ್ಟೈನ್. ಅಲ್ಲಿಯ ಪ್ರಜೆಗಳಿಗೆ ತಮ್ಮದೇ ಆದ ರಾಷ್ಟ್ರವೆಂಬುದೇ ಇಲ್ಲದ ಪರಿಸ್ಥಿತಿ. ಎಲ್ಲೆಲ್ಲೋ ಹರಡಿಹೋದರು. ಆ ಹಿನ್ನೆಲೆಯಲ್ಲಿ ಆರಂಭವಾದ್ದು ವಿಮಾನಗಳ 'ಹೈಜಾಕ್'. ಮುಂದುವರಿದು ಅದು ವಿಭಿನ್ನ ಸ್ವರೂಪಗಳನ್ನು ಪಡೆದುಕೊಂಡಿದೆ. 'ಭಯೋತ್ಪಾದಕತೆ' ಎಂಬುದನ್ನು ಸರಳವಾಗಿ ವ್ಯಾಖ್ಯಾನಿಸುವುದು ಸರಿಯೇ ?**

ವಿಮಾನಾಪಹರಣ ಹಾಗೂ ಅಮಾಯಕ ಪ್ರಯಾಣಿಕರನ್ನು ಒತ್ತೆಯಾಳಾಗಿಸಿಕೊಂಡು, ಸಾವಿನ ಭೀತಿ ಹುಟ್ಟಿಸಿ ಅವರನ್ನು ಕಂಗಾಲಾಗಿಸಿ, ಮಾನಸಿಕವಾಗಿ, ಕೆಲವೊಮ್ಮೆ ದೈಹಿಕವಾಗಿ, ಹಿಂಸೆ ಮಾಡುವುದು ಪ್ರಾರಂಭವಾದ್ದು ಅರವತ್ತರ ದಶಕದ ಕೊನೆಯಲ್ಲಿ. ಅತಿ ಸುಲಭವಾಗಿ ಕಳ್ಳತನದಿಂದ ಸಾಗಿಸಿದ ಒಂದೆರಡು ಪಿಸ್ತೂಲು, ಕೈಬಾಂಬುಗಳು, ಗ್ರೆನೇಡ್‌ಗಳಿಂದ ವಿಮಾನ ಸಿಬ್ಬಂದಿ ಹಾಗೂ ಪ್ರಯಾಣಿಕರನ್ನು ಒತ್ತೆಯಾಳುಗಳಾಗಿ ಮಾಡಿಕೊಂಡು ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಸರಕಾರವನ್ನು ಬೆದರಿಸುವ ಹಲವು ಪ್ರಕರಣಗಳು ನಡೆದುಹೋಗಿವೆ. ಕೆಲವೊಮ್ಮೆ ಇಂಥ ಉಗ್ರವಾದಿ ಭಯೋತ್ಪಾದಕರು ಯಶಸ್ಸು ಗಳಿಸಿದ್ದೂ ಉಂಟು. ಎರಡನೇ ಮಹಾಯುದ್ಧಾನಂತರ ಮಧ್ಯ ಪ್ರಾಚ್ಯದಲ್ಲಿ ಅಮೆರಿಕಾ ಮತ್ತು ಪಾಶ್ಚಾತ್ಯ ದೇಶಗಳು ಅರಬ್ ರಾಷ್ಟ್ರಗಳ ರಾಷ್ಟ್ರೀಯತೆಗೆ ಸವಾಲಾಗಿ, ಕಡಿವಾಣವಾಗಿ, ಯಹೂದ್ಯರ ನಾಡು ಇಸ್ರೇಲ್ ಸ್ಥಾಪಿಸಿ, ಪ್ಯಾಲಿಸ್ಟೈನ್ ಅರಬ್ಬರನ್ನು ವಂಚಿಸಿ ನಿರಾಶ್ರಿತರನ್ನಾಗಿಸಿದ ಮೇಲೆ ಪ್ರಾರಂಭವಾದ್ದು ವಿಮಾನಾಪಹರಣ ಎಂಬ ಪ್ರಕರಣ. ಮೊದಲಿನಲ್ಲಿ ಈ ಪ್ರಕರಣಗಳು ಹಾಗೂ ಇತರ ಘಟನೆಗಳು ಪ್ಯಾಲಿಸ್ಟೈನ್ ಅರಬ್ಬರು ತಮ್ಮ ತಾಯ್ನಾಡಿನ ಸ್ಥಾಪನೆಗಾಗಿ ಹಂಬಲಿಸಿ ಹೋರಾಡುತ್ತಿದ್ದುದರ ಕಡೆಗೆ ಅಂತರರಾಷ್ಟ್ರೀಯ ಗಮನವನ್ನು ಸೆಳೆದಿದ್ದು ನಿಜ. ಆದರೆ ಬರಬರುತ್ತ ಅವು ಸಾಮಾನ್ಯ ಅಪರಾಧಿಗಳು ನಡೆಸುವ ದೌರ್ಜನ್ಯಕೃತ್ಯಗಳಾಗಿ ಒಂದು ಸಾಮಾಜಿಕ ಪೀಡೆಯಾಗಿವೆ. ಇಂದು ಭಯೋತ್ಪಾದಕ ಕೃತ್ಯಗಳು ಅಂತರರಾಷ್ಟ್ರೀಯ ಮಟ್ಟದಲ್ಲಿ ಎದುರಿಸಬೇಕಾಗಿ ಬಂದಿರುವ ಪ್ರಶ್ನೆಯಾಗಿದೆ. ಆದರೆ ಅಮೆರಿಕಾ ಮತ್ತು ಇತರ ಪಾಶ್ಚಿಮಾತ್ಯ ದೇಶಗಳು ಭಯೋತ್ಪಾದನೆಯ ವಿರುದ್ಧವಾಗಿ ಕ್ರಮಗಳನ್ನು ತೆಗೆದುಕೊಳ್ಳುವುದರಲ್ಲಿ ಸಮಯ ಸಾಧಕ ನೀತಿ ಅನುಸರಿಸಿವೆ. ನೇರವಾಗಿ ತಮಗೆ ಮಾತ್ರ ಸಂಬಂಧಿಸಿದಾಗ ಉಗ್ರಕ್ರಮ ತೆಗೆದುಕೊಂಡಿವೆ. ಆದರೆ ಇತರ ದೇಶಗಳ ಮಟ್ಟಿಗೆ ಬಾಯುಪಚಾರದ ಸೇವೆ ಸಲ್ಲಿಸಿವೆ.

ನಮ್ಮ ದೇಶದ ಮಟ್ಟಿಗೆ ಇಂದು ಭಯೋತ್ಪಾದಕರ ವಿರುದ್ಧ ಹೋರಾಟ ಜೀವನ್ಮರಣದ ಪ್ರಶ್ನೆಯಾಗುತ್ತಿದೆ. ಮುಖ್ಯವಾಗಿ ಕಾಶ್ಮೀರ ಹಾಗೂ ಇತರ ಗಡಿ ಪ್ರದೇಶಗಳಲ್ಲಿ ನೆರೆಯ ರಾಷ್ಟ್ರದ ಕುಮ್ಮಕ್ಕಿನಿಂದ ನಡೆಯುತ್ತಿರುವ ಕೃತ್ಯಗಳು ಅಮಾನುಷವಾದ್ದಾಗಿವೆ. ಅಲ್ಲಿಯ ಜನರ ಆಶೋತ್ತರಗಳನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಕಡೆಗಣಿಸಿ ಅವರನ್ನು ಬಲಪ್ರಯೋಗದಿಂದಲೇ ಹತ್ತಿಕ್ಕಬಹುದೆಂದು [illegible] ವುದು ಪ್ರಜಾಪ್ರಭುತ್ವವಾದಿ [illegible] ಆಗಿದೆ. ಹೀಗಾಗಿ ಸ್ವಯಂ ಪ್ರೇರಣೆಯಿಂದಲೂ [illegible] ಪ್ರದೇಶಗಳ ಜನ ಸಿಡಿದೇಳುತ್ತಾರೆ.

ಇತ್ತೀಚೆಗೆ ಜರುಗಿದ ಭಾರತದ ವಿಮಾನಾಪಹರಣ ಪ್ರಕರಣ ಹಾಗೂ ನಂತರದ ಘಟನೆಗಳು ಹೊಸ ಮಜಲನ್ನು ತಲುಪಿವೆ. ವಿಮಾನಾಪಹರಣಕಾರರು ನೂರ ಅರವತ್ತು ಮಂದಿಯ ಜೀವವನ್ನು ಆತಂಕಕ್ಕೀಡುಮಾಡಿದ ಪ್ರಕರಣ ತುಂಬಾ ಗಂಭೀರವಾದ್ದು. ಈ ಸಂದರ್ಭದಲ್ಲಿ ಭಾರತ ಸರಕಾರ ನಡೆದುಕೊಂಡ ರೀತಿ, ಅಪಹರಣಕಾರರ ಬೇಡಿಕೆಯನ್ನು ಮನ್ನಿಸಿ ಮೂವರು ಉಗ್ರವಾದಿಗಳನ್ನು ಬಿಡುಗಡೆ ಮಾಡಿದ್ದು ಸಾಕಷ್ಟು ವಾದ ವಿವಾದಗಳಿಗೆಡೆಕೊಟ್ಟಿದೆ. ಒಂದಂತೂ ಸ್ಪಷ್ಟ; ಎಂಥ ಸಂದರ್ಭದಲ್ಲಿಯೇ ಆಗಲಿ ಇಂಥ ಭಯೋತ್ಪಾದಕರೊಂದಿಗೆ ರಾಜಿ ನಿಜಕ್ಕೂ ಅಪಾಯಕಾರಿ, ವಿಪತ್ಕಾರಿ. ಅದು ಸರಕಾರದ ದೌರ್ಬಲ್ಯವನ್ನು, ಅಸಹಾಯಕತೆಯನ್ನು ಪ್ರದರ್ಶಿಸಿತು ಎಂಬುದು ನಿರ್ವಿವಾದ ಸಂಗತಿ.

ಅದೇನೇ ಇರಲಿ, ಈ ಪ್ರಕರಣದಲ್ಲಿ ಅಂತರರಾಷ್ಟ್ರೀಯ ಸಮುದಾಯದ ಪ್ರತಿಕ್ರಿಯೆ ನಿಜಕ್ಕೂ ಕಳವಳಕಾರಿ. ಭಯೋತ್ಪಾದನೆಯ ವಿರುದ್ಧ ಹೋರಾಡಲು ಪಣ ತೊಟ್ಟಿರುವೆನೆಂದು ಹೇಳಿಕೊಳ್ಳುವ ಅಮೆರಿಕಾ ಮತ್ತು ಇತರ ದೇಶಗಳು ಕೇವಲ ಔಪಚಾರಿಕ ಹೇಳಿಕೆಗಳನ್ನು ನೀಡುವುದಷ್ಟಕ್ಕೆ ಸೀಮಿತವಾಗಿದ್ದುವು. ಯಾವುದೇ ಬಗೆಯ ಪರಿಣಾಮಕಾರಿ ಒತ್ತಡವನ್ನು ತರುವ ಗೋಜಿಗೆ ಹೋಗಲಿಲ್ಲ. ವಿಶ್ವಸಂಸ್ಥೆಯ ನಿಷ್ಕ್ರಿಯತೆ ನಿಜಕ್ಕೂ ಆಶ್ಚರ್ಯಕರ. ಪ್ರಾಯಶಃ ಅಮೆರಿಕಾ ಸಕ್ರಿಯವಾದ ಕ್ರಮಕ್ಕೆ ಮುಂದಾಗಿದ್ದರೆ ವಿಶ್ವಸಂಸ್ಥೆ ಭದ್ರತಾ ಮಂಡಲಿಯ ಸಭೆ ಜರುಗುತ್ತಿತ್ತೇನೋ. ಇದು ವಿಶ್ವಸಂಸ್ಥೆಯ ಸ್ಥಿತಿಯನ್ನು ತೋರಿಸುತ್ತದೆ ಏಕಶಕ್ತಿ ಕೇಂದ್ರೀಯ ಜಗತ್ತಿನಲ್ಲಿ.

ಇಂಥ ವಿಮಾನಾಪಹರಣ ಪ್ರಕರಣಗಳು, ಭಯೋತ್ಪಾದನೆಯ ಕೃತ್ಯಗಳು ಅಧಿಕವಾಗುತ್ತಿರುವ ಕಾಲದಲ್ಲಿ ಅವುಗಳ ವಿರುದ್ಧ ಏಕಾಂಗಿಯಾಗಿ ಯಾವುದೇ ದೇಶ ನಡೆಸುವ ಹೋರಾಟ ನಿರೀಕ್ಷಿತ ಫಲ ನೀಡದು. ಇಂದು ಅದಕ್ಕಾಗಿ ಅಂತರರಾಷ್ಟ್ರೀಯವಾಗಿ ಕ್ರಮಗಳನ್ನು ತೆಗೆದುಕೊಳ್ಳುವುದು ಅಗತ್ಯವಾಗಿದೆ. ಒಂದುಗೂಡಿದ, ಸಮಗ್ರವಾದ ನಿರ್ದಾಕ್ಷಿಣ್ಯದ ಧೋರಣೆಯಿಂದ ಎಲ್ಲ ದೇಶಗಳು ಒಟ್ಟಾಗಿ ಅಮಾಯಕ ಜನರನ್ನು ಒತ್ತೆಯಾಳುಗಳಾಗಿ ಮಾಡಿಕೊಳ್ಳುವ ಪ್ರಕರಣಗಳನ್ನು ಎದುರಿಸಬೇಕಾಗಿದೆ. ದುಷ್ಕೃತ್ಯಗಳಲ್ಲಿ ತೊಡಗುವವರಿಗೆ ಬೆಂಬಲ ನೀಡುವ, ಅವರಿಗೆ ಆಶ್ರಯ ನೀಡಿ, ಶಸ್ತ್ರಾಸ್ತ್ರಗಳನ್ನು ಒದಗಿಸುವ ದೇಶಗಳನ್ನು ಖಂಡಿಸಿ, ಅವನ್ನು ಸರಿದಾರಿಗೆ ತರಲು ಅಗತ್ಯವಾದ ಕ್ರಮಗಳನ್ನು ತೆಗೆದುಕೊಳ್ಳುವುದು ಅಂತರರಾಷ್ಟ್ರೀಯ ಸಮುದಾಯದ ಕರ್ತವ್ಯವಾಗಿರುತ್ತದೆ.

ಸೀಯಾರ್ಕೆ
೨೪೯, ೭ನೇ ಕ್ರಾಸ್, ೧ನೇ ಮೇನ್ ಬನಶಂಕರಿ ೩ನೇ ಹಂತ, ೩ನೇ ಫೇಸ್, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು ೮೫

## ಎರಡು ಸೂಫಿ ಕತೆಗಳು

### ಕುರುಡು ಸಿದ್ಧಾಂತದ ಹಿಂದೆ

ಹೆಸರಾಂತ ದೊರೆಯಾದ ಸುಲ್ತಾನ್ ಮಹಮದ್‌ನ ಸವಾರಿಯು ರಾಜಧಾನಿ ಘಾಜ್ನಾ ನಗರದ ರಸ್ತೆಯಲ್ಲಿ ಸಾಗುತ್ತಿತ್ತು. ಹಮಾಲಿಯೊಬ್ಬನು ಬೆನ್ನಿನ ಮೇಲೆ ದೊಡ್ಡ ಗಾತ್ರದ ಕಲ್ಲೊಂದನ್ನು ಹೊತ್ತುಕೊಂಡು ಅದೇ ಮಾರ್ಗದಲ್ಲಿ ಬರುತ್ತಿದ್ದ. ಬೆನ್ನಿನ ಮೇಲೆ ಬೃಹದಾಕಾರವಾಗಿ ಕುಂತಿದ್ದ ಕಲ್ಲಿನ ಭಾರಕ್ಕೆ ಅವನು ತತ್ತರಿಸಿಹೋಗಿದ್ದ. ಹೆಜ್ಜೆಗಳು ಆಯತಪ್ಪಿ ನಡಿಗೆಯು ಅಸ್ಥಿರಗೊಳ್ಳುತ್ತಿತ್ತು. ಸುಲ್ತಾನನಿಗೆ ಅವನ ದುಃಸ್ಥಿತಿಯನ್ನು ನೋಡಲಾಗಲಿಲ್ಲ. ಅನುಕಂಪ ತಳೆದ ಅವನು ಅಧಿಕಾರವಾಣಿಯಿಂದ ಹಮಾಲಿಯನ್ನು ಉದ್ದೇಶಿಸಿ -''ಏ ಹಮಾಲಿ, ಕಲ್ಲನ್ನು ಕೂಡಲೇ ಕೆಳಗೆ ಹಾಕು'' ಎಂದು ಆಜ್ಞಾಪಿಸಿದ.

ಹಮಾಲಿಯು ಕ್ಷಣ ಮಾತ್ರ ಕೂಡ ತಡಮಾಡದೆ ರಾಜಾಜ್ಞೆಯನ್ನು ಪಾಲಿಸಿದ. ವರ್ಷಗಳು ಉರುಳಿದವು. ಕಲ್ಲು ಮಾತ್ರ ಅಲ್ಲೇ ಸ್ಥಿರಗೊಂಡಿತು. ಮಾರ್ಗ ಮಧ್ಯದಲ್ಲಿ ಬಿದ್ದ ಕಲ್ಲು ದಾರಿಹೋಕರಿಗೆ ಅಡ್ಡಿಯುಂಟು ಮಾಡುತ್ತಿದ್ದುದು ಎಲ್ಲರ ಅನುಭವಕ್ಕೂ ಬಂದಿತ್ತು. ಆದರೆ ಯಾರೂ ಅದರ ತಂಟೆಗೆ ಹೋಗಲಿಲ್ಲ. ಕೊನೆಗೊಮ್ಮೆ ನಗರದ ಕೆಲವು ಪ್ರಜೆಗಳು ಸುಲ್ತಾನನ ಬಳಿ ಸಾರಿ ಅದನ್ನು ಬೇರೆಡೆಗೆ ಸಾಗಿಸುವಂತೆ ರಾಜಾಜ್ಞೆ ದಯಪಾಲಿಸಬೇಕೆಂದು ದುಂಬಾಲು ಬಿದ್ದರು.

ಸುಲ್ತಾನನು ಹಲವಾರು ವರ್ಷಗಳ ಆಡಳಿತ ನಡೆಸಿದ ಅನುಭವವಿದ್ದವನು. ವಿವೇಕಯುತ ಆಡಳಿತಗಾರನಾಗಿದ್ದ ಅವನು ಪ್ರಜೆಗಳಿಗೆ ಉತ್ತರ ನೀಡಬೇಕಾದ್ದು ತನ್ನ ಕರ್ತವ್ಯವೆಂದು ಬಗೆದು, ''ಒಮ್ಮೆ ಹೊರಡಿಸಿದ ರಾಜಾಜ್ಞೆಯನ್ನು ಮತ್ತೊಂದು ರಾಜಾಜ್ಞೆ ಹೊರಡಿಸಿ ಮರಳಿ ಪಡೆಯಕೂಡದು. ಸುಲ್ತಾನನು ಮನಸೋ ಇಚ್ಛೆ ಆಜ್ಞೆ ಹೊರಡಿಸುತ್ತಾನೆ ಎಂಬ ಜನಾಭಿಪ್ರಾಯ ಮೂಡುತ್ತದೆ. ಅದು ಸರಿಯಲ್ಲ. ಕಲ್ಲು ಈಗ ಎಲ್ಲಿದೆಯೋ ಅಲ್ಲೇ ಇರಲಿ'' ಎಂದು ಉತ್ತರಿಸಿದ.

ಹೀಗಾಗಿ ಮಹಮ್ಮದನ ಮರಣ ಕಾಲದವರೆಗೂ ಆ ಕಲ್ಲು ಅಲ್ಲೇ ಉಳಿಯುವಂತಾಯ್ತು. ರಾಜಾಜ್ಞೆಗೆ ಅಗೌರವ ತೋರಿಸಿದಂತಾಗುತ್ತದೆ ಎಂಬ ಅಳುಕಿನಿಂದ ನಗರವಾಸಿಗಳು ಸುಲ್ತಾನನ ಮರಣಾನಂತರವೂ ಕಲ್ಲನ್ನು ಆ ಜಾಗದಿಂದ ಕದಲಿಸದಾದರು.

ಕಲ್ಲಿನ ಈ ಕತೆಯು ಜನಜನಿತವೆನಿಸಿಕೊಂಡಿತು.




ಜನರು ತಮ್ಮ ದೃಷ್ಟಿಕೋನಕ್ಕೆ ತಕ್ಕಂತೆ ಕತೆಗೆ ಅರ್ಥ ಹಚ್ಚಲು ತೊಡಗಿದರು. ಹೀಗೆ ಅರ್ಥ ನೀಡಲು ಉದ್ಯುಕ್ತರಾದವರನ್ನು ಮೂರು ಗುಂಪಾಗಿ ವಿಂಗಡಿಸಬಹುದು : ಸುಲ್ತಾನನ ವಿರೋಧಿಗಳದು ಒಂದು ಗುಂಪು. ಪ್ರಜೆಗಳ ವಿರೋಧವನ್ನು ಹತ್ತಿಕ್ಕಿ ಅಧಿಕಾರ-ದರ್ಪಗಳನ್ನು ಚಲಾಯಿಸಿ ಆಡಳಿತವನ್ನು ಸುಸೂತ್ರಗೊಳಿಸಿಕೊಳ್ಳಬೇಕೆಂಬ ಸುಲ್ತಾನನ ಮೂರ್ಖತನಕ್ಕೆ ಹಿಡಿದ ಕನ್ನಡಿಯೇ ಈ ಕತೆ ಎಂಬುದಾಗಿ ಅವರು ಹೇಳತೊಡಗಿದರು. ರಾಜಾಜ್ಞೆಯಿಂದ ಎಷ್ಟೇ ಅನಾನುಕೂಲಗಳುಂಟಾದರೂ ತುಟಿಪಿಟಕ್ಕೆನ್ನದೆ ಅದನ್ನು ಗೌರವಿಸುವುದು ಪ್ರಜೆಗಳ ಕರ್ತವ್ಯ ಎಂದು ನಂಬಿದವರದ್ದು ಇನ್ನೊಂದು ಗುಂಪು. ಯಾವ ವಿಷಯವನ್ನೇ ಆಗಲಿ ಗಂಭೀರವಾಗಿ ಯೋಚಿಸಲು ಅಸಮರ್ಥರಾದ ಈ ಜನ ಸುಲ್ತಾನನನ್ನು ದೇವರೆಂದೇ ಸ್ತುತಿಸತೊಡಗಿದರು.

ಇದಾವುದರಿಂದಲೂ ಪ್ರಭಾವಿತರಾಗದೆ ಉಳಿದವರದ್ದು ಮತ್ತೊಂದು ಗುಂಪು. ಸುಲ್ತಾನನು ತಳೆದ ನಿಲುವಿನ ಹಿಂದೆ ಒಂದು ನೀತಿಪಾಠವು ಅಡಗಿದೆ ಎಂಬುದನ್ನು ಕಂಡುಕೊಳ್ಳುವುದು ಈ ಗುಂಪಿಗೆ ಮಾತ್ರ ಸಾಧ್ಯವಾಯಿತು. ಮಾರ್ಗಮಧ್ಯದಲ್ಲಿ ಕಲ್ಲನ್ನು ಹಾಕುವುದರಿಂದ ದಾರಿಹೋಕರಿಗೆ ಅಡಚಣೆಯುಂಟಾಗುತ್ತದೆ ಎಂಬ ಅರಿವು ಸುಲ್ತಾನನಿಗೆ ಇತ್ತು. ಈ ಅರಿವಿದ್ದರೂ ಹಮಾಲಿಗೆ ಹಾಗೆ ಮಾಡಲು ಆಜ್ಞಾಪಿಸಿದ್ದ. ಅದನ್ನು ಮತ್ತೊಂದು ಕಡೆಗೆ ಸಾಗಿಸಕೂಡದು ಎಂದೂ ಆಜ್ಞಾಪಿಸಿದ್ದ. ತಾನು ತಳೆದ ನಿಲುವಿಗೆ ಒಂದು ಕಾರಣವನ್ನು ನೀಡಿ ಆ ಕಾರಣವನ್ನು ಜನತೆಯಲ್ಲಿ ನಂಬುಗೆಯಾಗಿ ಬೇರೂರಿಸಿದ್ದ. ನಶ್ವರವಾದ ಅಧಿಕಾರಕ್ಕೆ ಜೀಯಾ ಹೇಳಿಕೊಂಡು ಜೀವನ ಸಾಗಿಸುವವರೂ, ಏನೊಂದನ್ನೂ ಪ್ರಶ್ನಿಸದೆ ಕುರುಡು ಸಿದ್ಧಾಂತವನ್ನು ತಬ್ಬಿಕೊಂಡು ಅಧಿಕಾರ ನಡೆಸುವವರೂ ಮನುಕುಲಕ್ಕೆ ಮಹತ್ತಾದ ಯಾವ ಕಾಣಿಕೆಯನ್ನೂ ನೀಡಲಾರರು ಎಂಬ ನೀತಿಪಾಠವು ಈ ಕತೆಯಲ್ಲಡಗಿದೆ. ಸುಲ್ತಾನ್ ಮಹಮ್ಮದನು ಇದನ್ನೇ ಈ ಮೂಲಕ ತಿಳಿಸಿದ್ದಾನೆ ಎಂಬುದನ್ನು ಈ ಗುಂಪು ಕಂಡುಕೊಂಡಿತು.

ಈ ಗುಟ್ಟನ್ನು ಅರಿತವರು ಸತ್ಯಾನ್ವೇಷಿಗಳ ಸಾಲಿಗೆ ಸೇರುತ್ತಾರೆ. ಅಂಥವರು ತಮ್ಮದೇ ಮಾರ್ಗದಲ್ಲಿ ನಡೆದು ಸತ್ಯವನ್ನು ಕಂಡುಕೊಳ್ಳುತ್ತಾರೆ.

*-ಹಸನ್ ವೆಯಜ್ ಕಶೀಫಿ*

### ವಿಜ್ಞಾನದ ಒಗಟು

*ಸುಟ್ಟರೆ ಬೂದಿಯಾಗಲಾರೆ*
*ಮಣ್ಣಿನೊಂದಿಗೆ ಮಣ್ಣಾಗಲಾರೆ*
*ಹುಟ್ಟಿಸಿದಾಗಿನ ಹುರುಪು*
*ಹುಸಿಯಾಗುತ್ತಲಿದೆ!*
*ಮೆಚ್ಚಿ ಕೊಂಡವರೀಗ*
*ಬೆಚ್ಚಿ ಬೀಳುತ್ತಿದ್ದಾರೆ!*
*ಲೋಹಗಳೆಲ್ಲ ಕಂಗೆಟ್ಟವೆ*
*ನಿಮಗಿದೆಯೆ ನನ್ನ ಪರಿಚಯ?*

*- ವೆಂಕಟೇಶ ಹುಣಶೀಕಟ್ಟಿ*

### ಮಹಾನಗರದಲ್ಲೊಬ್ಬ ಮಹಾಮೂರ್ಖ

ನಿದ್ದೆಯಿಂದ ಎಚ್ಚರಗೊಂಡವನು ಯಾವ ಮಗ್ಗುಲಿಗೆ ಏಳಬೇಕು ? ತನಗಿಷ್ಟವಾದ ಮಗ್ಗುಲಿಗೆ ಎದ್ದು ಕೂರಬಹುದು. ಆದರೂ ಸರಿಯೆನಿಸಿಕೊಳ್ಳುವ ಮಗ್ಗುಲೊಂದಿರುತ್ತದೆ. ಅದನ್ನು ಗುರುತಿಸಿಕೊಳ್ಳಬೇಕು. ಹಾಗೆಯೇ ನಿದ್ದೆಯ ಮಂಪರಿಗೆ ಸಿಲುಕಿರುವ ಮನುಷ್ಯನು ಸರಿಯಾದ ಮಾರ್ಗದಲ್ಲಿ ಎಚ್ಚರಗೊಳ್ಳಬೇಕು. ಎಚ್ಚರಗೊಂಡರೂ ಸರಿಯಾದ ಮಾರ್ಗದಲ್ಲಿ ಅರಿವು ಪಡೆಯದ ಮೂರ್ಖರು ಹಲವರಿದ್ದಾರೆ. ಅಂತಹ ಮೂರ್ಖರಲ್ಲೊಬ್ಬನ ಕತೆ ಇದು.

ಒಮ್ಮೆ ಈ ಮೂರ್ಖ ಶಿಖಾಮಣಿಯು ಒಂದು ದೊಡ್ಡ ನಗರಕ್ಕೆ ಬಂದ. ನಗರದ ಯಾವ ಬೀದಿಗಳಲ್ಲಿ ನೋಡಿದರೂ ಜನ ತುಂಬಿ ತುಳುಕಾಡುತ್ತಿತ್ತು. ಜನಸಾಗರವೆಂಬಂತೆ ಇದ್ದ ಈ ನಗರವನ್ನು ಕಂಡು ಅವನು ಕಂಗಾಲಾದ. ಇಂತಹ ನಗರದಲ್ಲಿ ನಿದ್ದೆ ಮಾಡುವುದಾದರೂ ಹೇಗೆ ? ಮತ್ತೆ ಎಚ್ಚರವಾದಾಗ ತನ್ನ ಗುರುತು ತನಗೇ ಸಿಗದಂತಾಗಿಬಿಟ್ಟರೆ ಹೇಗೆ ? ಎಂಬ ಭಯ ಅವನನ್ನು ಕಾಡತೊಡಗಿತು. ಆದ್ದರಿಂದ ಅವನು ತನ್ನ ಗುರುತು ಕಳೆದುಹೋಗದಂತಿರಲಿ

ಎಂದುಕೊಂಡು ಕಾಲಿಗೆ ಒಂದು ಸೋರೆಕಾಯಿ ಕಟ್ಟಿಕೊಂಡು ಮಲಗಿಕೊಂಡ. ಸ್ವಲ್ಪ ಹೊತ್ತಿಗೆ ನಿದ್ದೆ ಆವರಿಸಿತು.

ತುಂಟಾಟಿಕೆಯ ಸ್ವಭಾವದ ಒಬ್ಬ ವ್ಯಕ್ತಿಯು ಈ ಮೂರ್ಖನು ಮಾಡಿದ ಕೆಲಸವನ್ನು ದೂರದಲ್ಲಿ ಕುಳಿತು ಗಮನಿಸುತ್ತಿದ್ದ. ಅವನು ನಿದ್ದೆ ಹೋಗುವವರೆಗೂ ಸುಮ್ಮನಿದ್ದು ಆಮೇಲೆ ಆ ಕಾಯಿಯನ್ನು ಅವನ ಕಾಲಿನಿಂದ ಬಿಚ್ಚಿ ತನ್ನ ಕಾಲಿಗೆ ಕಟ್ಟಿಕೊಂಡು ಮೂರ್ಖನಿಂದ ಸ್ವಲ್ಪವೇ ದೂರದಲ್ಲಿ ಮಲಗಿಕೊಂಡ. ಮೊದಲು ಎಚ್ಚರಗೊಂಡ ಮೂರ್ಖನು ಕಾಲನ್ನು ನೋಡಿಕೊಂಡ. ಕಾಯಿ ಅಲ್ಲಿರದೆ ಸ್ವಲ್ಪದೂರದಲ್ಲಿ ಮಲಗಿದ್ದ ಮತ್ತೊಬ್ಬನ ಕಾಲಿನಲ್ಲಿತ್ತು. ಆ ಮತ್ತೊಬ್ಬನು ತಾನೇ ಇರಬೇಕೆಂದುಕೊಂಡು ತುಸು ಕಾಲ ಸುಮ್ಮನಿದ್ದ. ಕೆಲವು ನಿಮಿಷಗಳ ತರುವಾಯ ಹಾಗಾಗಿರಲಾರದು ಎಂದೆನಿಸಿತು. ಕೂಡಲೇ ಆ ಮೂರ್ಖ ಶಿಖಾಮಣಿಯು ಅವನ ಬಳಿ ಹೋಗಿ ''ನೀನು ನಾನಾಗಿರುವಂತಿದೆ. ಹಾಗಾದರೆ ನಾನು ಯಾರು ? ಈಗ ನಾನು ಎಲ್ಲಿದ್ದೇನೆ? ಹೇಳು, ದೇವರ ಮೇಲಾಣೆ'' ಎಂದು ಎಗರಾಡತೊಡಗಿದ.

**– ಅಬ್ದುರ್ ರೆಹಮಾನ್ ಜಾಮಿ**

**ಕನ್ನಡಕ್ಕೆ : ಬಿ. ಗಂಗಾಧರ ಮೂರ್ತಿ**
ಎ ೬೦೯, 'ಪಲ್ಲವಿ', ಕುವೆಂಪು ನಗರ, ಗೌರಿಬಿದನೂರು - ೫೬೧ ೨೦೮

## ಪ್ರಕೃತಿ



ಈ ಪ್ರಕೃತಿಯೇ ಕೊಟ್ಟಿರುವುದು
ನಮಗೆ ಮರ
ಇದುವೇ ನಮ್ಮ ಜೀವನದ
ಮುಖ್ಯ ಆಧಾರ

ಇದನು ಕಡಿದರೆ ಮಾನವ ಕುಲಕೆ
ಒಂದು ದೊಡ್ಡ ಧಕ್ಕೆ
ಆಗಲೇ ನಮ್ಮ ಮರಣದ
ದಿಕ್ಸೂಚಿ ಚುಕ್ಕೆ

ಕಡಿಯಬೇಡಿರೋ ಮರಗಳನು
ಕಡಿಯಬೇಡಿರಿ
ನಿಮ್ಮ ಮರಣದಿಂದ ನೀವು
ದೂರ ಉಳಿಯಿರಿ

ಮರ ಕಡಿವ ಕೆಲಸಕೆ
ಕೈ ತೊಳೆಯಿರಿ
ಮರಗಳ ಸಂರಕ್ಷಣೆಗೆ
ಕೈಕೂಡಿಸಿರಿ

**ಸಿದ್ರಾಮಪ್ಪ ದಂಡೆ**
(೭ನೇ ತರಗತಿ), 'ತೇಜಸ್ವಿನಿ' ಸರಸ್ವತಿಪುರ, ವಿಶ್ವವಿದ್ಯಾಲಯ
ಅಂಚೆ, ಕಲಬುರ್ಗಿ - ೫೮೫ ೧೦೬

## ಜನವರಿ ಸಂಚಿಕೆಯ 'ಪದ ಹೊಸೆತ' ಕ್ಕೆ ಸರಿಯುತ್ತರ

| | | | | | | | | |
|---|---|---|---|---|---|---|---|---|
| ಆ | ದಿ | ಕ | ವಿ | ■ | ಕ | ಸ್ತ್ರೋ | ರ | ಬಾ |
| ಜಾ | ■ | ■ | ವೇ | ■ | ಲ್ಪ | ■ | ■ | ಗಿ |
| ದ್ | ■ | ಪ್ರ | ಕಾ | ಶ | ನಾ | ರಾ | ಯ | ಣ |
| ಓಂ | ಸೆ | ■ | ನಂ | ■ | ■ | ಮೇ | ■ | ■ |
| ದ್ | ■ | ■ | ದ | ಕ್ಷಿ | ಣೇ | ಶ್ವ | ರ | ■ |
| ಫೌ | ಸ್ಟ್ | ■ | ■ | ■ | ■ | ರ | ■ | ಐ |
| ಜ್ | ■ | ಬೆ | ರ | ಗು | ■ | ಲಿಂ | ಗೈ | ಕ್ಯ |
| ■ | ■ | ಳ | ■ | ಜ | ನಾಂ | ಗ | ■ | ಭಾ |
| ಕ | ನ್ಯಾ | ಕು | ಮಾ | ರಿ | ■ | ■ | ಜೀ | ವ |

## ಹೊಸತು ಪದ ಹೊಸೆತ

| | | | | | | | | |
|---|---|---|---|---|---|---|---|---|
| 1 | | | 2 | | | 3 | | 4 |
| ■ | ■ | ■ | | ■ | ■ | | ■ | |
| 5 | | | | | ■ | 6 | | |
| | ■ | ■ | | ■ | ■ | | ■ | |
| | ■ | 7 | | ■ | 8 | ■ | 9 | |
| | ■ | ■ | 10 | | | | | ■ |
| 11 | | 12 | | ■ | | ■ | 13 | |
| | ■ | | ■ | ■ | 14 | | | ■ |
| ■ | ■ | 15 | | | | ■ | 16 | |

**ಅಡ್ಡ**

1. ಲಂಬ 5 ರಲ್ಲಿರುವವರೇ ಕಾರಾಗೃಹದಲ್ಲಿದ್ದಾಗ ಬರೆದ ಈ ಗ್ರಂಥ 'ಲೆಕ್ಕ, ಭೌತ, ರಸಾಯನ ಶಾಸ್ತ್ರಗಳಿಗೆ ದ್ವಾರ'.
5 ರಾಜಕುಮಾರಿ ಚಿತ್ರಾಂಗದೆಯಲ್ಲಿ ಅರ್ಜುನನಿಗೆ ಹುಟ್ಟಿದ ಮಗ
6 ಮುದ್ದಣ - ಮನೋರಮೆಯರ ಸರಸವಾದ ಮಾತುಕತೆ
7 ಅಲ್ಲವೇ, ಇನ್ನೂ ಅಮಲು!
9 ದೇಶ, ಗ್ರಾಮ, ಕಟ್ಟಡಗಳ ರೂಪರೇಷೆ
10 ಕಡೆದ ಮೊಸರು ಜಲಮಯವಾಗಿ ತೆಳ್ಳಗಾಗಿದೆ
11 ವಿದ್ಯಾಧಿದೇವತೆ
13 ಸಿನಿಮಾ ರಂಗದಲ್ಲಿ ಕಂಡುಬಂದ 'ಕ್ಷಾಮ'
14 ಅಚ್ಚಗನ್ನಡದಲ್ಲಿ 'ಬೆಡ್‌ರೂಮು'
15 ಕರ್ನಾಟಕದಲ್ಲಿರುವ 'ಮಧುಚಂದ್ರ' ಲಂಡನ್‌ನಲ್ಲಿ ಏನಾಗುತ್ತದೆ?
16 ತಿಲಕರು ಹೇಳಿದಂತೆ 'ಭಾರತ ನನ್ನ ಜನ್ಮ ಸಿದ್ಧ' ವಾದದ್ದೇನು?

**ಲಂಬ**

2 ಲಂಬ 5ರಲ್ಲಿರುವ ಕ್ರಾಂತಿಕಾರಕ ವ್ಯಕ್ತಿಯ ಒಂದು ಕೃತಿ
3 ಇದರ ಪಿತಾಮಹನೇ ಕೈಲಾಸಂ
4 ಮರಣಾನಂತರ ಸಾವಿಗೆ ಕಾರಣ ಕಂಡುಹಿಡಿಯುವುದು
5 ತನ್ನ ಎಂಭತ್ತನೇ ವಯಸ್ಸಿನಲ್ಲೂ ಮರುಮದುವೆಯಾದ ಇಪ್ಪತ್ತನೇ ಶತಮಾನದ ತತ್ವಜ್ಞಾನಿ (ಪಾಶ್ಚಿಮಾತ್ಯ)
8 ದೀನ ದಲಿತರ ಬಗ್ಗೆ ಕಾಳಜಿ ಹೊಂದಿರುವ, 1999 ರಲ್ಲಿ ನೊಬೆಲ್ ಪ್ರಶಸ್ತಿ ಪಡೆದ ಅರ್ಥಶಾಸ್ತ್ರಜ್ಞ
9 ಒಂದು 'ಬಗೆ'ಯಲ್ಲಿ 'ಹರ' ಮೇಲೇರುತ್ತಾ ಕೆಳಗಿಳಿಸಿದ ಹಾಸ್ಯ ಲೇಖನವಿದು!
12 ತನ್ನದೇ ಆದ ಮನೆ

ಜಿ. ಮಲ್ಲಿಕಾರ್ಜುನ,
ಘಂಟಾಚಾರ್ಯರು, ಸಿರಿಗೆರೆ- ೫೭೭ ೫೪೧, ಚಿತ್ರದುರ್ಗ ಜಿಲ್ಲೆ

## ಜನವರಿ ತಿಂಗಳ ಪ್ರಶ್ನೆಗೆ ಉತ್ತರ

ವಾಚಸ್ಪತಿ ಮಿಶ್ರ ಮತ್ತು ಶಂಕರ ಮಿಶ್ರರನ್ನು ಕ್ರಮವಾಗಿ 'ವ' ಮತ್ತು 'ಶ' ಎಂದು ಗುರುತಿಸೋಣ. 'ಪಂಡಿತರೇ ನೀವೆಷ್ಟು ಕೃತಿಗಳನ್ನು ರಚಿಸಿದ್ದೀರಿ ?' ಎಂಬ ಪ್ರಶ್ನೆ 'ವ'ರಿಂದ ಕೇಳಲು ಆರಂಭವಾಗಿ 'ವ' ಮತ್ತು 'ಶ'ರಿಂದ ಪರ್ಯಾಯವಾಗಿ ಎಂಟು ಬಾರಿ ಪುನರಾವರ್ತನೆಯಾಯಿತು. ಪ್ರಶ್ನೆಯನ್ನು ಕೇಳಿದ ಸರದಿಗನುಗುಣವಾಗಿ ಅವನ್ನು ಸಂಖ್ಯೆ ಒಂದರಿಂದ ಎಂಟರವರೆಗೆ ನೊಂದಾಯಿಸಿಕೊಳ್ಳೋಣ. ಒಂದೇ ಪ್ರಶ್ನೆ ಪುನರಾವರ್ತನೆಗೊಂಡಾಗ್ಯೂ, ಪ್ರತಿಬಾರಿ ಕೇಳಿದಾಗಲೂ 'ವ' ಮತ್ತು 'ಶ'ಗಳು ರಚಿಸಿದ ಕೃತಿಗಳ ಸಂಖ್ಯೆಯ ಬಗೆಗೆ ನಕಾರಾತ್ಮಕವಾದ ಮಾಹಿತಿ ದೊರಕುತ್ತಾ ಹೋಗಿ 'ಸಂವಾದ' ಮುಗಿಯುವ ಹೊತ್ತಿಗೆ ನಕಾರಾತ್ಮಕ ಮಾಹಿತಿಗಳ ಕ್ರೋಢೀಕರಣದ ಫಲ ಸಕಾರಾತ್ಮಕ ಮಾಹಿತಿಯಾಗಿ ಲಭಿಸುತ್ತದೆ. ಅಂತೆಯೇ 'ಶ'ರ ಕೃತಿಗಳು ೫ ಎಂದೂ, ಆದರೆ 'ವ' ರ ಕೃತಿಗಳು ೪ ಅಥವಾ ೫ ಎಂದೂ ಭಾಗಶಃ ಉತ್ತರ ದೊರೆಯುತ್ತದೆ. ಇದನ್ನು ಮುಂದಿನ ಪಟ್ಟಿಯಿಂದ ತಿಳಿಯಬಹುದು. ('ವ' ಮತ್ತು 'ಶ' ಗಳು ತರ್ಕಶಾಸ್ತ್ರ ಪಂಡಿತರೆಂದು ಜ್ಞಾಪಿಸಿಕೊಳ್ಳಿ !)

| ಪ್ರ. ಸಂಖ್ಯೆ | ಪ್ರಶ್ನೆ ಕೇಳಿದವರು | ಪ್ರಶ್ನೆ ಕೇಳಿದವರ ಕೃತಿಗಳ ಸಂಖ್ಯೆಯ ಬಗ್ಗೆ ನಕಾರಾತ್ಮಕ ಮಾಹಿತಿ |
|---|---|---|
| ೧ | ವ | ೯ ಅಲ್ಲ |
| ೨ | ಶ | ೯ ಮತ್ತು ೧ ಅಲ್ಲ |
| ೩ | ವ | ೮ ಮತ್ತು ೧ ಅಲ್ಲ |
| ೪ | ಶ | ೮ ಮತ್ತು ೨ ಅಲ್ಲ |
| ೫ | ವ | ೭ ಮತ್ತು ೨ ಅಲ್ಲ |
| ೬ | ಶ | ೭ ಮತ್ತು ೩. ಅಲ್ಲ |
| ೭ | ವ | ೬ ಮತ್ತು ೩ ಅಲ್ಲ |
| ೮ | ಶ | ೬ ಮತ್ತು ೪ ಅಲ್ಲ |

ಗುರುಗಳು 'ಶ'ರನ್ನು ಪ್ರತ್ಯೇಕವಾಗಿ ಕರೆದು ಕೊಟ್ಟ ಮಾಹಿತಿಯಿಂದ 'ವ'ರ ಕೃತಿಗಳ ಸಂಖ್ಯೆ ೪ ಎಂದು ಸ್ಪಷ್ಟವಾಯಿತು.

## ಈ ತಿಂಗಳ ಹೊಸ ಪ್ರಶ್ನೆ

ಕರ್ನಾಟಕ ದೇಶದ ಅರಸು ಸೌಗಂಧಿಕಾರಾಯನು ಕಳಿಂಗ ದೇಶದ ರಾಜಕುಮಾರಿ ಸೌಗಂಧಿಕಾ ದೇವಿಯಂ ಸ್ವಯಂವರದೊಳ್ ಜಯಿಸಲು ಪೋದಾಗ, ಆ ಕುಮಾರಿಯು ದಿನ ದಿನದೊಳೆ ಹನ್ನೆರಡು ಭಾರ ಸುವರ್ಣವಂ ಕೊಡುವ 'ಚಿಂತಾಮಣಿ'ಯನ್ನು ಯಾವ ರಾಜಕುಮಾರನು ಪಣವಾಗಿ ತಂದೀವನೋ ಆತನನ್ನೇ ವರಿಸುವೆನೆಂದು ಪಣತೊಟ್ಟಳ್. ಚಿಂತಾಮಣಿಯನ್ನು ಪಡೆದು ರಾಜಕುಮಾರಿಯನ್ನು ವರಿಸುವುದೆಂತೆಂದು ಅರಸನು ಚಿಂತಿಸುತ್ತಿರಲು ದೇವಲೋಕದಲ್ಲಿರುವ ರಾಯನ ಮಿತ್ರ ದೇವೇಂದ್ರನಿಂದ ಪ್ರೇರೇಪಿಸಲ್ಪಟ್ಟ ಲೀಲಾಶುಕವು ಪ್ರತ್ಯಕ್ಷವಾಗಿ ಅರಸನನ್ನು ಕುರಿತು ಇಂತೆಂದಿತು:

'ಎಲೈ ರಾಯನೆ, ನೀನು ಅಪೇಕ್ಷಿಸಿರುವ ಮಣಿಯು ಉಗ್ರಬಾಹುವೆಂಬ ರಾಕ್ಷಸನ ಬಳಿಯಿದೆ. ಕಾಮರೂಪಿಯಾದ ರಾಕ್ಷಸನು ಇಂದಿನ ದಿನಗಳಲ್ಲಿ ಕಪಿಶಾ ನದಿಯ ನಡುವೆ ಇರುವ ಪ್ಲಕ್ಷ ದ್ವೀಪಗಳ ರೂಪವನ್ನು ಧರಿಸಿ ತನ್ನ ಅಂಗಾಂಗಗಳನ್ನೆಲ್ಲ ಏಳು ಸೇತುಗಳಂತೆ ಮಾರ್ಪಡಿಸಿಕೊಂಡು ಗಾಢನಿದ್ರೆಯಲ್ಲಿದ್ದಾನೆ.'

ರಾಕ್ಷಸನನ್ನು ವಧಿಸುವುದೆಂತೆಂದು ರಾಯನು ಶುಕವನ್ನು ಕೇಳಲಾಗಿ ಶುಕವು ಮುಂದುವರಿದು,

'ಅದು ಸುಲಭ. ನದಿಯ ದಡ ಅಥವಾ ದ್ವೀಪವೆಂಬಂತೆ ಎಲ್ಲಿಂದಲಾದರೂ ಆರಂಭಿಸಿ ಪಾದಚಾರಿಯಾಗಿ ಸೇತುಗಳನ್ನು ಕ್ರಮಿಸುತ್ತಿದ್ದಂತೆ ಆಯಾ ಸೇತುಗಳು ಉರಿದು ಭಸ್ಮಗೊಳ್ಳುವುವು. ಎಲ್ಲ ಸೇತುಗಳನ್ನು ಬಿಡದೆ ಒಂದಾದಮೇಲೊಂದರಂತೆ ಭಸ್ಮಗೊಳಿಸಿದರೆ ರಾಕ್ಷಸನ ವಧೆಯಾಗಿ ಚಿಂತಾಮಣಿಯು ನಿನ್ನ ವಶವಾಗುವುದು. ಆದರೆ ನೆನಪಿಡು ! ಒಮ್ಮೆ ಸೇತು ಕ್ರಮಣವನ್ನು ಆರಂಭಿಸಿದ ಮೇಲೆ ನದಿಯನ್ನು ದಾಟಲು ಸೇತುಗಳನ್ನಲ್ಲದೆ ಬೇರೆ ಯಾವುದೇ ಕ್ರಮವನ್ನನುಸರಿಸಿದರೆ ರಾಕ್ಷಸನ ನಿದ್ರಾಭಂಗವಾಗಿ ನಿನ್ನನ್ನು ಸಂಹರಿಸುವನು' ಎಂದಿತು.

ದ್ವೀಪ ೧

ದ್ವೀಪ ೨

ದಡ

ಸೌಗಂಧಿರಾಯನು ಶುಕಕ್ಕೆ ನಮಿಸಿ ಪ್ಲಕ್ಷ ದ್ವೀಪಗಳ ವರ್ಣನೆಯಂ ಮಾಡೆಂದು ಪ್ರಾರ್ಥಿಸಲಾಗಿ ಆ ಶುಕನು ಏಳು ಸೇತುವೆಗಳನ್ನೊಳಗೊಂಡ ಪ್ಲಕ್ಷ ದ್ವೀಪ ವರ್ಣನೆಯಂ ಮಾಡಿ ರಾಯನನ್ನು ಹರಸಿ ಮಾಯವಾಯಿತು. ತದನಂತರ ರಾಯನು ಶುಕದ ವರ್ಣನೆಯನ್ನಾಧರಿಸಿ ದ್ವೀಪದ ನಕ್ಷೆಯಂ ಬಿಡಿಸಿ ರಾಕ್ಷಸ ಸಂಹಾರ ಮಾಡುವುದೆಂತೆಂದು ಧ್ಯಾನಿಸತೊಡಗಿದನು.

ಕುಶಾಗ್ರಮತಿಗಳಾದ ನಮ್ಮ ಪ್ರಿಯ ವಾಚಕರಿಗಾಗಿ ರಾಯನು ಬಿಡಿಸಿದ ನಕ್ಷೆಯನ್ನು ನಾವು ಇಲ್ಲಿ ಪ್ರಕಟಗೊಳಿಸುತ್ತಿದ್ದೇವೆ. ನಕ್ಷೆಯನ್ನು ಧ್ಯಾನಿಸಿ ನೋಡಿ ರಾಯನು ಸೌಗಂಧಿಕಾದೇವಿಯನ್ನು ವರಿಸಿದನೇ ಇಲ್ಲವೇ ಎಂಬುದನ್ನು ಗ್ರಹಿಸಬೇಕು ಎಂದು ವಿನಂತಿಸಿಕೊಳ್ಳುತ್ತೇವೆ.

ನಾಡಿಗ ದರ್ಶಿನಿ



# ಪ್ರಳಯ ಭೀತಿ

ವೆಂಕಟಯ್ಯ ಅಪ್ಪಗೆರೆ

ಬಹುತೇಕ ಪ್ರಸಾರ ಮಾಧ್ಯಮಗಳು ಜನಮನದಲ್ಲಿ ಕುತೂಹಲ ಕೆರಳಿಸುವ ರೋಚಕ ಸುದ್ದಿಗಳನ್ನು ಬೀಭತ್ಸ ಗೊಳಿಸಿ ವರದಿ ಮಾಡುತ್ತವೆ. ಅದರಿಂದ ಪ್ರಸಾರಗಳಿಕೆ ಯನ್ನು ಹೆಚ್ಚಿಸಿಕೊಳ್ಳುವುದೇ ಅವುಗಳ ಮುಖ್ಯ ಧ್ಯೇಯ. ಅದರಿಂದ ಜನರ ಮನಸ್ಸಿನಲ್ಲಿ ಉಂಟಾಗುವ ಭೀತಿ, ಕೋಲಾಹಲದ ಪರಿಣಾಮದ ಬಗ್ಗೆ ಅವು ಸ್ವಲ್ಪವೂ ಲೆಕ್ಕಿಸುವುದಿಲ್ಲ. ಸಾಮಾನ್ಯ ಘಟನೆಗಳನ್ನು ವಾಸ್ತವೀಕರಿಸದೆ ದೈವೀಕರಿಸುವುದು, ವೈಜ್ಞಾನಿಕ ಘಟನೆಗಳನ್ನು ಪವಾಡ ವೆಂದು ವೈಭವೀಕರಿಸುವುದು ಇವುಗಳ ತಂತ್ರಗಳಾಗಿವೆ.

ಕೈಚಳಕದ ಯಕ್ಷಿಣಿ, ಜಾದೂ ಕಲೆಗಳನ್ನು ಕೆಲವರು ಪ್ರಚಾರಕ್ಕಾಗಿ, ಹಣಕ್ಕಾಗಿ, ಪವಾಡದ ಹೆಸರಿನಲ್ಲಿ, ದೈವೀಶಕ್ತಿ, ನಿಸರ್ಗಾತೀತ ಶಕ್ತಿ ಎಂದೆಲ್ಲಾ ಹೇಳಿ ಗೊಂದಲ ಸೃಷ್ಟಿಸುತ್ತಾರೆ. ಅಮಾಯಕರು ಅವುಗಳನ್ನು ಸುಲಭವಾಗಿ ನಂಬುತ್ತಾರೆ. ಸಾಮೂಹಿಕ ಸನ್ನಿಗೆ ಒಳಗಾಗುತ್ತಾರೆ. ವಿಶ್ವದಾದ್ಯಂತ ವಿಹ್ವಲತೆ ಉಂಟಾಗುತ್ತದೆ. ಈ ಕಳವಳಕಾರಿ ಸಂದರ್ಭವನ್ನು ವಿವಿಧ ರೀತಿಯಲ್ಲಿ ದುರ್ಬಳಕೆ ಮಾಡಿಕೊಳ್ಳುವ ಜನರಿದ್ದಾರೆ.

೧೯೧೦ರಲ್ಲಿ ಕಾಣಿಸಿಕೊಂಡ ಹ್ಯಾಲೇ ಧೂಮಕೇತು ವಿನಿಂದ ಯುಗದ ಅಂತ್ಯ, ಸಂಪೂರ್ಣ ವಿನಾಶದ ಸೂಚನೆ ಎಂದು ಬಣ್ಣಿಸಿ ಎಲ್ಲೆಡೆ ಭಯ ಹರಡಿದ್ದರು. ಬದುಕುಳಿಯಲು ಧೂಮಕೇತು ಗುಳಿಗೆಗಳನ್ನು ಮಾರುಕಟ್ಟೆಗೆ ತಂದು ಯಥೇಚ್ಛ ಹಣ ಸಂಪಾದಿಸಿದರು. ಮುಂದಿನ ೭೬ ವರ್ಷಗಳಲ್ಲೇ ಮತ್ತೊಮ್ಮೆ ೧೯೮೬ರಲ್ಲಿ ಅದೇ ಹ್ಯಾಲೇ ಧೂಮಕೇತು ಖಗೋಳ ಶಾಸ್ತ್ರಜ್ಞರ ನಿರೀಕ್ಷೆಯಂತೆ ಕಾಣಿಸಿಕೊಂಡಿತು. ಸಂಪೂರ್ಣ ವಿನಾಶವೂ ಇಲ್ಲ, ಮಾನವ ಜನಾಂಗದ ಅಂತ್ಯವೂ ಸಂಭವಿಸಲಿಲ್ಲ.

ಇಲ್ಲಿ ಜ್ಯೋತಿಷಿಗಳ ಒಂದು ಬುದ್ಧಿವಂತಿಕೆಯಿದೆ. ಆಗಿಂದಾಗ್ಗೆ ಪ್ರಕಟಗೊಳ್ಳುವ, ಅಂದರೆ ೩ ವರ್ಷ ೩ ತಿಂಗಳಿಗೊಮ್ಮೆ ಸಂಭವಿಸುವ ಧೂಮಕೇತುಗಳ (ಯಂಕೆ, ಇಕಿಯಾ ಸೇಕಿ) ಬಗ್ಗೆ ಉದ್ದೇಶಪೂರ್ವಕವಾಗಿಯೇ ಹೆಚ್ಚಿನ ಭವಿಷ್ಯ ನುಡಿದಿಲ್ಲ. ಕಾರಣ ಅವರ ಭವಿಷ್ಯದ ಪೊಳ್ಳು ಬೇಗ ಬಯಲಿಗೆ ಬರುತ್ತದೆ ಎಂಬ ಭಯ.

ಮನಃಶಕ್ತಿಯಿಂದ ಚಮಚಗಳನ್ನು ಬಗ್ಗಿಸುವ ಯೂರಿ ಗೆಲ್ಲರ್‌ನ ಸುದ್ದಿ ಪ್ರಸಾರ ಮಾಧ್ಯಮದಲ್ಲಿ ಬಹುದಿನ ಪ್ರಚಾರ ಪಡೆಯಿತು.

ಸೌದಿ ಅರೇಬಿಯಾದ ಪ್ರದೇಶವೊಂದರಲ್ಲಿ ಏಸು ಕ್ರಿಸ್ತನ ಚಿತ್ರವೊಂದು ಮೋಡಗಳ ವಿನ್ಯಾಸದಲ್ಲಿ ಕಾಣಿಸಿಕೊಂಡ ಸುದ್ದಿ ಕಾಳ್ಗಿಚ್ಚಿನಂತೆ ಹಬ್ಬಿತು. ಸತ್ತವರೊಡನೆ ಸಂಭಾಷಿಸುವ ಸುದ್ದಿ ೧೯೪೧ರಲ್ಲಿ ಜಾಫ್ನಾದಿಂದ ಹೊರಟು ರೆಕ್ಕೆ ಪುಕ್ಕಗಳನ್ನು ಸೃಷ್ಟಿಸಿಕೊಂಡು ವಿಶ್ವದ ವಿಸ್ಮಯ ಸುದ್ದಿಯಾಯಿತು. ೧೯೯೨ರಲ್ಲಿ ಆತ್ಮದ ಫೋಟೋವನ್ನು ಕ್ಯಾಮೆರಾ ತಂತ್ರಗಾರಿಕೆಯಿಂದ ಸೃಷ್ಟಿಸಿದ್ದು ಸುದೀರ್ಘ ವಿವಾದ-ಚರ್ಚೆಗೆ ಗುರಿಯಾಯಿತು. ಕನ್ನಡದ ಕೆಲವು ಪತ್ರಿಕೆಗಳೂ ಅವು ನಿಜವೆಂದು ಚಿತ್ರಸಹಿತವಾಗಿ ವರದಿ ಮಾಡಿದವು. ತದನಂತರದಲ್ಲಿ ಅದು ಸುಳ್ಳೆಂದು, ಕ್ಯಾಮರಾದವನು ವಿಶ್ವ ಪ್ರಚಾರಕ್ಕಾಗಿ ಮಾಡಿದ ಚಮತ್ಕಾರವೆಂದು ಬಯಲಿಗೆಳೆದ 'ಎನ್‌ಕ್ವೈರರ್' ಪತ್ರಿಕೆಯ ವರದಿಯನ್ನು ಹಿಂದೆ ನಿಜವೆಂದು ಬರೆದ ಪತ್ರಿಕೆಗಳು ಉದ್ದೇಶಪೂರ್ವಕವಾಗಿ ಪ್ರಕಟಿಸಲಿಲ್ಲ.

೧೯೯೫ರಲ್ಲಿ ಗಣೇಶ ವಿಗ್ರಹಗಳು ಹಾಲು ಕುಡಿಯುತ್ತ ವೆಂಬ ವದಂತಿಯನ್ನು ರಾಷ್ಟ್ರವ್ಯಾಪಿ ಹಬ್ಬಿಸಿ ಜನಸಮು ದಾಯವನ್ನು ದಿಕ್ಕೆಡಿಸಿದರು. ಸಚಿತ್ರ ಲೇಖನಗಳಾಗಿ ಮುಖಪುಟದಲ್ಲಿ ಎಲ್ಲಾ ಪತ್ರಿಕೆಗಳೂ ಪ್ರಕಟಿಸಿದವು. ಕೆಲವು ದಿನಗಳವರೆಗೆ ಎಷ್ಟೇ ನಿಖರ ವೈಜ್ಞಾನಿಕ ಕಾರಣ ನೀಡಿದರೂ ಜನರು ಆ ಕಡೆ ಲಕ್ಷ್ಯವಿಡಲಿಲ್ಲ. ಅಷ್ಟೊಂದು ಮೋಡಿ ಮಾಡಿತ್ತು ಆ ಸಮೂಹ ಸನ್ನಿ.

ಕಳೆದ ವರ್ಷ ಪ್ರಳಯದ ಭೀತಿಯನ್ನೆಬ್ಬಿಸಿ ಕೋಲಾಹಲವುಂಟುಮಾಡಿದರು. ಕನ್ನಡದ ವಾರಪತ್ರಿಕೆ ಯೊಂದು ಅದನ್ನು ಅತ್ಯಂತ ರೋಚಕವಾಗಿ ಆಧಾರ ಸಮೇತವಾಗಿ ವೈಜ್ಞಾನಿಕ ಸಿದ್ಧವೆಂಬಂತೆ ಜನರನ್ನು ತಲ್ಲಣಗೊಳಿಸಿತು. ಎಲ್ಲೆಲ್ಲೂ ಪ್ರಳಯದ ಸುದ್ದಿಯೇ. ದಿನಾಂಕ ೯-೯-೧೯೯೯ರಂದು ಪ್ರಳಯ ಖಂಡಿತ ಜರುಗಿ ಇಡೀ ಜೀವಕೋಟಿ ನಾಮಾವಶೇಷವಾಗುವುದೆಂದು ಉದ್ಘೋಷಿಸಲಾಗಿತ್ತು. ಆದರೆ ಈಗ ಆ ಸುದ್ದಿಯ ಪ್ರಸ್ತಾಪವಿಲ್ಲ. ಕಾರಣ ಆ ರೋಚಕ ಸುದ್ದಿಯ ಬಣ್ಣ ಬಯಲಾಯಿತು. ಅದಕ್ಕೆಂದೇ ಈಗ ಪ್ರಳಯದ ಭೀತಿಯನ್ನು ಬೇರೆ ದಿನಾಂಕಕ್ಕೆ ವರ್ಗಾಯಿಸುವ ಹುನ್ನಾರ ನಡೆಯುತ್ತಿದೆ. ಕುತ್ಸಿತ ಮನೋಭಾವದ ಪತ್ರಿಕೆಗಳು ಅಂತಹ ಸುದ್ದಿಯನ್ನು ಪ್ರಕಟಿಸಿ ಜನರಲ್ಲಿ ಕೋಲಾಹಲ ಉಂಟುಮಾಡುವ ಮೊದಲೇ ಈ ಬಗ್ಗೆ ಜನರು ಮುನ್ನೆಚ್ಚರಿಕೆ ವಹಿಸಬೇಕು.

> ಪ್ರಣಯದ ಕತೆಯಷ್ಟೇ ರೋಚಕವಾಗಿ ಪ್ರಳಯ ಕಥೆಗಳನ್ನೂ ಹೊಸೆದು ಹಣ ಸೂರೆಮಾಡುವ ಮಂದಿ ನಮ್ಮಲ್ಲಿ ವಿರಳವೇನಲ್ಲ. ಹಿಂದಿನ ಅನೇಕ ಪ್ರಳಯ ಭೀತಿಗಳು ಹುಸಿಯಾಗಿವೆಯಾದರೂ ಹೊಸ ಹೊಸ ಭೀತಿಗಳನ್ನು ಸೃಷ್ಟಿಸುವ ತಜ್ಞರಿದ್ದಾರೆ. ಅವರ ತಂತ್ರಕ್ಕೆ ಬಲಿಯಾಗುವ ಅಜ್ಞರಿಲ್ಲದಿದ್ದರೆ ಅವರ ವ್ಯಾಪಾರ ಕುಸಿಯುತ್ತದೆ. ಇನ್ನೈದು ತಿಂಗಳಲ್ಲಿ ಮತ್ತೆ ಪ್ರಳಯವೆಂದು ಬೆದರಿದ್ದೀರಾ ? ಹಾಗಿದ್ದರೆ ಈ ಲೇಖನವನ್ನು ಓದಿ ನೆಮ್ಮದಿ ಪಡೆಯಿರಿ.

ದಿನಾಂಕ ೫-೫-೨೦೦೦ದಂದು ಭೂಮಿಯ ಸರ್ವನಾಶವೆಂಬ ಹೊಸ ಭೀತಿಯನ್ನು ಪ್ರಪಂಚಾದ್ಯಂತ ಬಿತ್ತಲು ಪ್ರಾರಂಭಿಸಲಾಗಿದೆ. ಈ ಹುನ್ನಾರದಲ್ಲಿ ಅನೇಕ ರೀತಿಯ ರೌದ್ರಮಯ ಸನ್ನಿವೇಶಗಳನ್ನು ಸೃಷ್ಟಿಸಿ ಪ್ರಳಯದ ಭಯಾನಕತೆಯನ್ನು ಈಗಾಗಲೇ ಹರಡಲು ವಿವಿಧ ಪ್ರಸಾರ ಮಾಧ್ಯಮಗಳು ತೊಡಗಿವೆ. ಈ ವಿನೂತನ, ಕೌತುಕಮಯ ಪ್ರಳಯ ಪ್ರಸಾರಕ್ಕೆ ವೆಬ್‌ಸೈಟ್ ಜಾಲದ ಹೊಸ ಸೇರ್ಪಡೆಯಾಗಿದೆ. ವಿದೇಶಗಳಲ್ಲಿ ಈಗಾಗಲೇ ವೆಬ್‌ಸೈಟ್ ಮೂಲಕ ಹಾಗೂ ತರಹೇವಾರೀ ಪುಸ್ತಕಗಳನ್ನು ಪ್ರಕಟಿಸಿ ಮಾರಾಟ ಮಾಡುವ ಮೂಲಕ ಈ ವಿನಾಶದ ಭೀತಿಯನ್ನು ಜನಮನದಲ್ಲಿ ಬಿತ್ತುವ ಸಂಚು ವಿಶ್ವವ್ಯಾಪಿಯಾಗುತ್ತಿದೆ. ಧನದಾಹಿ ಪತ್ರಿಕೆಗಳು, ಟಿ. ವಿ. ಚಾನೆಲ್‌ಗಳು, ವೆಬ್‌ಸೈಟ್ ಜಾಲ ಮತ್ತು ಕೆಲವು ಪುಸ್ತಕ ಮಾರಾಟಗಾರರ ವ್ಯಾಪಾರಿ ಸಂಚು ಇದಾಗಿದೆ.

ಏನು ಈ ೫-೫-೨೦೦೦ ದಿನದ ಮಹತ್ವ ? ಅಂತಹ ವಿಸ್ಮಯಕಾರಿ ಘಟನೆ ಸಂಭವಿಸುವುದಾದರೂ ಏನು ?

ದಿನಾಂಕ ೫-೫-೨೦೦೦ದಂದು ಸೌರವ್ಯೂಹದ ನವಗ್ರಹಗಳಲ್ಲಿ ಆರು ಗ್ರಹಗಳು ಸೂರ್ಯನ ಒಂದೇ ಮಗ್ಗುಲಿಗೆ ಬಂದು ಒಂದೇ ಗೆರೆ ಮೇಲೆ ಸಾಲಾಗಿ ನಿಲ್ಲುತ್ತವೆ. ಆ ಸಂದರ್ಭದಲ್ಲಿ ಭೂಮಿ ಸೂರ್ಯನ ಒಂದು ಬದಿಗೆ ಸರಿದು, ಉಳಿದ ಪಂಚಗ್ರಹಗಳಾದ ಬುಧ, ಶುಕ್ರ, ಕುಜ (ಮಂಗಳ), ಗುರು ಮತ್ತು ಶನಿ ಮತ್ತೊಂದು ಬದಿಗೆ ಬಂದು ಏಕರೇಖಸ್ಥವಾಗುತ್ತವೆ. ಆಗ ಲೋಕಾಂತ್ಯವಾಗುತ್ತದೆ ಎಂಬ ಭೀತಿಯನ್ನು ವ್ಯಾಪಕವಾಗಿ ಪ್ರಸಾರ ಮಾಡುತ್ತಿದ್ದಾರೆ. ಫ್ಯಾಂಟಸಿ ಲೋಕದ ಜನಪ್ರಿಯ ಧಾರಾವಾಹಿಗಳಾದ 'ಎಕ್ಸ್-ಫೈಲ್', 'ಯು.ಎಫ್.ಓ' ಏಲಿಯನ್ಸ್ ಇತ್ಯಾದಿಗಳಲ್ಲಿ ಈ ಅಸಂಭವ ವಿಘಟನೆಯನ್ನು ಸಂಭವನೀಯ ಎಂಬಂತೆ ಸನ್ನಿವೇಶಗಳನ್ನು ರಚಿಸಿ ರೋಚಕವಾಗಿ ಬಿತ್ತರಿಸಲಾಗಿದೆ. ತತ್ಸಂಬಂಧಿತ ಪುಸ್ತಕಗಳು ಪ್ರಕಟಣೆಗೊಂಡು ವ್ಯಾಪಕವಾಗಿ ಮಾರಾಟವಾಗುತ್ತಿವೆ.

ಆ ದಿನ ಈ ಐದು ಗ್ರಹಗಳು ಒಂದಾಗಿ ತಮ್ಮ ಸಂಯೋಜಿತ ಗುರುತ್ವಾಕರ್ಷಣ ಶಕ್ತಿಯಿಂದ ಒಂಟಿಯಾಗುಳಿದ ಭೂಮಿಯನ್ನು ಎಳೆದು ಹಾಕುತ್ತವೆ. ಈ ಬಾನಂಗಳದ ಹಗ್ಗ ಜಗ್ಗಾಟದಲ್ಲಿ ಭೂಮಿ ಛಿದ್ರಗೊಳ್ಳಬಹುದು, ಭೂಕಂಪಗಳು ಸಂಭವಿಸಬಹುದು. ಭಯಾನಕ ಉಬ್ಬರವಿಳಿತಗಳು ಜಲಪ್ರಳಯಗಳನ್ನುಂಟು ಮಾಡಬಹುದೆಂಬ ಕಥಾನಕಗಳು ಹಬ್ಬುತ್ತಿವೆ.

ಹಗ್ಗ ಜಗ್ಗಾಟದ ಸ್ಪರ್ಧೆಯಲ್ಲಿ ಒಂದು ಕಡೆ ಐದು ಜನ ಸೇರಿಕೊಂಡು ಎದುರು ತುದಿಯಲ್ಲಿ ಒಂಟಿಯಾಗಿ ಜಗ್ಗುತ್ತಿರುವವನನ್ನು ಎಷ್ಟು ಸುಲಭವಾಗಿ ತಮ್ಮೆಡೆಗೆ ಸೆಳೆದುಕೊಳ್ಳಬಹುದೋ, ಅಷ್ಟೇ ಸುಲಭವಾಗಿ ಈ ನಭೋಮಂಡಲದ ಘಟನೆ ಸಂಭವಿಸುತ್ತದೆ ಎಂದು ವಾದಿಸುತ್ತಿದ್ದಾರೆ. ಇವಕ್ಕೆ ಅನೇಕ ವಿಕ್ಷಿಪ್ತ ವಿಜ್ಞಾನ (Pseudo Science) ವಾದಗಳನ್ನು ಮಂಡಿಸುತ್ತಿದ್ದಾರೆ. ಕೆಲವು ಕುತ್ಸಿತ ಮನೋಭಾವದ ವಿಜ್ಞಾನಿಗಳು ಸಹ

ಹಣದಾಸೆಗೆ ಈ ದಂಧೆಯಲ್ಲಿ ಪಾಲ್ಗೊಳ್ಳುತ್ತಿದ್ದಾರೆ.

ಸಮಾನ ರೇಖೆಯಲ್ಲಿ ಭೂಮಿಗೆ ಎದುರಾಗಿ ಐದು ಗ್ರಹಗಳು ನಿಲ್ಲುವ ಕ್ರಿಯೆಯನ್ನು ವಿಶ್ಲೇಷಿಸುವ ಮೊದಲಿಗೆ ವಾಸ್ತವವಾಗಿ ಹಾಗೂ ನಿಯಮಿತವಾಗಿ ಸಂಭವಿಸುವ ಭೂ-ಚಂದ್ರರ ಸಮರೇಖಸ್ಥ ಸಂದರ್ಭಕ್ಕೆ ಬರೋಣ.

ಅವೆರಡು ಒಂದೇ ಕಡೆ ಬಂದಾಗ ನ್ಯೂಟನ್‌ನ ಗುರುತ್ವ ನಿಯಮದಂತೆ ಆಕರ್ಷಣೆಗೆ ಒಳಗಾಗುತ್ತವೆ. ಚಂದ್ರನಿಗಿಂತ ಅಪರಿಮಿತ ಭಾರವಾದ ಭೂಮಿ ಚಂದ್ರನನ್ನು ಬೃಹತ್ ಶಕ್ತಿಯಿಂದ ಆಕರ್ಷಿಸಿ ತನ್ನ ಸುತ್ತ ಸುತ್ತುವಂತೆ ಮಾಡಿದೆ. ಚಂದ್ರ ಭೂಮಿಗಿಂತ ಅತ್ಯಂತ ಚಿಕ್ಕದಾದರೂ ಅವು ಸಮಾನ ರೇಖೆಯಲ್ಲಿ ಬಂದಾಗ ಭೂಮಿಯನ್ನು ತನ್ನ ಶಕ್ತ್ಯಾನುಸಾರ ಚಂದ್ರನು ಎಳೆಯದೆ ಬಿಡುವುದಿಲ್ಲ. ಅವುಗಳ ಅಂತರ ಸಮೀಪವಿರುವುದರಿಂದ ಅದರ ಪರಿಣಾಮ ಗಮನಾರ್ಹವಾಗಿರುತ್ತದೆ. ಅಂತೆಯೇ ಭೂಮಿಯ ಮೇಲಿನ ಸಮುದ್ರಗಳಲ್ಲಿ ಉಬ್ಬರವಿಳಿತಗಳಾಗುತ್ತವೆ.

ಚಂದ್ರನಿಗೆ ಎದುರಾದ ಭೂಮಿಯ ಮುಂಭಾಗ ಹೆಚ್ಚಿನ ಗುರುತ್ವಶಕ್ತಿಗೆ ಒಳಗಾಗಿ, ಹಿಂಭಾಗ ಚಂದ್ರನಿಂದ ಕಡಿಮೆ ಆಕರ್ಷಣೆಗೆ ಒಳಪಡುತ್ತದೆ. ಚಂದ್ರನ ಕುಂದಿದ ಶಕ್ತಿಗೆ ಭೂಮಿಯ ಘನವಸ್ತುಗಳನ್ನು ಅಲುಗಿಸಲು ಅಸಾಧ್ಯ. ಆದರೆ ದ್ರವ ವಸ್ತುಗಳ ಮೇಲೆ ಈ ಪರಿಣಾಮ ಸಂಭವಿಸುತ್ತದೆ. ಅದೇ ಸಮುದ್ರದ ಭರತ-ಇಳಿತಗಳಿಗೆ ಕಾರಣ. ಪ್ರತಿ ಅಮಾವಾಸ್ಯೆ, ಹುಣ್ಣಿಮೆಗೆ ಈ ಕ್ರಿಯೆ ಜರುಗುತ್ತದೆ. ಭೂಮಿಯಿಂದ ಚಂದ್ರ ಕೇವಲ ೪ ಲಕ್ಷ ಕಿಲೋಮೀಟರ್ ಅಂತರದಲ್ಲಿದೆ.

ಅದೇ ೧೫ ಕೋಟಿ ಕಿ.ಮೀ. ಅಂತರದಲ್ಲಿರುವ ಸೂರ್ಯ ಭೂಮಿಗಿಂತ ೩ ಲಕ್ಷ ಪಟ್ಟು ಗಾತ್ರದಲ್ಲಿ ದೊಡ್ಡದು. ಅದರ ಗುರುತ್ವಾಕರ್ಷಣೆ ಅಗಾಧ. ಆದಾಗ್ಯೂ ಅಗಾಧ ಅಂತರದಿಂದ ಅದರ ಪರಿಣಾಮ ಅತ್ಯಲ್ಪ. ಅಂದರೆ ಅಂತರ ಹೆಚ್ಚಿದಂತೆ ಭೂಮಿಯ ಸಮುದ್ರದಲ್ಲಿನ ಭರತ-ಇಳಿತಗಳು ಕಡಿಮೆಯಾಗುತ್ತವೆ. ಹೀಗಾಗಿ ಸೂರ್ಯ ಚಂದ್ರ ಒಂದು ಕಡೆ ಬಂದು ಅದೇ ಸಾಲಿನಲ್ಲಿ ಭೂಮಿ ಮತ್ತೊಂದು ಬದಿಗೆ ಬಂದಾಗಲೂ ಸೂರ್ಯ-ಚಂದ್ರರ ಸಂಯುಕ್ತ ಪರಿಣಾಮ, ಚಂದ್ರ ಏಕಾಂಗಿಯಾಗಿ ಭೂಮಿಯ ಮೇಲೆ ಉಂಟುಮಾಡುವ ಪರಿಣಾಮಕ್ಕಿಂತ ಹೆಚ್ಚಿನದಾಗಿರುವುದಿಲ್ಲ.

**ಭಯೋತ್ಪಾದಕನೊಬ್ಬ ಜಸವಂತ್ ಸಿಂಗ್‌ರಿಗೆ**



*"ನಮ್ಮದು ಒಂದೇ ಒಂದು ಬೇಡಿಕೆ. ನೀವು ಮತ್ತು ನಿಮ್ಮ ಪ್ರಧಾನ ಮಂತ್ರಿ, ರಾಜೀನಾಮೆ ನೀಡಿ ತೊಲಗಬೇಕು!"*

ಅದೇ ರೀತಿ ೫-೫-೨೦೦೦ದಂದು ಐದು ಗ್ರಹಗಳು ಒಟ್ಟಾಗಿ ಸೇರಿದರೂ ಭೂಮಿಯ ಮೇಲೆ ಅವು ಬೀರುವ ಪರಿಣಾಮ ಅತ್ಯಂತ ಅಲ್ಪ. ಗುಣಾತ್ಮಕವಾಗಿ ಉಪೇಕ್ಷಾರ್ಹ. ಕಾರಣ ಅವುಗಳು ಭೂಮಿಯಿಂದ ಕೋಟ್ಯಾಂತರ ಕಿ.ಮೀ.ಗಳ ಅಂತರದಲ್ಲಿವೆ. ಬುಧ ಗ್ರಹವು ಭೂಮಿಯಿಂದ ೯೧.೯ ಕೋಟಿ, ಶುಕ್ರ ೪೧.೩ ಕೋಟಿ, ಮಂಗಳ ೭೮.೩೪ ಕೋಟಿ, ಗುರು ೬೨೮.೭೪ ಕೋಟಿ ಮತ್ತು ಶನಿಗ್ರಹವು ೧೨೭೭.೪೧ ಕೋಟಿ ಕಿ.ಮೀ. ಅಂತರದಲ್ಲಿವೆ. ಈ ಅಂಕಿ ಅಂಶಗಳನ್ನೆಲ್ಲಾ ಗಣನೆಗೆ ತೆಗೆದುಕೊಂಡು ಲೆಕ್ಕಾಚಾರ ಹಾಕಿದರೆ ಈ ಐದು ಗ್ರಹಗಳು ಒಟ್ಟಾಗಿ ಸೇರಿ ಭೂಮಿಯ ಮೇಲೆ ಉಂಟುಮಾಡುವ ಗುರುತ್ವ ಪರಿಣಾಮ ಸನಿಹದಲ್ಲಿದ್ದುಕೊಂಡು ಚಿಕ್ಕ ಗಾತ್ರದ ಚಂದ್ರ ಮಾಡುವ ಪರಿಣಾಮಕ್ಕಿಂತ ದಶಲಕ್ಷದಲ್ಲಿ ಕೇವಲ ಎರಡು ಅಂಶವಷ್ಟೇ ($^{2}/_{100}$ ಲಕ್ಷ). ಅಂದರೆ ವಿಯೆಟ್ನಾಂ ಮೇಲೆ ಹಾರಾಡುವ ವಿಮಾನ ಬೆಂಗಳೂರಿನ ವಿಧಾನಸೌಧದ ಮೇಲೆ ಏನು ಪರಿಣಾಮ ಬೀರುತ್ತದೆಯೋ ಅಷ್ಟು ಪರಿಣಾಮ ೫ ಗ್ರಹಗಳು ಸಂಯುಕ್ತವಾಗಿ ಭೂಮಿಯ ಮೇಲೆ ಉಂಟುಮಾಡುತ್ತವೆ. ಅಷ್ಟೊಂದು ನಿಕೃಷ್ಟ. ಇಲ್ಲವೇ ಇಲ್ಲವೆಂಬಷ್ಟು ಉಪೇಕ್ಷಿತ.

ಇದು ಎಷ್ಟು ನಿಕೃಷ್ಟವೆಂಬುದನ್ನು ಜನಸಾಮಾನ್ಯರಿಗೂ ಅರ್ಥವಾಗುವಂತೆ ಪಿಟ್ಸ್‌ಬರ್ಗ್ ವಿಶ್ವವಿದ್ಯಾಲಯದ ಸಂಖ್ಯಾಶಾಸ್ತ್ರಜ್ಞನಾದ ಟೆಡ್ ನ್ಯೂಮನ್ ತುಲನಾತ್ಮಕವಾದ ಒಂದು ದೃಷ್ಟಾಂತವನ್ನು ಸಾದರಪಡಿಸಿದ್ದಾನೆ.

ನಿಂತಿರುವ ವ್ಯಕ್ತಿ ನೆಲದ ಮೇಲೆ ಕುಳಿತಾಗ, ನಿಂತಾಗಿನ ಭಂಗಿಯಲ್ಲಿದ್ದ ಗುರುತ್ವಕೇಂದ್ರ ಕುಳಿತಾಗಿನ ಸ್ಥಿತಿಯಲ್ಲಿ ಭೂಮಿಗೆ ಒಂದು ಮೀಟರ್‌ನಷ್ಟು ನಿಕಟವಾಗಿ, ಕುಳಿತಿರುವ ವ್ಯಕ್ತಿಯ ಭಾರ ನಿಂತಾಗಿನ ಅದೇ ವ್ಯಕ್ತಿಯ ಭಾರಕ್ಕಿಂತ ಹೆಚ್ಚಾಗಿರುತ್ತದೆ. ಅದು ಎಷ್ಟು ಹೆಚ್ಚಾಗಿರುತ್ತದೆಂದರೆ ಅದನ್ನು ಯಾವುದೇ ಲೆಕ್ಕಾಚಾರದಿಂದಲೂ ಗಣಕಗೊಳಿಸಲಾಗದು. ಅಷ್ಟು ಅತ್ಯಲ್ಪ. ಅಗುಣಿತ. ಅದರ ಅನುಭವವಂತೂ ದೂರ ಉಳಿದ ವಿಷಯ. ಅಂದರೆ ವ್ಯತ್ಯಾಸ ಪರಿಣಾಮ ನಿಶ್ಶೇಷವೆಂದರೂ ತಪ್ಪಾಗದು. ಇಂತಹ ನಿಶ್ಶೇಷ ಪರಿಣಾಮಕ್ಕಿಂತಲೂ ಆ ಐದು ಗ್ರಹಗಳು ಒಟ್ಟಾಗಿ ಉಂಟುಮಾಡುವ ಪರಿಣಾಮ ಕಡಿಮೆಯೆಂದರೆ ನೀವೇ ಊಹಿಸಿಕೊಳ್ಳಬಹುದು.

ಆ ಪ್ರಮಾಣದ ಪರಿಣಾಮ ಯಾವ ಪ್ರಳಯವನ್ನು ಉಂಟುಮಾಡಬಹುದೆಂಬುದನ್ನು ಜನಸಾಮಾನ್ಯರು ಸುಲಭವಾಗಿ ಗ್ರಹಿಸಬಹುದು. ಇಂತಹ ನಿಶ್ಶೇಷ ಪರಿಣಾಮವನ್ನು ಹಿಡಿದುಕೊಂಡು ಕೆಲವು ಪ್ರಸಾರ ಮಾಧ್ಯಮಗಳು ಏನೆಲ್ಲಾ ಸೃಷ್ಟಿಸುತ್ತಿವೆಯೆಂದರೆ ಅದನ್ನು ಯಾವ ಜೀವಿಯೂ ಲಕ್ಷ್ಯಕ್ಕೆ ತೆಗೆದುಕೊಳ್ಳದೆ ಖಡಾಖಂಡಿತವಾಗಿ ಉಪೇಕ್ಷಿಸಬೇಕಾಗಿದೆ. ಇನ್ನು ಅಂತ್ಯಕಾಲದ ಪ್ರಳಯವೆ ದೂರ ಉಳಿದ ವಿಷಯ.

ಇಂತಹದೇ ಪ್ರಳಯದ ಪ್ರಲಾಪ ತಾರೀಖು ೧೦-೩-೧೯೮೨ರಂದು ಗುಲ್ಲೆದ್ದಿತ್ತು. ಇಂಗ್ಲೆಂಡಿನ ಡಾ॥ ಜಾನ್ ಗ್ರಿಬ್ಬಿನ್ ಮತ್ತು ಡಾ॥ ಸ್ಟೀಫನ್ ಪ್ಲೇಜ್‌ಮನ್ ಎಂಬ ಕುಖ್ಯಾತ ವಿಜ್ಞಾನಿಗಳ ಕೃತಿಯು ಕೃತಿಯಾದ 'ಜ್ಯೂಪಿಟರ್ ಪರಿಣಾಮ' ಎಂಬ ಪುಸ್ತಕವು ವಿಶ್ವವ್ಯಾಪಿ ಭೀತಿಯನ್ನುಂಟುಮಾಡಿತ್ತು. ಪ್ರಪಂಚಾದ್ಯಂತ ಪುಸ್ತಕದ ಪ್ರತಿಗಳು ಲಕ್ಷೋಪಲಕ್ಷ ಸಂಖ್ಯೆಯಲ್ಲಿ ಮಾರಾಟವಾಗಿ ಲೇಖಕರ ಮತ್ತು ಪ್ರಕಾಶಕರ ಬೊಕ್ಕಸಗಳು ತುಂಬಿಹೋದವು. ಅದರ ಆಯ್ದ ಭಾಗಗಳನ್ನು ಪ್ರಕಟಿಸಿದ ವಿವಿಧ ಪತ್ರಿಕೆಗಳು ಪ್ರಳಯ ಪರಿಸ್ಥಿತಿಯನ್ನು ಮತ್ತಷ್ಟು ಪ್ರಕ್ಷುಬ್ಧಗೊಳಿಸಿದವು. ಆ ಪುಸ್ತಕದಲ್ಲಿ ಮಂಡಿತವಾದ ವಾದವೇನೆಂದರೆ, ತಾರೀಖು ೧೦-೩-೧೯೮೨ರಂದು ನವಗ್ರಹಗಳೆಲ್ಲಾ ಒಂದಾಗಿ ಸೂರ್ಯನ ನೇರಕ್ಕೆ ಬಂದು ಏಕರೇಖಸ್ಥವಾಗಿ ಅವುಗಳ ಒಟ್ಟು ಶಕ್ತಿಯಿಂದ ಸೂರ್ಯನೊಡನೆ ಜಗ್ಗಾಟವಾಡುವ ವಿದ್ರಾವಕ ಘಟನೆ. ಸೂರ್ಯ ಒಂದು ಪಕ್ಷದಲ್ಲಿ, ಉಳಿದ ಒಂಭತ್ತು ಗ್ರಹಗಳೆಲ್ಲಾ ಇನ್ನೊಂದು ಪಕ್ಷದಲ್ಲಿದ್ದು ಜಗ್ಗಾಡಿದಾಗ ಸೂರ್ಯನ ಜ್ವಾಲೆಗಳು ಉತ್ಕರ್ಷಿಸಿ, ಹೊರಜಿಗಿದು ಗುರುಗ್ರಹದವರೆಗೆ ಹಬ್ಬಿ ಮಧ್ಯದಲ್ಲಿ ಬರುವ ಬುಧ, ಶುಕ್ರ, ಭೂಮಿ ಮತ್ತು ಮಂಗಳ ಗ್ರಹಗಳೆಲ್ಲಾ ಸೂರ್ಯ ಬಕಾಸುರನ ಉದರದೊಳಗೆ ಸಮಾಧಿಗೊಳ್ಳುತ್ತವೆ. ಕೊನೆಗೆ ಗುರು ಮತ್ತು ಅದರಾಚೆಯ ಗ್ರಹಗಳಷ್ಟೇ ಉಳಿಯುತ್ತವೆ !

ಇನ್ನೊಂದು ವಾದದಲ್ಲಿ ದೈತ್ಯಗ್ರಹಗಳಾದ ಗುರು, ಶನಿ, ಯುರೇನಸ್ ಮತ್ತು ನೆಪ್ಚೂನ್ ಒಂದು ಪಕ್ಷದಲ್ಲಿಯೂ ಸೂರ್ಯ ಮಾತ್ರ ವಿರೋಧ ಪಕ್ಷದಲ್ಲಿಯೂ ಇದ್ದು ಉಭಯ ಪಕ್ಷಗಳ ನಡುವೆ ಗುರುತ್ವಾಕರ್ಷಣ ಕಾಳಗ ಸಂಭವಿಸುತ್ತದೆ. ಈ ಎರಡು ಕೋಣಗಳ ಸೆಣಸಾಟದಲ್ಲಿ ಬಡಗಿಡಗಳಾದ ಬುಧ, ಶುಕ್ರ, ಭೂಮಿ ಮತ್ತು ಕುಜಗ್ರಹಗಳು ನಾಶಹೊಂದುತ್ತವೆ. ಶಿಥಿಲಗೋಳವಾದ ಭೂಮಿಯಂತೂ ಒಡೆದು ಸರ್ವನಾಶವಾಗುವುದರಲ್ಲಿ ಸಂದೇಹವೇ ಇಲ್ಲ. ಇದಕ್ಕೆ ಪೂರಕವಾಗಿ ಅಮೆರಿಕದ ಸ್ಯಾನ್ ಆ್ಯಂಡ್ರೀಯಸ್ ಫಾಲ್ಟ್ ಪ್ರದೇಶದಲ್ಲಿ ಭೂಮಿ ಬಿರಿದು ಬಾಯ್ತೆರೆದು ಜನ-ಜಲ ಸಂಪತ್ತೆಲ್ಲಾ ಕಬಳಿಸಲ್ಪಡುತ್ತದೆ. ಅತಿಶಯ ಪ್ರಚಾರಕ್ಕೊಳಗಾದ ಈ 'ಸಮೂಹ ಸನ್ನಿ'ಯಿಂದ ವ್ಯಾಕುಲಗೊಂಡ ಜನ ಫಾಲ್ಟ್ ಪ್ರದೇಶದಿಂದ ಮನೆ ಮಠ ತೊರೆದು ದೂರದ ಸುರಕ್ಷಿತ ಪ್ರದೇಶಗಳೆಂದು ಭಾವಿಸಲಾಗಿದ್ದೆಡೆಗೆ ಅಲ್ಲಿಗೆ ಗುಳೇ ಹೋದರು. ೧೦-೩-೧೯೮೨ ಬಂದೇ ಬಿಟ್ಟಿತು. ಜೊತೆಗೆ ಇಡೀ ವರ್ಷವಾದ ೧೯೮೨ ಮುಗಿಯಿತು. ಭೂಮಿಯ ರೋಮವೂ ಕೊಂಕಲಿಲ್ಲ. ಜ್ಯೂಪಿಟರ್ ಪರಿಣಾಮ ನಯವಂಚನೆಯೆಂದು ಸಾಬೀತಾಯಿತು. ಆದರೂ ಜನ ಅದನ್ನು ಮರೆತು ಈಗ ಹೊಸ ಘಾತುಕದ ಪ್ರಳಯ ಪರಿಣಾಮದ 'ಸನ್ನಿ'ಗೆ ಒಳಗಾಗಿರುವುದು ಪರಮಾಶ್ಚರ್ಯ.

೧೯೬೨ರಲ್ಲಿಯೂ ಇಂತಹದೇ ಮಹಾ ೫-೨-೧೯೬೨ರಲ್ಲಿ ಸಂಭವಿಸುವುದೆಂದು ಪ್ರಚಾರ

(ಮುಂದಿನ ಪುಟ ನೋಡಿ)

# ಪ್ರಾಥಮಿಕ ಶಿಕ್ಷಣ : ಒಂದು ಚಿಂತನೆ

ಇಡೀ ಶಿಕ್ಷಣ ಕ್ಷೇತ್ರದಲ್ಲಿ ಆಮೂಲಾಗ, ಬದಲಾವಣೆ ಆಗಬೇಕೆಂಬ ಕಾಳಜಿ ಆಗಾಗ ವ್ಯಕ್ತವಾಗುತ್ತಲೇ ಇದೆ. ಈ ಬಗ್ಗೆ ಶಿಕ್ಷಣ ತಜ್ಞರನ್ನೊಳಗೊಂಡು, ಶಿಕ್ಷಣದ ಬಗ್ಗೆ ಪ್ರೀತಿ ಇರುವವರೆಲ್ಲ ಆಗಾಗ ಸಲಹೆ-ಸೂಚನೆ ಚರ್ಚೆ ನಡೆಸುತ್ತಿರುವುದುಂಟು, ಸರಕಾರಗಳೂ ಆಯೋಗಗಳನ್ನು ರಚಿಸಿ ವರದಿ ತರಿಸಿಕೊಂಡು ಮೌನವಾಗುವುದೂ ಉಂಟು.

ಆರಂಭದಲ್ಲಿಯೇ ಒಂದು ಅಂಶವನ್ನು ಸ್ಪಷ್ಟಪಡಿಸುವುದು ಸೂಕ್ತ: ಈ ಚಿಂತನೆಯಲ್ಲಿ ಬಿಂಬಿತವಾಗಿರುವ ದೃಷ್ಟಿ ಮೇಲೆ ತಿಳಿಸಿದ "ಸುಧಾರಣೆ" ಅಥವಾ "ಬದಲಾವಣೆ"ಯದಲ್ಲ. ಇದು "ಬಲಪಡಿಸುವ" ದೃಷ್ಟಿ. ಈ ಹಿಂದೆ ಸುಧಾರಣೆ - ಬದಲಾವಣೆ ಚರ್ಚೆ ನಡೆಸಿ, ಸಾಧಿಸಿದ್ದು "ನವೋದಯ ಶಾಲೆಗಳು", "ಮೊರಾರ್ಜಿ ಶಾಲೆಗಳು" ಎಂಬ ಸೀಮಿತ ಯಶಸ್ಸನ್ನು. ಈ ಬಗೆಯ ಹೊಸ ಶಾಲೆಗಳನ್ನು ರೂಪಿಸಿದ್ದು ಒಟ್ಟು ಶಿಕ್ಷಣದ ಸುಧಾರಣೆ ಅಥವಾ ಬದಲಾವಣೆ ಎಂದು ಒಪ್ಪಿಕೊಳ್ಳಲಾಗುವುದಿಲ್ಲ. ನಮ್ಮ ಅಗತ್ಯ "ಬಲಪಡಿಸುವುದು" ಆಗಿದೆ. ಇದು ಈಗಿರುವ ಸಾಮಾನ್ಯ ಶಿಕ್ಷಣ ವ್ಯವಸ್ಥೆಯಲ್ಲಿ ಕೆಲವು ರಾಚನಿಕ ಹೊಸತನ ತರಲು ಒತ್ತಾಯಿಸುತ್ತದೆ. ಈಗಾಗಲೇ ಇರುವ ವ್ಯವಸ್ಥೆಯಲ್ಲಿ ತರುವ ಹೊಸತನವನ್ನು ಕಡಿಮೆ ಕ್ರಾಂತಿಕಾರಿಯೆಂದು ಭಾವಿಸಬೇಕಿಲ್ಲ.

ಶಿಕ್ಷಣ ಬಲಪಡಿಸುವ ಈ ಚಿಂತನೆಯನ್ನು ಸದ್ಯಕ್ಕೆ ಸರಕಾರಿ ಪ್ರಾಥಮಿಕ ಶಿಕ್ಷಣಕ್ಕೆ ಸೀಮಿತಗೊಳಿಸಲಾಗಿದೆ. ಇದಕ್ಕೆ ಮುಖ್ಯ ಕಾರಣ, ಇಂದಿಗೂ ನಮ್ಮ ಸಮಾಜದ ಬಹುಪಾಲು ಜನಸಂಖ್ಯೆ ಅವಲಂಬಿಸಿರುವುದು ಈ ಸರಕಾರಿ ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯನ್ನು. ಇಲ್ಲಿ ಏನಾದರೂ ಸಂಭವಿಸಿದರೆ ಮಾತ್ರ ಅದು ಅರ್ಥಪೂರ್ಣವಾದದ್ದು; ಏನೂ ಸಂಭವಿಸದಿದ್ದರೆ ಯಾವ ಸಾಧನೆಯೂ ಆಗಿಲ್ಲ ಎಂದೇ ಹೇಳಬಹುದು.

ಸರಕಾರಿ ಪ್ರಾಥಮಿಕ ಶಾಲೆಗಳು ಎಂದಾಕ್ಷಣ ನಮ್ಮ ಲಕ್ಷ್ಯಕ್ಕೆ ಬರುವುದು ಗ್ರಾಮೀಣ ಶಾಲೆಗಳೇ. ಪಟ್ಟಣ-ನಗರ ಪ್ರದೇಶಗಳಲ್ಲಿ ಈ ಶಾಲೆಗಳಿರುವುದು ನಿಜವಾದರೂ ಗ್ರಾಮೀಣ ಶಾಲೆಗಳ ಚಿತ್ರವೇ ನಮ್ಮ ಗಮನ ಹೆಚ್ಚು ಸೆಳೆಯುತ್ತವೆ. ಆದಾಗ್ಯೂ "ಬಲಪಡಿಸುವ" ಈ ಚಿಂತನೆಯಲ್ಲಿ ಎಲ್ಲ ಶಾಲೆಗಳೂ ಒಳಗೊಳ್ಳುತ್ತವೆ. ಇವುಗಳನ್ನು ಬಲಪಡಿಸುವ ಕಾರ್ಯ ಎರಡು ಸ್ತರಗಳಲ್ಲಿ ನಡೆಯಬೇಕಿದೆ: ೧. ಭೌತಿಕ ೨. ಆಂತರಿಕ.

ಪ್ರಾಥಮಿಕ ಶಾಲೆಗಳ ಭೌತಿಕ ಪರಿಸರದಲ್ಲಿ ಶಾಲಾ ಕಟ್ಟಡ, ಬಯಲು, ಗ್ರಂಥಾಲಯ ಮುಂತಾದವುಗಳು ಪ್ರಸ್ತಾಪಿತವಾದರೆ ಆಂತರಿಕ ಪರಿಸರದಲ್ಲಿ ಪಠ್ಯಪುಸ್ತಕ, ಶಿಕ್ಷಕರ ಅರ್ಹತೆ ಇತ್ಯಾದಿಗಳು ಒಳಗೊಳ್ಳುತ್ತವೆ.

### ಭೌತಿಕ ಪರಿಸರ ಬಲಪಡಿಸುವುದು

- ಮಕ್ಕಳ ವ್ಯಕ್ತಿತ್ವ ವಿಕಸನ ಹಾಗೂ ಸಮಾಜದ ಆಲೋಚನೆಯ ದೃಷ್ಟಿಯಿಂದ ಶಾಲೆಯ ಭೌತಿಕ ಪರಿಸರ ಬಹಳ ಮಹತ್ವದ್ದು. ಈ ಹಿನ್ನೆಲೆಯಲ್ಲಿ 'ಒಂದು ಪ್ರಾಥಮಿಕ ಶಾಲೆ ಹೇಗೆ ಕಾಣಬೇಕು ?' ಎಂಬ ಪ್ರಶ್ನೆಯನ್ನು ಹಾಕಿಕೊಂಡು ಮುಂದುವರೆಯೋಣ. ಈ ಪ್ರಶ್ನೆಗೆ ಈ ಲೇಖಕ ಕೊಡುವ ಉತ್ತರ ಅನೇಕರಿಗೆ ನಿರಾಶೆ ಉಂಟುಮಾಡಬಹುದು. ಏಕೆಂದರೆ, ಕನಿಷ್ಠ ಎರಡು ಮೂರು ಎಕರೆ ವಿಶಾಲ ಮೈದಾನ ಪ್ರತಿಶಾಲೆಗೂ ಇರಬೇಕು ಎಂಬುದು ಈ ಲೇಖಕನ ನಿಲುವು. ಈ ವಿಶಾಲ ಮೈದಾನದಲ್ಲಿ ಕಬಡ್ಡಿ, ಕೋಕೋ, ಹೈಜಂಪ್‌ಗಳಂಥ ಕಡಿಮೆ ಖರ್ಚಿನ ಕೋರ್ಟುಗಳಲ್ಲದೆ, ಫುಟ್ಬಾಲ್, ವಾಲಿಬಾಲ್‌ಗಳಂಥ ಆಟಗಳನ್ನೂ ಆಡಲು ಅನುಕೂಲಗಳಿರಬೇಕು. ತರಕಾರಿ ತೋಟದೊಂದಿಗೆ, ಸರಿಯಾಗಿ ಯೋಜನೆ ಹೊಂದಿರುವ ಸುಂದರ ಹೂದೋಟ ಖಂಡಿತ ಇರಬೇಕು. ಶಿಕ್ಷಕರಿಗೆ ಹಾಗೂ ಶಾಲಾ ಸುಧಾರಣಾ ಸಮಿತಿಯವರಿಗೆ ಸ್ವಲ್ಪ ದೂರದೃಷ್ಟಿಯಿದ್ದರೆ ಚಿಕ್ಕ ಔಷಧೀಯ ವನವನ್ನೇ ಅಲ್ಲಿ ಬೆಳೆಸಬಹುದು. ಇದರಿಂದ ಆಯಾ ಗ್ರಾಮದ ಜನರಿಗೆ ಹಲವಾರು ಉಪಯೋಗಗಳು ಮಾತ್ರವಲ್ಲ, ಆ ಪರಿಸರದಲ್ಲಿ ಬೆಳೆಯುವ ಮಕ್ಕಳಿಗೆ ಪಾರಂಪರಿಕ ಜ್ಞಾನ ಸಂಪತ್ತನ್ನು ವರ್ಗಾಯಿಸುವ ಅರ್ಥಪೂರ್ಣ ಶೈಕ್ಷಣಿಕ ಪರಿಸರವನ್ನೂ ನಿರ್ಮಿಸಿದಂತಾಗುತ್ತದೆ.
- ಪ್ರತಿಯೊಂದು ಶಾಲೆಯಲ್ಲಿ ಉತ್ತಮ ಗ್ರಂಥಾಲಯ ಇರಬೇಕು. ಇದನ್ನು ಒಂದು ಚಿಕ್ಕ ಶೈಕ್ಷಣಿಕ ಸಂಪನ್ಮೂಲ ಕೇಂದ್ರದಂತೆಯೂ ಪ್ರಯೋಗಾಲಯದಂತೆಯೂ ಕಾರ್ಯನಿರ್ವಹಿಸುವಂತೆ ರೂಪಿಸಬಹುದು. ಶಿಕ್ಷಕರು ಹಾಗೂ ವಿದ್ಯಾರ್ಥಿಗಳಿಬ್ಬರೂ ಮಾನಸಿಕವಾಗಿ, ಬೌದ್ಧಿಕವಾಗಿ ಬೆಳೆಯಲು ಸಹಾಯ ನೀಡುವಂತಹ ಸಕಲ ಪರಿಕರಗಳೂ ಇಲ್ಲಿರಬೇಕು. ಅಂದರೆ ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದ ಪತ್ರಿಕೆಗಳು, ಸಾಹಿತ್ಯ ಕೃತಿಗಳು ಮಕ್ಕಳ ಪತ್ರಿಕೆಗಳು, ಉತ್ತಮ ಟೇಪ್‌ರೆಕಾರ್ಡರ್ ಹಾಗೂ ಟಿ.ವಿ. ಸೆಟ್‌ಗಳು ಇರಬೇಕು.
- ಶಾಲೆಯ ಕಟ್ಟಡ ಸರಳ, ಸುಂದರ ಹಾಗೂ ವೈಜ್ಞಾನಿಕವಾಗಿದ್ದು, ಒಳಗೂ ಹೊರಗೂ ಸಾಕಷ್ಟು ಸೂಚನಾ ಫಲಕಗಳಿರಬೇಕು. ಇವುಗಳಲ್ಲಿ ಮಕ್ಕಳ ಕಲೆ-ಚಿತ್ರಕಲೆ, ಬರಹ ಮುಂತಾದವುಗಳ ಪ್ರದರ್ಶನ ನಿರಂತರ ಇರುವಂತೆ ಯೋಜಿಸಬೇಕು. ಇದರಿಂದ ಮಕ್ಕಳ ಅಭಿವ್ಯಕ್ತಿ ಸಾಮರ್ಥ್ಯ ಹೆಚ್ಚಲು ಅವಕಾಶ ಒದಗುತ್ತದೆ. ಶಾಲಾ ಕಟ್ಟಡಗಳನ್ನು ಆದಷ್ಟು ಸ್ಥಳೀಯ ಸಾಮಗ್ರಿ ಹಾಗೂ ತಂತ್ರಜ್ಞಾನ ಬಳಸಿ ಕಟ್ಟಬೇಕು.
- ಒಂದು ತರಗತಿಯಲ್ಲಿ ೩೦ಕ್ಕಿಂತ ಹೆಚ್ಚು ವಿದ್ಯಾರ್ಥಿಗಳು ಇರಬಾರದು. ಮಕ್ಕಳ ಮತ್ತು ಶಿಕ್ಷಕರ ಮಧ್ಯದ ಸಂಬಂಧವು ಶಿಕ್ಷಣ ಪ್ರಕ್ರಿಯೆಯಲ್ಲಿ ಮಹತ್ವದ ಪಾತ್ರ ವಹಿಸುತ್ತದೆ. ಈ ಸಂಬಂಧವು ಸಹಜ ಹಾಗೂ ಮಾನವೀಯವಾದುದು ಆಗಿರಬೇಕಿದ್ದರೆ ಶಿಕ್ಷಕರು ಹಾಗೂ ಮಕ್ಕಳ ಮಧ್ಯದ ಸಂಖ್ಯಾ ಅನುಪಾತ ಚಿಕ್ಕದಾಗಿರಬೇಕಿರುವುದು ಅಗತ್ಯ. ಇದರಿಂದ ಶಿಕ್ಷಕರೂ ಮಕ್ಕಳ ಕಲಿಕೆಯ ಕಡೆಗೆ ವೈಯಕ್ತಿಕ ಗಮನ ನೀಡಲು ಸಾಧ್ಯವಾಗುತ್ತದೆ. ತಮ್ಮ ಕಲಿಕಾ ವಿಧಾನದಲ್ಲಿ ನವೀನ ದೃಷ್ಟಿಕೋನ-ಪದ್ಧತಿಗಳನ್ನು ಅಳವಡಿಸಿಕೊಳ್ಳಲು ಶಿಕ್ಷಕರಿಗೆ ಅವಕಾಶ-ಅನುವು ದೊರೆಯುತ್ತದೆ. ಹಾಗೆಯೇ, ಮಕ್ಕಳನ್ನು "ಶಿಕ್ಷಿಸುವ" ಪರಿಸ್ಥಿತಿಯನ್ನು ಗಣನೀಯವಾಗಿ ಕಡಿಮೆ ಮಾಡಲು ಸಾಧ್ಯವಾಗುತ್ತದೆ.
- ಶಾಲಾ ಆವರಣದಲ್ಲಿ ಉತ್ತಮ ಶೌಚಾಲಯ ಹಾಗೂ ನೀರಿನ ವ್ಯವಸ್ಥೆ ಅಷ್ಟೇ ಅಗತ್ಯದ ಪರಿಕರಗಳು. ಕಟ್ಟುವ ಈ ಶೌಚಾಲಯಗಳನ್ನು ಸರಿಯಾಗಿ ನಿರ್ವಹಿಸುವುದರಲ್ಲಿ ಯಶಸ್ಸು ಸಾಧಿಸಿದರೆ, ಅದು ಒಂದು ಸಾಂಸ್ಕೃತಿಕ ವಿಜಯವೆಂದೇ ಪರಿಗಣಿಸಬೇಕು. ಇದಕ್ಕೆ ಆಳವಾದ ಶೈಕ್ಷಣಿಕ ಮಹತ್ವ ಕೂಡ ಇದೆ.
- ಶಾಲೆಯ ಭೌತಿಕ ಪರಿಸರವನ್ನು ಬಲಪಡಿಸುವ ಈ ಆಲೋಚನೆಯು ನಗರ ಹಾಗೂ ಪಟ್ಟಣ ಪ್ರದೇಶದ ಶಾಲೆಗಳಿಗಿಂತಲೂ ಗ್ರಾಮೀಣ ಶಾಲೆಗಳಲ್ಲಿ ಸುಲಭವಾಗಿ ಕಾರ್ಯರೂಪಕ್ಕೆ ಬರಬಹುದು. ಏಕೆಂದರೆ, ಹೆಚ್ಚು ಗ್ರಾಮೀಣ ಶಾಲೆಗಳು, ಊರ ಅಂಚಿನಲ್ಲಿ ಇರುತ್ತವೆ. ಅವುಗಳಿಗೆ ಹತ್ತಿಕೊಂಡ ಹೊಲಗಳನ್ನು, ರೈತರಿಗೆ ಸೂಕ್ತ ಪರಿಹಾರ ನೀಡಿ ವಶಪಡಿಸಿಕೊಳ್ಳುವ ಕಾನೂನು ತಿದ್ದುಪಡಿ ಅಗತ್ಯ. ನಗರ-ಪಟ್ಟಣಗಳಲ್ಲಿನ ಶಾಲೆಗಳು ಹೆಚ್ಚಾಗಿ ಸಂದುಗೊಂದುಗಳಲ್ಲಿ ಸಿಲುಕಿಕೊಂಡಿರುತ್ತವೆ. ಅವಕ್ಕೆ ಎಕರೆಗಟ್ಟಲೆ ಬಯಲುಗಳ ನಿರೀಕ್ಷೆ ಅವಾಸ್ತವಿಕ ಎನಿಸಬಹುದು. ಆದಾಗ್ಯೂ ಗ್ರಂಥಾಲಯ, ಪ್ರಯೋಗಾಲಯ, ಸಂಪನ್ಮೂಲ

**ರಾಜ್ಯದ ಶಿಕ್ಷಣ ಮಂತ್ರಿಗಳು ಪ್ರಾಥಮಿಕ ಶಿಕ್ಷಣದ ಸುಧಾರಣೆಯ ದೃಷ್ಟಿಯಿಂದ ಪ್ರಶ್ನಾವಳಿಯೊಂದನ್ನು ಪ್ರಕಟಿಸಿ ಪ್ರತಿಕ್ರಿಯೆಗಳನ್ನು ಸಾರ್ವಜನಿಕರಿಂದ ನಿರೀಕ್ಷಿಸಿದ್ದಾರೆ. ಒಬ್ಬ ನುರಿತ ಶಿಕ್ಷಕರ ಪ್ರತಿಕ್ರಿಯೆ ಅದಕ್ಕೆ ಪ್ರಸ್ತುತವೆನಿಸುತ್ತದೆ.**

ಶಿವಾನಂದ ಹೊಂಬಳ

ಕೇಂದ್ರಗಳನ್ನಂತೂ ಹೊಂದಲು ಸಾಧ್ಯವಿದೆ.

## ಆಂತರಿಕ ಪರಿಸರ ಬಲಪಡಿಸುವುದು

✦ ಶಿಕ್ಷಕರ ಅರ್ಹತೆ: ಪ್ರಾಥಮಿಕ ಶಿಕ್ಷಣದ ಬಲಪಡಿಸುವಿಕೆ ನಿಜಕ್ಕೂ ಯಶಸ್ವಿಯಾಗಬೇಕಿದ್ದರೆ, ಶಿಕ್ಷಕರ ಅರ್ಹತೆಯ ಬಗ್ಗೆ ನಿರ್ದಿಷ್ಟವಾಗಿ, ಗಂಭೀರವಾಗಿ ಆಲೋಚಿಸಬೇಕಾದ ನಿರ್ಣಯ ಕೈಗೊಳ್ಳಬೇಕಾದ ಅಗತ್ಯವಿದೆ. ಪ್ರಾಥಮಿಕ ಶಾಲೆಗೆ ಬರುವ ಮಗು ಕಲಿಯುವುದು ಪ್ರಾಥಮಿಕ ಸಂಗತಿಗಳನ್ನು. ಆದರೂ ಅವುಗಳನ್ನು ಕಲಿಸುವ ಶಿಕ್ಷಕನ ಬೌದ್ಧಿಕ ಹಾಗೂ ಶೈಕ್ಷಣಿಕ ಮಟ್ಟ ಮಾತ್ರ ತುಂಬಾ ಉಚ್ಚತರದ್ದಾಗಿರಬೇಕು. ಉನ್ನತ ಮಟ್ಟದ ಜ್ಞಾನ - ಮಾಹಿತಿ ಜ್ಞಾನ ಹೊಂದಿರುವ ವ್ಯಕ್ತಿಗಳು, ಪ್ರಾಥಮಿಕ ಮಟ್ಟದಲ್ಲಿ ಕಲಿಸುವ ಕೌಶಲ್ಯಗಳನ್ನು ಗಳಿಸಿಕೊಂಡು, ಆ ವೃತ್ತಿಗೆ ತೊಡಗಿದರೆ ಮಾತ್ರ ನಿಜವಾದ ಪ್ರಾಥಮಿಕ ಶಿಕ್ಷಣದ ಬಲವರ್ಧನೆ ಸಾಧ್ಯ. ಶಿಕ್ಷಕ ಬೌದ್ಧಿಕವಾಗಿ ಸಬಲನಾಗದೆ ನಿಜವಾದ ಬದಲಾವಣೆ ಸಾಧ್ಯವೇ ಇಲ್ಲ. ಆದರೆ, ಈ ವಿಷಯಕ್ಕೆ ಸಂಬಂಧಿಸಿದಂತೆ ನಮ್ಮ ಸಮಾಜ ಹಾಗೂ ಸರಕಾರಗಳ ನಿಲುವುಗಳೇ ವಿಚಿತ್ರವಾಗಿವೆ; ತಪ್ಪಾಗಿವೆ. ಪ್ರಾಥಮಿಕ ಶಾಲೆಗೆ ಕಲಿಸುವ ಶಿಕ್ಷಕರ ಕನಿಷ್ಠ ಅರ್ಹತೆ ಪಿಯುಸಿ, ನಂತರ ಟಿ.ಸಿ.ಹೆಚ್. ಆಗಿದ್ದರೆ ಸಾಕು ಎಂಬ ಧೋರಣೆಯೇ ತಪ್ಪು. ನಮ್ಮ ಇದುವರೆಗಿನ ಪ್ರಾಥಮಿಕ ಶಿಕ್ಷಣ ದುರ್ಬಲಗೊಳ್ಳುತ್ತ ಬಂದಿರುವುದಕ್ಕೆ ಮೂಲಭೂತ ಕಾರಣಗಳಲ್ಲಿ ಇದೂ ಒಂದು ಎಂಬುದನ್ನು ಈಗಾದರೂ ಅರಿಯಬೇಕಿದೆ. ವಿಶ್ವವಿದ್ಯಾಲಯ ಮಟ್ಟದ ಬೋಧನೆಗೆ ಹೆಚ್ಚು ಬೌದ್ಧಿಕ, ಶೈಕ್ಷಣಿಕ ಅರ್ಹತೆ ಅಗತ್ಯಗಳು; ಪ್ರಾಥಮಿಕ ಮಟ್ಟದ ಕಲಿಸುವಿಕೆಗೆ ಅಷ್ಟೊಂದು ಹೆಚ್ಚಿನ ಅರ್ಹತೆಯು ಅಗತ್ಯವಿಲ್ಲ ಎಂಬ ಆಲೋಚನೆಯಲ್ಲಿಯೇ ತಪ್ಪಿದೆ. ಶಿಕ್ಷಣ ಯಾವ ಮಟ್ಟದ್ದೇ ಆಗಿದ್ದರೂ ಶಿಕ್ಷಕರ ಬೌದ್ಧಿಕ ಹಾಗೂ ಶೈಕ್ಷಣಿಕ ಅರ್ಹತೆಗಳಿಗೆ ಸಂಬಂಧಿಸಿದಂತೆ ಸರಳ ತೀರ್ಮಾನಗಳಿಗೆ ಬರುವುದು ಸರಿಯಲ್ಲ. ಇಂಥಲ್ಲಿ ರಾಜಿ ಮಾಡಿಕೊಳ್ಳುವುದು ಸಾಂಸ್ಕೃತಿಕ ಆತ್ಮಹತ್ಯೆ. ಆದ್ದರಿಂದ ಪ್ರಾಥಮಿಕ ಶಾಲಾ ಶಿಕ್ಷಕರ ಕನಿಷ್ಠ ಅರ್ಹತೆಯು ಸ್ನಾತಕ/ಸ್ನಾತಕೋತ್ತರ ಪದವಿ ಹಾಗೂ ಸೂಕ್ತ ಶಿಕ್ಷಣ ಪದವಿ ಆಗಬೇಕು.

### ಹಾಗಾದರೆ ಸಂಬಳ ?

ಅರ್ಹತೆಗೆ ತಕ್ಕ ಸಂಬಳ ನೀಡಬೇಕಾದ್ದು ನ್ಯಾಯ. ಇನ್ನೂ ಸ್ಪಷ್ಟವಾಗಿ, ತೀವ್ರವಾಗಿ ಹೇಳಬೇಕೆಂದರೆ ಪ್ರಾಥಮಿಕ ಶಾಲಾ ಶಿಕ್ಷಕರಿಗೂ ಯು.ಜಿ.ಸಿ. ವೇತನ ಶ್ರೇಣಿಯನ್ನೇ ಯಾಕೆ ನೀಡಬಾರದು ? ಈ ಮಟ್ಟದ ಸಂಬಳ ನೀಡುವ ಹಾಗೂ ಅದಕ್ಕೆ ತಕ್ಕ ಫಲಿತಾಂಶ, ಅರ್ಹತೆ ನಿರೀಕ್ಷಿಸುವ ವ್ಯವಸ್ಥೆ ಇದ್ದರೆ ಶಾಲಾ ಶಿಕ್ಷಕನಾಗಬೇಕೋ, ವಿಶ್ವವಿದ್ಯಾಲಯ ಶಿಕ್ಷಕನಾಗಬೇಕೋ ಎಂಬುದು ಆಯ್ಕೆಯ ವಿಷಯವಾಗುತ್ತದೆ. ಪ್ರಾಥಮಿಕ ಶಾಲಾ ಶಿಕ್ಷಣವನ್ನು ಬಲಪಡಿಸುವುದು ಎಂದರೆ ಅಲ್ಲಿನ ಶಿಕ್ಷಕರನ್ನು ಶೈಕ್ಷಣಿಕವಾಗಿ-ಬೌದ್ಧಿಕವಾಗಿ-ಆರ್ಥಿಕವಾಗಿ ಕ್ರಾಂತಿಕಾರಕವಾಗಿ ಬಲಪಡಿಸುವುದು.

✦ ಹಾಗಾದರೆ ಈಗಿರುವ ಟಿ.ಸಿ.ಎಚ್. ಮಾಡಿರುವ ಶಿಕ್ಷಕರನ್ನು ಏನು ಮಾಡಬೇಕು ? ಇದು ಪರಿಹಾರವೇ ಇಲ್ಲದ ಸಮಸ್ಯೆಯೇನಲ್ಲ. ಈ ಶಿಕ್ಷಕರಲ್ಲೂ ಅಪಾರ ಸಾಮರ್ಥ್ಯ, ಆಸಕ್ತಿಗಳು ಇರುವವರು ಅನೇಕರಿದ್ದಾರೆ. ಇವರಿಗೆಲ್ಲ ೫-೬ ವರ್ಷಗಳ ಗಡವು ನೀಡಿ ಹೊಸ ನಿಗದಿತ ಅರ್ಹತೆ ಗಳಿಸಿಕೊಳ್ಳಲು ಅವಕಾಶ ನೀಡಬೇಕು ಅಥವಾ ಶಿಕ್ಷಣ ಇಲಾಖೆಯೇ ಇಂಥವರಿಗಾಗಿ ವಿಶೇಷ ಕೋರ್ಸುಗಳನ್ನು ಪರೀಕ್ಷೆಗಳನ್ನು ಯೋಜಿಸಬಹುದು.

✦ ಇದಕ್ಕೆಲ್ಲಾ ಹಣಕಾಸಿನ ಸಂಪನ್ಮೂಲದ ಕೊರತೆಯ ಕಾರಣ ಒಡ್ಡಬಹುದು. ಆದರೆ, ಹಣಕಾಸಿನ ಕಾರಣ ಒಡ್ಡಿ, ಇಂಥ ಯೋಜನೆಯನ್ನು ಒಪ್ಪಿಕೊಳ್ಳದೇ ಇರುವುದು ಪಾಪವೇ ಸರಿ. ಅಣುಬಾಂಬುಗಳಂಥ ಯುದ್ಧಾಸ್ತ್ರಗಳ ಮೇಲೆ ಸುರಿಯುವ ಹಣದಲ್ಲಿನ ಅರ್ಧದಷ್ಟು ಹಣವನ್ನು ಶಿಕ್ಷಣಕ್ಕೆ ತೊಡಗಿಸಿದರೆ ಇದೆಲ್ಲವನ್ನು ಸಾಧಿಸಬಹುದು. ಮನುಷ್ಯ ಸಂಸ್ಕೃತಿಯನ್ನು ಭಸ್ಮಗೊಳಿಸುವ

ಅಣುಬಾಂಬುಗಳಿಗೆ ಈ ಹಣ ವ್ಯಯಿಸುವ ಬದಲು, ಮನುಷ್ಯ ಸಂಸ್ಕೃತಿಯನ್ನು ನಿರ್ಮಿಸುವ ಶಿಕ್ಷಣಕ್ಕೆ ವ್ಯಯಿಸುವಂತೆ ನಮ್ಮ ಆಲೋಚನೆಯಲ್ಲಿಯೇ ಬದಲಾವಣೆ ಬರಬೇಕಿದೆ.

### ಪಠ್ಯಕ್ರಮ ಮತ್ತು ಪಠ್ಯಪುಸ್ತಕ

ಒಂದು ಅತ್ಯಂತ ಗುರುತರವಾದ ಜವಾಬ್ದಾರಿ ಶಿಕ್ಷಕರ ಮೇಲಿದೆ. ಅದೆಂದರೆ, ರಾಜ್ಯ ಸರಕಾರವೇ ನಿಗದಿ ಪಡಿಸಿದ ತಜ್ಞರ ಸಮಿತಿಗಳು ರೂಪಿಸಿದ ಪಠ್ಯಪುಸ್ತಕಗಳನ್ನು ಅನುಸರಿಸುವ ಪರಿಪಾಠವನ್ನು ಕೈಬಿಡುವುದು. ಆಗ ಶಿಕ್ಷಣ ಇಲಾಖೆಯ ಕೇಂದ್ರ ತಜ್ಞರ ಸಮಿತಿಯು ಪಠ್ಯಕ್ರಮದ ಮಾರ್ಗದರ್ಶಿ ಸೂತ್ರಗಳನ್ನು ನಿರೂಪಿಸಿದರೆ ಸಾಕು. ಅದಕ್ಕೆ ಅನುಗುಣವಾಗಿ ಆಯಾ ಶಿಕ್ಷಕರೇ ತಮ್ಮ ತಮ್ಮ ಪಠ್ಯಗಳನ್ನು ರೂಪಿಸುವ ಹೊಣೆ ಹೊರಬೇಕಾಗುತ್ತದೆ. ಬೇಕೆಂದರೆ, ಜಿಲ್ಲಾವಾರು ಸಾಂಸ್ಕೃತಿಕ, ಸಾಮಾಜಿಕ ನಿರೀಕ್ಷೆಗೆ ತಕ್ಕಂತೆ ಪಠ್ಯಪುಸ್ತಕಗಳನ್ನು ಆಯಾ ಜಿಲ್ಲಾ ಶಿಕ್ಷಕರು ರೂಪಿಸಬಹುದು. ಇದರಿಂದ ಯಾವುದೋ ಒಂದು ಭಾಗದ ಭಾಷಿಕ ಹಾಗೂ ಸಾಂಸ್ಕೃತಿಕ ಅಂಶಗಳನ್ನು ಇನ್ನೊಂದು ಭಾಗದ ಮಕ್ಕಳ ಮೇಲೆ ಹೇರುವುದಕ್ಕೆ ಪೂರ್ಣ ವಿರಾಮ ನೀಡಬಹುದು. ಇದಕ್ಕಿಂತ ಮುಖ್ಯವಾದ ಅಂಶವೆಂದರೆ ಉಪಸಂಸ್ಕೃತಿಗಳನ್ನು ನ್ಯಾಯಯುತ ರೀತಿಯಲ್ಲಿ ಶೈಕ್ಷಣಿಕವಾಗಿ ಅಧಿಕೃತಗೊಳಿಸಿ ದಂತೆಯೂ ಆಗುತ್ತದೆ. ಇದರಿಂದ ಕೇವಲ ಕರ್ನಾಟಕ ವೊಂದರಲ್ಲೇ ಒಂದೇ ವಿಷಯಕ್ಕೆ ಸಂಬಂಧಿಸಿದ ವೈವಿಧ್ಯಮಯ ಪಠ್ಯಪುಸ್ತಕಗಳು ದೊರೆಯುವಂತಾಗುತ್ತದೆ. ಕ್ರಿಯಾಶೀಲ ವಾಗಿರುವ ಶಿಕ್ಷಕರಿಗಂತೂ ಇದು ಹಬ್ಬದ ವಾತಾವರಣ ನಿರ್ಮಿಸಿಕೊಡಬಲ್ಲದು.

### ಸಮಗ್ರ ವ್ಯಕ್ತಿತ್ವ ವಿಕಾಸ

ಮಕ್ಕಳ ಸಮಗ್ರ ವ್ಯಕ್ತಿತ್ವದ ವಿಕಸನದ ದೃಷ್ಟಿಯಿಂದ 'ಸಾಂಸ್ಕೃತಿಕ ಅಂಶಗಳಿಗೂ' ಶಿಕ್ಷಣದಲ್ಲಿ ತೀವ್ರ ಗಮನ ಹರಿಸಬೇಕಾದ ತುರ್ತು ಇದೆ. ಇದುವರೆಗೆ ಈ ಅಂಶಗಳನ್ನು ಪಠ್ಯೇತರ ಚಟುವಟಿಕೆಗಳೆಂದು ಕರೆಯಲಾಗುತ್ತಿತ್ತು. ಆದರೆ ಕಲಿಕೆಯನ್ನು ಪಠ್ಯ ಮತ್ತು ಪಠ್ಯೇತರ ಎಂದು ವಿಂಗಡಿಸುವುದು ತುಂಬಾ ತಪ್ಪು ಹಾಗೂ ಅಪಾಯಕಾರಿ ನಿಲುವು.



ಕಸ ನಾನೇ ತೆಗೀಬೇಕಾ?
ಮತ್ತೆ ಸರಕಾರ ಇರೋದು ಯಾತಕ್ಕೆ?

ಆದ್ದರಿಂದ ಕಲಿಕೆಯಲ್ಲಿ ಬಹಳ ಮಹತ್ವ ಪಾತ್ರಹೊಂದಿರುವ ಅಂಥ ಅಂಶಗಳನ್ನು ''ಸಾಂಸ್ಕೃತಿಕ'' ಎಂದು ಇಲ್ಲಿ ಕರೆಯಲಾಗಿದೆ. ಗ್ರಾಮೀಣ ಪರಿಸರದ ಶಾಲೆಗಳಲ್ಲಿ ಈ ಸಾಂಸ್ಕೃತಿಕ ಅಂಶಗಳನ್ನು ಬಹು ಸುಲಭವಾಗಿ ಯೋಜಿಸಬಹುದು. ಅದೇ ಊರಿನ ಕುಂಬಾರ, ಕಂಬಾರರಂಥ ಕರಕುಶಲ ಕರ್ಮಿಗಳನ್ನು ಬಳಸಿಕೊಂಡು ಮಡಿಕೆ, ಕಂಬಾರಿಕೆ ಮುಂತಾದವುಗಳನ್ನು ಹೇಳಿಸಬಹುದು. ಸ್ಥಳೀಯ ವೃತ್ತಿಗಾಯಕರು/ಜಾನಪದ ಹಾಡುಗಾರರು/ಕಲಾವಿದರನ್ನು ಬಳಸಿಕೊಂಡು ಮಕ್ಕಳಿಗೆ ಜಾನಪದೀಯ ಅಂಶಗಳು ಹರಿದುಬರುವಂತೆ ದಿನವನ್ನು ರೂಪಿಸಬಹುದು. ಇದರಿಂದ ''ಸ್ಥಳೀಯತೆ''ಗೆ ಅಧಿಕೃತ ಮುದ್ರೆ ಬಿದ್ದು ಶಿಕ್ಷಣ ಕೇವಲ ಬೌದ್ಧಿಕ-ಚಟುವಟಿಕೆಯಲ್ಲ, ಜೀವನದೊಂದಿಗೆ ಪರಿಸರದೊಂದಿಗೆ ಇರುವ ಅವಿನಾಭಾವ ಸಂಬಂಧದ ಸ್ವರೂಪ ಎಂಬುದನ್ನು ಅರಿಯುವ ಪ್ರಬಲ ಸಾಧನವಾಗುತ್ತದೆ.

◆ ಇದರೊಂದಿಗೆ ಪ್ರಾಥಮಿಕ ಶಾಲಾ ಮಕ್ಕಳು ತಮ್ಮ ಆ ಹಂತದ ಶಿಕ್ಷಣ ಪೂರೈಸುವ ಹೊತ್ತಿಗೆ ತಮ್ಮ ಜಿಲ್ಲೆಯಲ್ಲಿನ ಪ್ರಮುಖ ಐತಿಹಾಸಿಕ, ಸಾಂಸ್ಕೃತಿಕ, ಔದ್ಯೋಗಿಕ ಸ್ಥಳಗಳನ್ನು ನೋಡುವ ಕಾರ್ಯಕ್ರಮವನ್ನು ರೂಪಿಸಿ ಜಾರಿಗೆ ತರಬೇಕು.

### ಭಾಷೆಗಳ ಕಲಿಕೆಯ ಬಗೆಗಿನ ಧೋರಣೆ

ಪ್ರಾಥಮಿಕ ಹಂತದಲ್ಲಿ ಮಕ್ಕಳು ಎಷ್ಟು ಭಾಷೆಗಳನ್ನು ಕಲಿಯಬಹುದು ? ಇತ್ತೀಚೆಗೆ ನಡೆದ ಸಂಶೋಧನೆಗಳು ಅತ್ಯಂತ ಕುತೂಹಲಕರ ಅಂಶಗಳನ್ನು ಹೊರಗೆಡಹಿವೆ. ಬಾಲ್ಯಾವಸ್ಥೆಯಲ್ಲಿಯೇ ಆರೋಗ್ಯಪೂರ್ಣ ಮಕ್ಕಳು ಕನಿಷ್ಠ ಎರಡು ಮೂರು ಭಾಷೆಗಳನ್ನು ಸಮರ್ಥವಾಗಿ ಕಲಿಯಲು ಸಾಧ್ಯವಿದೆ. ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಕಲಿಯುವ ಮಕ್ಕಳು ಹೆಚ್ಚು ಚುರುಕು, ತಾರ್ಕಿಕ ಬುದ್ಧಿಯುಳ್ಳವರು ಆಗಿರುತ್ತಾರೆ. ಆದ್ದರಿಂದ, ಮೊದಲ ತರಗತಿಯಲ್ಲಿಯೇ ಮಕ್ಕಳಿಗೆ ಮಾತೃಭಾಷೆಯೊಂದಿಗೆ ಇನ್ನೊಂದು ಅಂತರರಾಷ್ಟ್ರೀಯ ಸಂಪರ್ಕ ಭಾಷೆಯನ್ನು ಕಲಿಸುವುದು ಸೂಕ್ತ. ನಮ್ಮ ಇಂದಿನ ಸಂದರ್ಭದಲ್ಲಿ ಇಂಗ್ಲಿಷ್ ಆ ಭಾಷೆ ಎಂದು ಬಿಡಿಸಿ ಹೇಳಬೇಕಿಲ್ಲ. ಆದರೆ, ಆ ಹಂತದಲ್ಲಿ ಇಂಗ್ಲಿಷನ್ನು ಹೇಗೆ ಕಲಿಸಬೇಕು ಎಂಬುದನ್ನು ಸರಿಯಾಗಿ ಆಲೋಚಿಸಿ ಪಠ್ಯಕ್ರಮ, ಕಲಿಕಾ ಸಾಮಗ್ರಿ, ಶಿಕ್ಷಕರ ತರಬೇತಿ ಇತ್ಯಾದಿಗಳನ್ನು ರೂಪಿಸಬೇಕಾಗುತ್ತದೆ.

◆ ರಾಜ್ಯದ ಕೆಲವು ಜಿಲ್ಲೆಗಳಲ್ಲಿ ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆಯಡಿಯಲ್ಲಿ ಕೆಲವಾರು ಗಮನಾರ್ಹ ಪ್ರಯತ್ನಗಳು ನಡೆಯುತ್ತಿವೆ, ನಿಜ. ಆದಾಗ್ಯೂ ಒಟ್ಟಾರೆಯಾಗಿ ನೋಡಿದಾಗ ಆ ಪ್ರಯತ್ನ ಸಾಲದು ಎನಿಸುತ್ತದೆ. ಅದೇ ಹೊತ್ತಿಗೆ, ನಗರ ಪ್ರದೇಶಗಳಲ್ಲಿ ಪ್ರತಿಷ್ಠಿತ ಇಂಗ್ಲಿಷ್ ಮಾಧ್ಯಮ ಶಾಲೆಗಳಲ್ಲದೆ, ಅಂತರರಾಷ್ಟ್ರೀಯ ಶಾಲೆಗಳು ವರ್ಷ ವರ್ಷ ಹೆಚ್ಚುತ್ತಿವೆ. ಇಂಥ ಪರಿಸ್ಥಿತಿಯಲ್ಲಿ ಸರಕಾರಿ ಪ್ರಾಥಮಿಕ ಶಿಕ್ಷಣವನ್ನು ಸಮರ್ಥವಾಗಿ, ಸಕ್ರಿಯವಾಗಿ ಬಲಪಡಿಸುವ ಬಗ್ಗೆ ಯೋಚಿಸದೇ, ಯೋಜಿಸದೇ ಇರುವುದು ಪ್ರಜ್ಞಾವಂತರಾಗಿರುವ ಯಾರಿಗಾದರೂ ಭಯವುಂಟುಮಾಡುತ್ತದೆ. ಈ ಹಿನ್ನೆಲೆಯಲ್ಲಿ ಆಳವಾಗಿ ಚರ್ಚಿಸುವ, ಕಾರ್ಯಕ್ರಮ ರೂಪಿಸಿ ಜಾರಿಗೆ ತರುವ ಕಾರ್ಯ ತೀವ್ರವಾಗಿ ಆಗಬೇಕಿದೆ.

ಶಿವಾನಂದ ಹೊಂಬಳ
ಭಾಷಾ ಶಿಕ್ಷಕರು, ವ್ಯಾಲಿ ಶಾಲೆ, ಕನಕಪುರ ರಸ್ತೆ, ತಾತಗುಣಿ ಅಂಚೆ,
ಬೆಂಗಳೂರು - ೬೨

---

(೪೭ನೇ ಪುಟದಿಂದ)

ಕೂಗೆದ್ದಿತು. ಆ ದಿನ ನಮ್ಮ ಅಂದಿನ ಪ್ರಧಾನಿ ಪಂಡಿತ ಜವಹರಲಾಲ್ ನೆಹರೂರವರು ಪ್ರವಾಸ ಕೈಗೊಳ್ಳದಿರಲು ಜ್ಯೋತಿಷಿಗಳು ಎಚ್ಚರಿಸಿದ್ದರು. ಆದರೆ ವೈಜ್ಞಾನಿಕ ಮನೋಭಾವದ ನೆಹರುರವರು ಅಂದೇ ವಿಮಾನ ಪ್ರಯಾಣ ಮಾಡಿ ಮೂಢಜನರನ್ನು ದಂಗುಬಡಿಸಿದರು.

ಗ್ರಹಕಕ್ಷಾತಲಗಳು ವಾಲಿಕೊಂಡಿದ್ದು, ವಿಭಿನ್ನ ಪರಿಭ್ರಮಣದ ವೇಗವೊಂದಿದ್ದು, ಅವು ಒಂದೇ ಕಕ್ಷಾತಲದ ಮೇಲೆ ಒಂದೇ ಗೆರೆಯ ಮೇಲೆ ಬರಲಾರವು. ಗತಿಶೀಲವಾಗಿರುವ ಗ್ರಹಗಳು ಏಕರೇಖಸ್ಥವಾಗುತ್ತವೆ ಎಂಬುದು ಮೌಢ್ಯವಲ್ಲದೆ ಮತ್ತೇನಲ್ಲ. ಸೌರವ್ಯೂಹದ ಸಮಸ್ತ ಗ್ರಹೋಪಗ್ರಹಗಳ ಸಮಸ್ತ ರಾಶಿ ಸೂರ್ಯ ರಾಶಿಯ ೦.೦೦೧೩೪೫೦೮ರಷ್ಟು ಮಾತ್ರವಿದೆ. ಇದಿಷ್ಟೂ ಭೂಮಿಯಲ್ಲೇ ಕೇಂದ್ರೀಕೃತವಾಗಿದೆ ಎಂದು ಭಾವಿಸಿದರೂ ಆದರಿಂದ ಸೂರ್ಯನ ಮೇಲ್ಮೈನ ಪ್ರಾಥಮಿಕ ಕಣ ಕೂಡ ಕದಲಲಾರದು.

ಇದೇ ತರ್ಕ ಸೂರ್ಯ-ದೈತ್ಯ ಗ್ರಹಗಳ ನಡುವಿನ 'ಗುರುತ್ವಾಕರ್ಷಣ ಕಾಳಗ'ಕ್ಕೆ ಅನ್ವಯಿಸುತ್ತದೆ.

ಆಗಿಂದಾಗ್ಗೆ ಸೃಷ್ಟಿಸಲಾಗುವ ಈ ಪ್ರಳಯ ಭೀತಿಗೆ ಸುರಕ್ಷಾ ಕ್ರಮಗಳನ್ನು ವಿದೇಶಿಯರು ಅನುಸರಿಸಿದರೆ, ನಮ್ಮ ದೇಶದವರು ವಿಶೇಷ ಪೂಜೆ ವಿಧಿ ವಿಧಾನಗಳಿಗೆ ಮೊರೆ ಹೋಗುತ್ತಾರೆ. ದೇಶದಲ್ಲಿರುವ ಮುಕ್ಕೋಟಿ ದೇವತೆಗಳ ಸಾಲಿನಲ್ಲಿ 'ಪ್ರಳಯೇಶ್ವರ' ಎಂಬ ಮತ್ತೊಂದು ದೇವರನ್ನು ಸೃಷ್ಟಿಸಿಬಿಡುತ್ತಾರೆ. ಒಂದು ಪಕ್ಷ ಈ ಪ್ರಳಯ ಸಂಭವಿಸದಿದ್ದರೆ, ವಿಶೇಷ ಪೂಜೆ ಸಲ್ಲಿಸಿದ್ದರಿಂದಲೇ ವಿನಾಶ ನಾಮಾವಶೇಷವಾಯಿತೆಂದು ವಾದಿಸುತ್ತಾರೆ ! ಅಸ್ತಿತ್ವವಿಲ್ಲದ ಅಸ್ವಾಸ್ಥ್ಯಕ್ಕೆ ಒಂದು ದಿವ್ಯೌಷಧದ ಶೋಧನೆಗೆ ತೊಡಗುವ ಮೂಢರು ಇದ್ದಾರೆ ಎಚ್ಚರಿಕೆ !!

ದಿನಾಂಕ ೫-೫-೨೦೦೦ದ ಪ್ರಳಯಭೀತಿಯ ಬಗ್ಗೆ ಯಾವುದೇ ರೀತಿಯಿಂದಲೂ ದಿಗಿಲುಗೊಳ್ಳುವ ಕಾರಣವಿಲ್ಲ. ಪ್ರಳಯ ಸುದ್ದಿಗಳನ್ನು ನಿರಾಧಾರವೆಂದು ನಿರ್ಲಕ್ಷಿಸಿ, ಸ್ವಸ್ಥ ಮನಸ್ಸಿನಿಂದ ಎಂದಿನಂತೆ ನಮ್ಮ ನಿತ್ಯ ಕಾಯಕಗಳಲ್ಲಿ ತೊಡಗೋಣ.

ವೆಂಕಟಯ್ಯ ಅಪ್ಪಗೆರೆ
ಮುಖ್ಯ ವ್ಯವಸ್ಥಾಪಕರು, ತುಂಗಭದ್ರಾ ಗ್ರಾಮೀಣ ಬ್ಯಾಂಕ್, ಪ್ರಧಾನ ಕಛೇರಿ, ಬಳ್ಳಾರಿ-೫೮೩ ೧೦೩

# ಮನೋವೈದ್ಯಕೀಯದಲ್ಲಿ ಹೊಸತೇನು?

ಮಾನಸಿಕ ಕಾಯಿಲೆಗಳು ಇಂದು ನಿನ್ನೆಯವಲ್ಲ. ಸಾವಿರಾರು ವರ್ಷಗಳಿಂದ ಮನುಷ್ಯನನ್ನು ಕಾಡುತ್ತಲೇ ಇವೆ. ಮನೋರೋಗಿಗಳ ವಿವರಗಳನ್ನು ಜಗತ್ತಿನ ಯಾವುದೇ ಹಳೆಯ ಸಾಹಿತ್ಯದಲ್ಲಿ ಕಾಣಬಹುದು. ನಮ್ಮ ದೇಶದಲ್ಲೂ, ಇದರ ಬಗ್ಗೆ ಸಾಕಷ್ಟು ಮಾಹಿತಿ ಅಥರ್ವ ವೇದದಲ್ಲಿದೆ. ಭೂತ ಪ್ರೇತಗಳು, ಮದ್ದುಮಾಟಗಳು, ನೆರವೇರದ ಆಶೆಗಳು - ಸೋಲು ನಿರಾಶೆಗಳು ಅರಿಷಡ್ವರ್ಗಗಳು ಮಾನಸಿಕ ಕಾಯಿಲೆಗೆ ಕಾರಣ. ಇದಕ್ಕೆ ಚಿಕಿತ್ಸೆ ಎಂದರೆ ಭೂತೋಚ್ಚಾಟನೆ, ಪ್ರತಿಮಾಟ, ಮಂತ್ರ, ದೈವಕೃಪೆ, ಪೂಜೆ ಪುನಸ್ಕಾರಗಳು, ಪುಣ್ಯ ಕ್ಷೇತ್ರಗಳ ದರ್ಶನ, ಮಹಾಮಹಿಮರ ಆಶೀರ್ವಾದ ಸ್ಪರ್ಶ ಎಂದು ಈಗಲೂ ಜನ ನಂಬಿದ್ದಾರೆ. ಈ ಶತಮಾನದ ಆದಿಯಲ್ಲಿ ಪ್ರಸಿದ್ಧ ನರರೋಗ ತಜ್ಞ ಸಿಗ್ಮಂಡ್ ಫ್ರಾಯ್ಡ್ ಮತ್ತು ಅವನ ಸಮಕಾಲೀನರು, ಉದಾಹರಣೆಗೆ ಕಾರ್ಲ್ ಕಾಹ್ಲ್‌ಬಾಮ್, ಹೆನ್ರಿ ಮೌಡ್ಸ್ಲೆ, ಜೀನ್ ಮಾರ್ಟಿನ್, ಚಾರ್‌ಕಾಟ್, ಎಮಿಲ್ ಕ್ರೆಪ್ಲಿನ್, ಆಲ್‌ಫ್ರೆಡ್ ಬಿನೆ, ಹ್ಯಾವ್‌ಲಾಕ್ ಎಲಿಸ್, ಪಿಯರ್‌ರೆ ಜನೆಟ್, ಇವಾನ್ ಪಾವ್‌ಲೊವ್, ಆಲೋಯಿಸ್ ಆಲ್ಜೀಮರ್, ಕ್ಲಿಫರ್ಡ್ ಬೀರ್ಸ್, ಯಾಗೆನ್ ಬಾಯ್ಲರ್, ಆಲ್‌ಫ್ರೆಡ್ ಆಡ್ಲರ್, ಸಿ. ಜಿ. ಯುಂಗ್, ಹೆರ್‌ಮನ್ ರೋರ್ಶಾಕ್, ಅಡಾಲ್ಫ್ ಮೇಯರ್ ಇನ್ನೂ ಮುಂತಾದವರು ಮಾನಸಿಕ ಕಾಯಿಲೆಗಳನ್ನು ವರ್ಗೀಕರಿಸಲು, ಅವುಗಳು ಬರಲು ಕಾರಣಗಳು ಮತ್ತು ಅವುಗಳ ಚಿಕಿತ್ಸಾ ವಿಧಾನಗಳ ಬಗ್ಗೆ ಮಹತ್ತರ ಕೊಡುಗೆಗಳನ್ನು ನೀಡಿದ್ದಾರೆ. ಇವರೆಲ್ಲರ ಮತ್ತು ಇನ್ನೂ ಅನೇಕರ ಸಾಧನೆಗಳಿಂದಾಗಿ, ಮನೋವೈದ್ಯಕೀಯ ಅಥವಾ ಸೈಕಿಯಾಟ್ರಿ ಇಂದು ವೈದ್ಯಕೀಯ ಕ್ಷೇತ್ರದಲ್ಲಿ ತನ್ನದೇ ಆದ ಸ್ಥಾನ-ಮಾನಗಳನ್ನು ಕಂಡುಕೊಂಡಿದೆ. ಭೂತವಿದ್ಯೆ ಎನಿಸಿಕೊಂಡಿದ್ದ ಅದು ಇಂದು ವೈದ್ಯವಿಜ್ಞಾನದ ಒಂದು ಪ್ರಮುಖ ಶಾಖೆಯಾಗಿದೆ.

ನಮ್ಮ ದೇಶದಲ್ಲಿ ಮನೋವೈದ್ಯಕೀಯ ವೇದಗಳ ಕಾಲದಿಂದ ಇದ್ದರೂ, ಪ್ರಧಾನವಾಗಿ ಅದು ಭೂತವಿದ್ಯೆಯಾಗಿಯೇ ಮುಂದುವರೆಯಿತು. 'ಹುಚ್ಚು ಬೆಪ್ಪು ಶಿವಲೀಲೆ' ಎಂದು ವಿವರಿಸಲ್ಪಟ್ಟು, ಈ ವ್ಯಕ್ತಿಗಳು ತಮ್ಮ ಪೂರ್ವಜನ್ಮದ ಪಾಪಶೇಷದಿಂದ ಅಥವಾ ಈ ಜನ್ಮದ ತಮ್ಮ ಅನೀತಿಯುತ ಕೃತ್ಯಗಳಿಂದ ಬುದ್ಧಿ ಭ್ರಮಣೆಗೀಡಾಗುತ್ತಾರೆ; ಇಲ್ಲವೇ ದುಷ್ಟ ಶಕ್ತಿಗಳ ಕಾಟಕ್ಕೆ ತುತ್ತಾಗುತ್ತಾರೆ; ಮದ್ದು ಮಾಟಗಳ ಬಲೆಗೆ ಬೀಳುತ್ತಾರೆ; ಹುಚ್ಚು ಬೆಪ್ಪು ಶಿವಲೀಲೆಗಳು ವಾಸಿಯಾಗುವುದಿಲ್ಲ, ಅನುಭವಿಸಬೇಕು ಎಂದು ಹತಾಶ ಭಾವನೆಯನ್ನು ಜನ ಬೆಳೆಸಿಕೊಂಡರು. ಈ ರೋಗ ಪೀಡಿತರನ್ನು ದೇವಸ್ಥಾನ, ಮಠಗಳು ಪುಣ್ಯಕ್ಷೇತ್ರಗಳಿಗೆ ಕರೆದೊಯ್ಯುತ್ತಿದ್ದರು. ವಾಸಿಯಾಗದಿದ್ದರೆ ಅಲ್ಲೇ ಬಿಟ್ಟು ಬಿಡುತ್ತಿದ್ದರು. ರೋಗಿಗಳು ಜನರ ಕರುಣೆ ಅನುಕಂಪ ತಿರಸ್ಕಾರಗಳಿಗೆ ತುತ್ತಾಗಿ ಬದುಕುತ್ತಿದ್ದರು. ಅಕಾಲ ಮರಣಕ್ಕೆ ತುತ್ತಾಗುತ್ತಿದ್ದರು. ನಮ್ಮ ದೇಶಕ್ಕೆ ಕಾಲಿಟ್ಟ ಬ್ರಿಟಿಷರು ೧೭೪೫, ೧೭೮೫, ೧೭೯೪ರಷ್ಟು ಹಿಂದೆಯೇ, ಮನೋರೋಗಿಗಳನ್ನು ಕೂಡಿಹಾಕುವ 'ಮೆಂಟಲ್ ಅಸೈಲಮ್'ಗಳನ್ನು ಬೊಂಬಾಯಿ, ಕಲ್ಕತ್ತ, ಮದ್ರಾಸುಗಳಲ್ಲಿ ಸ್ಥಾಪಿಸಿದರು. ಈ ಚಾಳಿ ಮುಂದುವರೆದು ೧೯೬೬ರ ವೇಳೆಗೆ, ಭಾರತದಲ್ಲಿ ಸುಮಾರು ೪೦ ಮಾನಸಿಕ ಆಸ್ಪತ್ರೆಗಳಿದ್ದುವು. ಇವು ಮನೋರೋಗಗಳು ಮತ್ತು




ಮಾನಸಿಕ ರೋಗಿಗಳ ಬಗ್ಗೆ ಜನರಿಗಿದ್ದ ಭಯ, ತಿರಸ್ಕಾರಗಳನ್ನು ಮತ್ತಷ್ಟು ಹೆಚ್ಚಿಸಿದುವು. ಸಾಮಾಜಿಕ ಕಳಂಕ ಇವುಗಳಿಗೆ ಅಂಟಿಕೊಂಡಿತು. ಜನ ಈ ಆಸ್ಪತ್ರೆಗೆ ಹೋಗುವುದೆಂದರೆ ಬೆಚ್ಚಿ ಬೀಳುವಂತಾಯಿತು. ಹೊರೆ ಎನಿಸಿದ ತಮ್ಮ ರೋಗಿಗಳನ್ನು ಅಲ್ಲಿಗೆ ಎಸೆಯುವಂತಾಯಿತು. ನಮಗೆ ಸ್ವಾತಂತ್ರ್ಯ ಬಂದಾಗಲೂ ನಮ್ಮ ದೇಶದಲ್ಲಿ ಮನೋವೈದ್ಯರನ್ನು ತಯಾರುಮಾಡುವ ಒಂದು ಕೇಂದ್ರವೂ ಇರಲಿಲ್ಲ. ೧೯೫೪ರಲ್ಲಿ ದೇಶದ ಪ್ರಪ್ರಥಮ ಮಾನಸಿಕ ಆರೋಗ್ಯ ತರಪೇತಿ ಸಂಸ್ಥೆ (ಇಂದಿನ ನಿಮ್ಹಾನ್ಸ್) ಬೆಂಗಳೂರಿನಲ್ಲಿ ಸ್ಥಾಪಿತವಾಯಿತು.

**ಡಾ॥ ಸಿ. ಆರ್. ಚಂದ್ರಶೇಖರ್**

ವೈದ್ಯಕೀಯ ಕಾಲೇಜುಗಳಲ್ಲಿ ಕ್ರಮಬದ್ಧವಾಗಿ ಮನೋವೈದ್ಯಕೀಯ ತರಪೇತಿ ಪ್ರಾರಂಭವಾಗಿದ್ದು ೧೯೫೫ರ ನಂತರವೇ. ಇಂದು ಸುಮಾರು ೪೫ ಕೇಂದ್ರಗಳು ಮನೋವೈದ್ಯಕೀಯದಲ್ಲಿ ಡಿಪ್ಲೊಮ ಮತ್ತು ಡಿಗ್ರಿ ಕೋರ್ಸುಗಳನ್ನು ನಡೆಸುತ್ತಿವೆ. ಸುಮಾರು ನೂರಿಪ್ಪತ್ತು ಮನೋವೈದ್ಯರು ಪ್ರತಿವರ್ಷ ಈ ಸಂಸ್ಥೆಗಳಿಂದ ಹೊರ ಬರುತ್ತಿದ್ದಾರೆ. ಈಗ ದೇಶದಲ್ಲಿ ಸುಮಾರು ೩೦೦೦ ಮನೋವೈದ್ಯರು, ೬೦೦ ಚಿಕಿತ್ಸಾ ಮನಶ್ಶಾಸ್ತ್ರಜ್ಞರು, ೫೦೦ ಮನೋವೈದ್ಯ ಸಮಾಜ ಕಾರ್ಯಕರ್ತರು, ೬೦೦ ಮನೋವೈದ್ಯಕೀಯದಲ್ಲಿ ತರಪೇತಿ ಪಡೆದ ಶುಶ್ರೂಷಕರಿದ್ದಾರೆ. ಕೇರಳ, ತಮಿಳುನಾಡಿನಂತಹ ರಾಜ್ಯಗಳಲ್ಲಿ ಪ್ರತಿ ಜಿಲ್ಲೆಯಲ್ಲಿ ಮನೋ ವೈದ್ಯಕೀಯ ಸೌಲಭ್ಯಗಳಿವೆ. ಕಳೆದ ಮೂರು ನಾಲ್ಕು ದಶಕಗಳಲ್ಲಿ ಮನೋವೈದ್ಯಕೀಯ ರಂಗದಲ್ಲಿ ಆದ ಬೆಳವಣಿಗೆ ಮತ್ತು ಹೊಸ ಆವಿಷ್ಕಾರಗಳೇನು ?

### ಮನೋರೋಗಿಗಳ ಸಂಖ್ಯೆ

ಮನೆಮನೆಗೆ ಹೋಗಿ ನಡೆಸಿದ ೪೦ಕ್ಕೂ ಹೆಚ್ಚಿನ ಸರ್ವೇಕ್ಷಣೆಗಳ ಪ್ರಕಾರ, ಪ್ರತಿ ಒಂದು ಸಾವಿರ ಜನಸಂಖ್ಯೆಯಲ್ಲಿ ಐದು ಜನಕ್ಕೆ ತೀವ್ರತರ ಮಾನಸಿಕ ರೋಗಿಗಳೂ, ಹಾಗೂ ಕನಿಷ್ಠ ಒಂದು ನೂರು ಅಲ್ಪಮಟ್ಟದ ಮಾನಸಿಕ ರೋಗಿಗಳೂ ಇರುತ್ತಾರೆ. ಎಲ್ಲ ವರ್ಗಗಳಲ್ಲಿ ಎಲ್ಲ ವಯಸ್ಸಿನವರಲ್ಲಿ, ಹಳ್ಳಿ ಪಟ್ಟಣಗಳಲ್ಲಿ, ಸ್ತ್ರೀಪುರುಷರಲ್ಲಿ ಬೇಧಭಾವ ಇಲ್ಲದೆ ಮನೋ ರೋಗಗಳು ಇರುತ್ತವೆ. ಮನೋ ರೋಗಗಳು ಗ್ರಾಮೀಣ ಜನರಿಗಿಂತ ಪಟ್ಟಣ ವಾಸಿಗಳಲ್ಲಿ, ಪುರುಷರಿಗಿಂತ ಸ್ತ್ರೀಯರಲ್ಲಿ, ಹದಿವಯಸ್ಸು ಮತ್ತು ಇಳಿವಯಸ್ಸಿನವರಲ್ಲಿ, ಒಂಟಿಯಾಗಿ ಜೀವಿಸುವವರಲ್ಲಿ, ಮದ್ಯ-ಮಾದಕ ಪದಾರ್ಥಗಳ ವ್ಯಸನಿಗಳಲ್ಲಿ ಸ್ವಲ್ಪ ಜಾಸ್ತಿ ಎಂದು ತಿಳಿದುಬರುತ್ತದೆ.

**೨. ಎಷ್ಟು ರೀತಿಯ ಮಾನಸಿಕ ಕಾಯಿಲೆಗಳು ?** ಅಂತರರಾಷ್ಟ್ರೀಯ ಕಾಯಿಲೆಗಳ ವಿಂಗಡಣೆ ಹತ್ತನೇ ಆವೃತ್ತಿ (INTERNATIONAL CLASSIFICATION OF DISEASES-10th VERSION)ಯ ಪ್ರಕಾರ ಹತ್ತು ಗುಂಪುಗಳಾಗಿ ವಿಂಗಡಿಸಲಾಗಿದೆ.

೧. ಮಿದುಳಿಗೆ ಹಾನಿಯಾಗಿ, ಅದರಿಂದ ಬರುವ ಮಾನಸಿಕ ಕಾಯಿಲೆಗಳು. ಮುಖ್ಯವಾಗಿ ಡೆಮೆನ್ಷಿಯಾ-ಮತಿಹೀನಸ್ಥಿತಿ. ಇದು ಇಳಿ ವಯಸ್ಸಿನಲ್ಲಿ ಕಂಡು ಬರುವ ಸಾಮಾನ್ಯ ಕಾಯಿಲೆ. ನೆನಪು, ಬುದ್ಧಿಶಕ್ತಿ ಹಾಳಾಗುತ್ತದೆ.

೨. ಮದ್ಯಪಾನ ಮತ್ತು ಮಾದಕ ವಸ್ತುಗಳ ಸೇವನೆಯಿಂದ ಬರುವ ಮಾನಸಿಕ ಕಾಯಿಲೆಗಳು : ನಡುಕ ಸನ್ನಿ, ಸಂಶಯ ಪ್ರವೃತ್ತಿ ಇತ್ಯಾದಿ.

೩. ಸ್ಕಿಜೋಫ್ರೀನಿಯಾ ಮತ್ತು ಅವಾಸ್ತವಿಕ ಹಾಗೂ ತಪ್ಪು ನಂಬಿಕೆಗಳಿರುವ ಕಾಯಿಲೆಗಳು. ವ್ಯಕ್ತಿಯ ಆಲೋಚನೆ, ಭಾವನೆ, ಸಂವೇದನೆ, ಸಾಮಾಜಿಕ ಪ್ರಜ್ಞೆ ಅಸ್ತವ್ಯಸ್ತಗೊಳ್ಳುತ್ತದೆ.

೪. ಭಾವನೆಗಳ ಕಾಯಿಲೆಗಳು : ಅತಿ ಸಂತೋಷ, ಕೋಪ, ಅತಿದುಃಖ, ಈ ಕಾಯಿಲೆಗಳ ವೈಶಿಷ್ಟ್ಯ. ಉದಾ : ಮೇನಿಯಾ, ಖಿನ್ನತೆ ರೋಗ.

೫. ಮನೋದೌರ್ಬಲ್ಯ, ಮಾನಸಿಕ ಒತ್ತಡಕ್ಕೆ ಸಂಬಂಧಿಸಿದ ಕಾಯಿಲೆಗಳು. ಉದಾ: ಆತಂಕ, ಖಿನ್ನತೆ, ಉನ್ಮಾದ, ಶಾರೀರಕ ನೋವುಗಳು.

೬. ಆಹಾರ ಸೇವನೆ, ನಿದ್ರೆ, ಲೈಂಗಿಕ ಕ್ರಿಯೆಗೆ ಸಂಬಂಧಿಸಿದ ಏರುಪೇರುಗಳಿರುವ ಕಾಯಿಲೆಗಳು.

೭. ವ್ಯಕ್ತಿತ್ವ ದೋಷಗಳಿರುವ ಕಾಯಿಲೆಗಳು.

೮. ಬುದ್ಧಿಮಾಂದ್ಯತೆ.

೯. ಮಕ್ಕಳಲ್ಲಿ ಮಾನಸಿಕ ಬೆಳವಣಿಗೆ ನಿಧಾನವಾಗುವ ಕಾಯಿಲೆಗಳು. ಕಲಿಯಲು ಹಿಂದೆ ಬೀಳುವುದು, ಮಾತಿನ ತೊಂದರೆ, ಆಟಿಸಂ. ಇತ್ಯಾದಿ.

೧೦. ಮಕ್ಕಳು ಮತ್ತು ಹದಿಹರೆಯದವರಲ್ಲಿ ಕಂಡುಬರುವ ನಡೆವಳಿಕೆ ಮತ್ತು ಭಾವನೆಗಳಿಗೆ ಸಂಬಂಧಿಸಿದ ಕಾಯಿಲೆಗಳು.

ಒಂದೊಂದು ಗುಂಪನ್ನೂ ಮತ್ತೆ ಹತ್ತಕ್ಕಿಂತ ಹೆಚ್ಚು ಉಪ ಗುಂಪುಗಳನ್ನಾಗಿ ವಿಭಜಿಸಬಹುದು. ಹೀಗೆ ಮನೋ ವೈದ್ಯಕೀಯದಲ್ಲಿ ರೋಗ ನಿರ್ಣಯ ಈಗ ಅತಿ ಕ್ಲಿಷ್ಟವಾಗುತ್ತಾ ನಡೆದಿದೆ.

**೩. ರೋಗಕಾರಕಗಳು**

ಯಾವ ಕಾರಣದಿಂದ ಮಾನಸಿಕ ಕಾಯಿಲೆ ಬರುತ್ತದೆ, ಇದು ಶರೀರದೊಳಗೇ ಹುಟ್ಟುತ್ತದೋ ಅಥವಾ ಪರಿಸರದ ಪ್ರಭಾವದಿಂದ ಬರುತ್ತದೋ, ಆನುವಂಶೀಯವೋ ಎಂಬುದರ ಬಗ್ಗೆ ಸಾಕಷ್ಟು ಸಂಶೋಧನೆಗಳು ನಡೆದಿವೆ, ನಡೆಯುತ್ತಿವೆ.

ಶೇಕಡಾ ೧೦ರಷ್ಟು ಪ್ರಕರಣಗಳಲ್ಲಿ ಮಾತ್ರ ಮಾನಸಿಕ ಕಾಯಿಲೆಗಳು ಆನುವಂಶಿಕವಾಗಿ ಬರುತ್ತವೆ. ಉಳಿದ ೯೦ರಷ್ಟು ಪ್ರಕರಣಗಳಲ್ಲಿ ಅದರ ಪಾತ್ರವಿಲ್ಲ ಎಂಬುದು ಅವಳಿ-ಜವಳಿ ಮಕ್ಕಳ ಅಧ್ಯಯನ (Twins-study), ದತ್ತು ಮಕ್ಕಳ ಅಧ್ಯಯನ (Adoption Studies)ಗಳಿಂದ ಸ್ಪಷ್ಟವಾಗಿದೆ.

ಶೇ. ೫ರಷ್ಟು ಮಾನಸಿಕ ರೋಗಗಳು ಮೆದುಳಿಗಾದ ಹಾನಿಯಿಂದ ಬರುತ್ತವೆ. ರೋಗಾಣುಗಳ ಸೋಂಕು, ನೇರ ಪೆಟ್ಟು, ಮಿದುಳಿಗೆ ರಕ್ತಪೂರೈಕೆಯಲ್ಲಿನ ವ್ಯತ್ಯಯ, ನಂಜುವಸ್ತುಗಳ ಸೇವನೆ ಅಥವಾ ನಂಜುವಸ್ತುಗಳು ದೇಹದೊಳಗೇ ಉತ್ಪತ್ತಿಯಾಗುವುದು (ಲಿವರ್ ಮತ್ತು ಮೂತ್ರಪಿಂಡದ ಸೋಲುವೆಯಲ್ಲಿ). ನರಕೋಶಗಳು ನಶಿಸುವುದು. ಗರ್ಭಧಾರಣೆ, ಹೆರಿಗೆ ಮತ್ತು ಹೆರಿಗೆ ನಂತರದ ಮೊದಲ ಮೂರುವರ್ಷಗಳಲ್ಲಿ ತಾಯಿ ಮಗುವಿನ ಅಪೌಷ್ಟಿಕತೆ, ಹೆರಿಗೆ ಕಷ್ಟವಾಗುವುದು, ಬರಡು ಮತ್ತು ಮಲಿನ ವಾತಾವರಣ ಮಿದುಳ ಹಾನಿಗೆ ಕಾರಣವಾಗಬಹುದು.

ಅಹಿತಕರ ಪರಿಸರ, ಮೇಲಿಂದ ಮೇಲೆ ಬರುವ ಕಷ್ಟನಷ್ಟಗಳು, ಜವಾಬ್ದಾರಿಗಳು, ಸೋಲು ನಿರಾಶೆಗಳು, ಮಾನಸಿಕ ಒತ್ತಡವನ್ನು ಹೆಚ್ಚಿಸುವ ಆಸೆ ಆಕಾಂಕ್ಷೆಗಳು, ಸ್ಪರ್ಧೆ, ಅನಿಶ್ಚಯತೆ, ಮುಟ್ಟಲಾಗದ ಗುರಿಗಳು, ಸಾಮಾಜಿಕ ಮತ್ತು ವೈಯಕ್ತಿಕ ಅವ್ಯವಸ್ಥೆ, ಅಶಿಸ್ತು, ಪ್ರತಿ ವಿಶ್ವಾಸ ತೋರದ ಕುಟುಂಬ ಮತ್ತು ಸಂಬಂಧಪಟ್ಟವರು, ಪರಿಸರ ಮಾಲಿನ್ಯ - ಇವೆಲ್ಲ ಅಲ್ಪಮಟ್ಟದ ಮಾನಸಿಕ ಕಾಯಿಲೆಗಳನ್ನು




**ನರಕೋಶ**

**ನಮ್ಮ ಮಿದುಳಿನಲ್ಲಿ 1000 ಕೋಟಿ ನರಕೋಶಗಳಿವೆ**

ತರುತ್ತವೆ. (೫,೬,೭,೯ ಮತ್ತು ೧೦ನೇ ಗುಂಪಿನ ಕಾಯಿಲೆಗಳು). ಅಥವಾ ೧,೨,೩ ಮತ್ತು ೪ನೇ ಗುಂಪಿನ ಕಾಯಿಲೆಗಳನ್ನು ಉಲ್ಬಣಗೊಳಿಸುತ್ತವೆ ಎಂದು ಸಾಬೀತಾಗಿದೆ.

**ನರವಾಹಕ ವ್ಯವಸ್ಥೆ ಮತ್ತು ಹಾರ್ಮೋನುಗಳು :** ಮಿದುಳಿನ ನರಕೋಶಗಳು ಒಂದಕ್ಕೊಂದು ಸಂಪರ್ಕ ಮಾಡುವ ಜಾಗ 'ಸೈನಾಪ್ಸ್'ಗಳಲ್ಲಿ ಅನೇಕ ಬಗೆಯ ರಾಸಾಯನಿಕ ವಸ್ತುಗಳು 'ಸಂದೇಶವಾಹಕ'ವಾಗಿ ಕೆಲಸ ಮಾಡುತ್ತವೆ. ಇವನ್ನು 'ನ್ಯೂರೋಟ್ರಾನ್ಸ್‌ಮಿಟರ್ಸ್' ಎನ್ನುತ್ತಾರೆ. ಇವು ಮಿದುಳಿನ ವಿವಿಧ ಭಾಗಗಳು ಸಮರ್ಪಕವಾಗಿ ಕೆಲಸ ಮಾಡಿ, ಮನಸ್ಸಿನ ಎಲ್ಲ ಚಟುವಟಿಕೆಗಳನ್ನು ನಿರ್ದೇಶಿಸಬೇಕು. ಮುಖ್ಯವಾದ ನರವಾಹಕಗಳು :

ಅ) **ಅಮೈನುಗಳು** : ಸೆರೊಟೊನಿನ್, ಡೋಪಮಿನ್, ನಾರ್‌ಪಿನೆಫ್ರಿನ್, ಎಪಿನೆಫ್ರಿನ್, ಅಸಿಟೈಲ್ ಕೋಲಿನ್.

ಆ) **ಪಿಟ್ಯೂಟರಿ ಪೆಪ್ಟೈಡ್‌ಗಳು** : ಕಾರ್ಟಿಕೋಟ್ರೊಪಿನ್, ಗ್ರೋತ್ ಹಾರ್ಮೋನು, ಲಿಪೋಟ್ರೊಪಿನ್, ಆಲ್ಫ ಎಂಎಸ್ ಎಚ್, ಆಕ್ಸಿಟೋಸಿನ್, ವೇಸೋಪ್ರೆಸಿನ್.

ಇ) **ಸಂಚರಿಸುವ ಹಾರ್ಮೋನುಗಳು** : ಆಂಜಿಯೋಟೆನ್ಸಿನ್, ಕ್ಯಾಲ್ಸಿಟೋನಿನ್, ಗ್ಲೂಕಗಾನ್, ಇನ್‌ಸುಲಿನ್.

ಈ) **ಅಮೈನೋ ಆಮ್ಲಗಳು** : ಗಾಬಾ, ಗ್ಲೈಸಿನ್, ಗ್ಲುಟಾಮಿಕ್ ಆಮ್ಲ, ಆಸ್ಪಾರ್ಟಿಕ್ ಆಮ್ಲ.

ಉ) **ಓಪಿಯಾಡ್ ಪೆಪ್ಟೈಡ್‌ಗಳು** : ಡೈನಾರ್ಫಿನ್, ಬೀಟಾ ಎಂಡಾರ್ಫಿನ್, ಮೆಟ್ ಎನ್‌ಕೆಫಾಲಿನ್

ಊ) **ಇತರೆ** : ಬ್ರಾಡಿಕೈನಿನ್, ನ್ಯೂರೋ ಪೆಪ್ಟೈಡ್‌ವೈ, ಪ್ರೊಲಾಕ್ಟಿನ್ ಇತ್ಯಾದಿ ಮಿದುಳಿನ ಸೈನಾಪ್ಸ್‌ಗಳಲ್ಲಿ, ಮಾನೋ ಅಮೈನುಗಳು ಕಡಿಮೆಯಾದರೆ ಖಿನ್ನತೆ ಕಾಯಿಲೆ, ಆತ್ಮಹತ್ಯಾ ನಡೆವಳಿಕೆ ಕಂಡುಬರುತ್ತವೆ ಎಂಬುದಕ್ಕೆ ಈಗ ವಿಪುಲ ಆಧಾರಗಳಿವೆ. ಆತಂಕ-ಭಯ ಹೆಚ್ಚಾಗುವ Anxiety Disorders (ಅತಿಭಯ, ಸದಾ ಭಯ, ಹಠಾತ್ ಭಯ)ಗಳಲ್ಲಿ ಮೂರು ನರವಾಹಕ ವ್ಯವಸ್ಥೆಗಳಾದ ಗಾಬಾ-ಬೆಂಜೋಡಯಾಜೆಪೀನ್ ರಿಸೆಪ್ಟಾರ್ ಸಂಕೀರ್ಣ, ಲೋಕಸ್ ಸೆರುಲಿಯಸ್-ನಾರ್ ಎಪಿನೆಫ್ರಿನ್ ಮತ್ತು ಸೆರೋಟೋನಿನ್‌ಗಳ ಏರುಪೇರು ಇರುತ್ತದೆ. ತೀವ್ರ ಮಾನಸಿಕ ಕಾಯಿಲೆಯಾದ ಸ್ಕಿಜೋಫ್ರೀನಿಯಾದಲ್ಲಿ ಡೋಪಮಿನ್ ನರಕೋಶಗಳು ಅತಿ ಚಟುವಟಿಕೆಯಿಂದಿರುತ್ತವೆ. ಮಿದುಳಿನ ಮೀಸೋಲಿಂಬಿಕ್ ಹಾದಿಯಲ್ಲಿನ ನರಕೋಶಗಳ ಡೋಪಮಿನ್ ವ್ಯವಸ್ಥೆ ಚುರುಕಾಗಿ, ರೋಗ ಲಕ್ಷಣಗಳಾದ ಭ್ರಮೆ, ತಪ್ಪು ನಂಬಿಕೆಗಳು, ಅಸಂಬದ್ಧ ಯೋಚನೆ, ಮಾತುಗಳನ್ನು ಉತ್ಪತ್ತಿಮಾಡುತ್ತದೆ. ಮಿದುಳಿನ ಮುಮ್ಮಿದುಳಿನ (Prefrontal) ನರ ಕೋಶಗಳ ನರವಾಹಕ ವ್ಯವಸ್ಥೆ ಅಸ್ತವ್ಯಸ್ತವಾಗಿ ರೋಗಿ ಮಂಕಾಗುತ್ತಾನೆ. ಭಾವನಾ ರಹಿತವಾಗಿ, ಕರ್ತವ್ಯ ವಿಮುಖನಾಗಿ ನಿಷ್ಕ್ರಿಯನಾಗುತ್ತಾನೆ. ಹೀಗೆ ಶೇ.೯೫ರಷ್ಟು ಮನೋರೋಗಿಗಳಲ್ಲಿ ಮಿದುಳಿನ ನರ ಕೋಶಗಳಲ್ಲಿ ರಾಸಾಯನಿಕ ಬದಲಾವಣೆಗಳಾಗಿರುತ್ತವೆ. ರೋಗಲಕ್ಷಣಗಳಿಗೆ ಇದೇ ಕಾರಣ. ಆದ್ದರಿಂದ ಭೂತ ಪ್ರೇತಗಳಿಗೂ, ಮದ್ದು ಮಾಟಕ್ಕೂ, ದೇವರ ಕೋಪಕ್ಕೂ, ಮಾನಸಿಕ ಕಾಯಿಲೆಗಳಿಗೂ ಸಂಬಂಧವಿಲ್ಲ.

**ಚಿಕಿತ್ಸೆ** : 'ಮನೋರೋಗಕ್ಕೆ ಮದ್ದಿಲ್ಲ, ಹುಚ್ಚು ವಾಸಿಯಾಗುವುದಿಲ್ಲ' ಎಂಬ ಜನ ನಂಬಿಕೆಗಳು ಈಗ ಹುಸಿಯಾಗಿವೆ. ಕಳೆದ ಹತ್ತು ವರ್ಷಗಳಲ್ಲಿ ಪರಿಣಾಮಕಾರಿಯಾದ, ಕಡಿಮೆ ಅಡ್ಡಪರಿಣಾಮಗಳಿರುವ, ಇಂಜೆಕ್ಷನ್ ರೂಪದಲ್ಲಿ ೨ ಅಥವಾ ೪ ವಾರಗಳಿಗೊಮ್ಮೆ ಕೊಡಬಹುದಾದ, ರೋಗಿಗೆ ತಿಳಿಯದಂತೆ, ಅವನು ಸೇವಿಸುವ ಆಹಾರದಲ್ಲಿ ಬೆರೆಸಿ ಕೊಡಬಹುದಾದಂತಹ

ಔಷಧಿಗಳು ಬಂದಿವೆ.

ಸ್ಕಿಜೋಫ್ರಿನಿಯಾ ರೋಗಕ್ಕೆ ಸ್ಟಾಂಡರ್ಡ್ ಔಷಧಗಳಾದ ಕ್ಲೋರ್‌ಪ್ರೋಮಜಿನ್, ಹೆಲೋಪೆರಿಡಾಲ್ ಅಲ್ಲದೆ, ಲಾಂಗ್ ಆಕ್ಟಿಂಗ್ ಹೆಲೊಪೆರಿಡಾಲ್ ಇಂಜೆಕ್ಷನ್, ಫ್ಲುಫೆಂಕ್ಸಾಲ್ ಇಂಜೆಕ್ಷನ್, ರೆಸ್ಪಿರಿಡೋನ್ ಕ್ಲೋಜಪಿನ್ ಮಾತ್ರೆಗಳು, ಹೆಲೊಪಿರಿಡಾಲ್, ರೆಸ್ಪಿರಿಡೋನ್ ಸಿರಪ್‌ಗಳೂ ಲಭ್ಯವಿವೆ. ಶೇಕಡಾ ೭೦ರಷ್ಟು ರೋಗಿಗಳು ಗುಣಮುಖರಾಗುತ್ತಾರೆ.

ಪದೇ ಪದೇ ಬರುವ ಮೇನಿಯಾ (ಖಿನ್ನತೆ) ಕಾಯಿಲೆಯು ಮತ್ತೆ ಬರದಂತೆ ತಡೆಗಟ್ಟುವ ಲಿಥಿಯಂ, ಕಾರ್ಬಮಜೆಪಿನ್, ವಾಲ್‌ಪ್ರೋಯೇಟ್ ಔಷಧಿಗಳಿವೆ.

**ಖಿನ್ನತೆ** : ಆತ್ಮಹತ್ಯಾ ಯೋಚನೆ, ಪ್ರಯತ್ನಗಳನ್ನು ರೋಗಲಕ್ಷಣವಾಗಿ ಹೊಂದಿರುವ ಖಿನ್ನತೆ ಕಾಯಿಲೆಗೆ ಹಗಲುಹೊತ್ತು ಕೊಡಬಹುದಾದಂತಹ ಫ್ಲುಯಾಕ್ಸಿಟಿನ್ ಸರಟ್ರಾಲಿನ್ ಔಷಧ ಬಳಕೆಗೆ ಬಂದಿದೆ.

ನಿದ್ರೆ ಮಂಪರು ಬರಿಸದೆ, ಆತಂಕ ಭಯಗಳನ್ನು ತಗ್ಗಿಸುವ ಬುಸ್ಪಿರೋನ್, ಪ್ರೊಪ್ರೆನಲಾಲ್ ಉಪಯೋಗದಲ್ಲಿದೆ.

**ಸುಧಾರಿತ ವಿದ್ಯುತ್ ಕಂಪನ ಚಿಕಿತ್ಸೆ** : ೧೯೩೯ರಲ್ಲಿ ಬಳಕೆಗೆ ಬಂದ ವಿದ್ಯುತ್ ಕಂಪನ ಚಿಕಿತ್ಸೆ (E.C.T.) ಈಗ ಬಹಳವಾಗಿ ಸುಧಾರಿಸಲ್ಪಟ್ಟು ಅತ್ಯಂತ ಸುರಕ್ಷಿತ ಚಿಕಿತ್ಸಾ ವಿಧಾನವಾಗಿ ಮಾರ್ಪಟ್ಟಿದೆ. ಅರಿವಳಿಕೆ-ಸ್ನಾಯುಗಳನ್ನು ವಿರಮಿಸುವ ಔಷಧಿ ಕೊಟ್ಟು ಅತ್ಯಂತ ಕಡಿಮೆ ಪ್ರಮಾಣದ ವಿದ್ಯುತ್ತನ್ನು (ಸುಮಾರು ೧೦೦ ವೋಲ್ಟ್) ಕೇವಲ ಅರ್ಧ ಸೆಕೆಂಡುಕಾಲ ಮಿದುಳಿನೊಳಕ್ಕೆ ಹಾಯಿಸಿ ಅತ್ಯಂತ ತೀವ್ರ ಖಿನ್ನತೆ ಕಾಯಿಲೆಯನ್ನು, ಔಷಧಿಗೆ ಬಗ್ಗದ ಸ್ಕಿಜೋಫ್ರೀನಿಯಾ ಮೇನಿಯಾ ಕಾಯಿಲೆಯನ್ನು ಗುಣ ಮಾಡಲು ಇಸಿಟಿ ಬಳಕೆಯಾಗುತ್ತಿದೆ. ಅಡ್ಡಪರಿಣಾಮಗಳು ಇಲ್ಲವೇ ಇಲ್ಲ ಎನ್ನುವಷ್ಟು ಕಡಿಮೆ.

**ಅಲ್ಪಾವಧಿಯ, ಸಂಕ್ಷಿಪ್ತ ಮನೋಚಿಕಿತ್ಸೆ** : ಸಿಗ್ಮಂಡ್ ಫ್ರಾಯ್ಡ್ ರೂಪಿಸಿದ 'ಮನೋವಿಶ್ಲೇಷಣಾ ಚಿಕಿತ್ಸಾ ವಿಧಾನ' (Psychoanalysis) ತುಂಬಾ ಸಮಯವನ್ನು ತೆಗೆದುಕೊಳ್ಳುವಂತಹುದು. ತಿಂಗಳುಗಳ, ವರ್ಷಗಳ ಕಾಲ ಅದು ನಡೆಯುತ್ತಿತ್ತು. ಈಗ ಐದರಿಂದ ಹತ್ತು ಸೆಶನ್‌ಗಳಲ್ಲಿ ರೋಗಿಯ ಸಮಸ್ಯೆ, ದ್ವಂದ್ವಗಳನ್ನು ವಿಶ್ಲೇಷಿಸಿ ಪರಿಹಾರ ಮಾರ್ಗಗಳನ್ನು ಮಾತಿನ ಮೂಲಕ ಕೊಡಲಾಗುತ್ತದೆ. ಇದು ಪರಿಣಾಮಕಾರಿ ಕೂಡ.

**ಆಸ್ಪತ್ರೆಯ ಬದಲು ಸಮುದಾಯ** : ತೀವ್ರ ಮನೋರೋಗಿಗಳನ್ನು ಆಸ್ಪತ್ರೆಯಲ್ಲಿ ಸೇರಿಸಿ, ಚಿಕಿತ್ಸೆ ಕೊಡುವ ಬದಲು, ಅವರನ್ನು ಅವರ ಮನೆಗಳಲ್ಲೇ, ಅವರ ಸಮುದಾಯದಲ್ಲೇ ಇಟ್ಟು, ಮನೆಯವರ ನೆರವಿನಿಂದ ಚಿಕಿತ್ಸೆ ನೀಡುವುದು ಕಡಿಮೆ ಖರ್ಚಿನದು ಮತ್ತು ಬೇಗ ಗುಣ ಮಾಡುವಂಥದು ಎಂದು ಸಾಬೀತಾಗಿದೆ. ಆಸ್ಪತ್ರೆಗಳ ಕೃತಕ, ಅನಾರೋಗ್ಯಕಾರಿ ಪರಿಸರದಲ್ಲಿ ರೋಗಿಗಳು ಈಗ ಇರಬೇಕಾಗಿಲ್ಲ.

**ಮಾರ್ಗಮಧ್ಯದ ಸಂಸ್ಥೆಗಳು** (Half way homes): ಆಸ್ಪತ್ರೆಯಲ್ಲಿ ಇರಬೇಕಾದ ಅಗತ್ಯವಿಲ್ಲದ, ಆದರೆ ಕುಟುಂಬದವರೊಂದಿಗೆ ಇರಲು ನೈಪುಣ್ಯತೆಯನ್ನು ಸಂಪಾದಿಸದ ರೋಗಿಗಳಿಗೆ, ಆಶ್ರಯ ನೀಡಿ, ಅವರಿಗೆ ಉದ್ಯೋಗ ಕಲ್ಪಿಸಿ, ಸ್ವಾವಲಂಬಿಗಳನ್ನಾಗಿ ಮಾಡುವ 'ಹಾಫ್‌ವೇ ಹೋಂ'ಗಳು ಅಸ್ತಿತ್ವಕ್ಕೆ ಬಂದಿವೆ.

**ಕಲಾ ಚಿಕಿತ್ಸೆಗಳು** : ಸಂಗೀತ, ಸಾಹಿತ್ಯ, ಚಿತ್ರಕಲೆ, ಸೃಜನಶೀಲ ಚಟುವಟಿಕೆಗಳಿಗೆ ಮನಸ್ಸಿನ ಅಸ್ವಸ್ಥತೆಗಳನ್ನು ಹೋಗಲಾಡಿಸುವ, ಮನಸ್ಸಿಗೆ ನೆಮ್ಮದಿ ತರುವ ಗುಣವಿದೆ ಎಂದು ಮೊದಲಿನಿಂದಲೂ ಗೊತ್ತಿದ್ದರೂ, ಅವನ್ನು ಚಿಕಿತ್ಸಾ ವಿಧಾನವಾಗಿ, ಕ್ರಮಬದ್ಧವಾಗಿ ಈಗ ಬಳಸಲಾಗುತ್ತಿದೆ. ಯೋಗ-ಧ್ಯಾನ-ಪ್ರಾಣಾಯಾಮಗಳನ್ನು ಬಹುತೇಕ ಮಾನಸಿಕ ಒತ್ತಡ ಸಂಬಂಧೀ ದೈಹಿಕ ಹಾಗೂ ಮಾನಸಿಕ ಕಾಯಿಲೆಗಳ ಚಿಕಿತ್ಸೆಯಲ್ಲಿ ಪರಿಣಾಮಕಾರಿಯಾಗಿ ಬಳಸಲಾಗುತ್ತಿದೆ.

**ಮನೋರೋಗಿಗಳ ಹಕ್ಕುಗಳು** : ಇತ್ತೀಚಿನವರೆಗೆ ಮನೋರೋಗಿಗಳು ಎಲ್ಲ ಹಕ್ಕು-ಸೌಲಭ್ಯಗಳಿಂದ ವಂಚಿತರಾಗುತ್ತಿದ್ದರು. ಅವರ ಶೋಷಣೆ ನಿರಂತರವಾಗಿ ನಡೆಯುತ್ತಿತ್ತು. ಇತರ ಆರೋಗ್ಯವಂತ ಜನರೊಂದಿಗೆ ಅವರು ಸ್ಪರ್ಧಿಸಿ ಮುನ್ನಡೆ ಸಾಧಿಸಲಾಗುತ್ತಿರಲಿಲ್ಲ. ಈಗ ನಮ್ಮ ದೇಶದಲ್ಲಿ ಅಂಗವಿಕಲರು - ಅಧಿನಿಯಮ- ೧೯೯೬ನ್ನು ಜಾರಿಗೆ ತರಲಾಗಿದೆ. ಇತರ ಶಾರೀರಿಕ ಅಂಗವಿಕಲರಂತೆ ಮನೋರೋಗಿಗಳಿಂದ ತಮ್ಮ ಶಕ್ತಿ-ಕೌಶಲಗಳನ್ನು ಕಳೆದುಕೊಂಡವರೂ ಕೂಡ ಅನೇಕ ರಿಯಾಯಿತಿಗಳನ್ನು, ಉದ್ಯೋಗಗಳಲ್ಲಿ ಮೀಸಲಾತಿಯನ್ನು ಪಡೆಯಬಹುದಾಗಿದೆ. ೧೯೮೭ರ 'ಮೆಂಟಲ್ ಹೆಲ್ತ್ ಆಕ್ಟ್' ಪ್ರಕಾರ ಮನೋರೋಗಿಗಳನ್ನು ಹೀನಾಯವಾಗಿ ನೋಡುವಂತಿಲ್ಲ. ಅವರ ಗೌರವಕ್ಕೆ ಚ್ಯುತಿ ಬರದಂತೆ ಎಲ್ಲರೂ ನೋಡಿಕೊಳ್ಳಬೇಕು.



''ವಾಜಪೇಯಿಜೀ, ನಿಮಗೆ ಎನ್‌ಕೌಂಟರ್ ಏನೂಂತ ಗೊತ್ತೇ ಇಲ್ಲ. ಹಾಗಿದ್ದಿದ್ದರೆ ವಿಮಾನ ಅಪಹರಣಕಾರರನ್ನು ಇನ್ನೂ ಜಾಣತನದಿಂದ ನಿಭಾಯಿಸಬಹುದಿತ್ತು.

**ಮನೋರೋಗಗಳನ್ನು ತಡೆಗಟ್ಟುವುದು** : ಮನೋರೋಗಗಳು ಬರುವಲ್ಲಿ ಮತ್ತು ಅವು ಉಲ್ಬಣಿಸುವಲ್ಲಿ ವ್ಯಕ್ತಿಯ ಜೀವನಶೈಲಿ, ಕುಟುಂಬ ಮತ್ತು ಪರಿಸರದ ಪಾತ್ರ ಏನು ಎಂದು ತಿಳಿದಿರುವುದರಿಂದ, ಮನೋರೋಗಗಳು ಬರದಂತೆ ತಡೆಗಟ್ಟುವುದು ಹಾಗೂ ಮಾನಸಿಕ ಆರೋಗ್ಯವನ್ನು ಹೆಚ್ಚಿಸಿಕೊಳ್ಳುವುದು (Primary Prevention) ಈಗ ಕಾರ್ಯಸಾಧುವಾಗಿದೆ.

೧. ಈಗಾಗಲೇ ತೀವ್ರ ಮಾನಸಿಕ ಕಾಯಿಲೆ ಇರುವ ವ್ಯಕ್ತಿಯುಳ್ಳ ಕುಟುಂಬದವರು, ಹತ್ತಿರ ಸಂಬಂಧದಲ್ಲಿ ಮದುವೆ ಸಂಬಂಧ ಮಾಡದಿರುವುದು.
೨. ಗರ್ಭಿಣಿ ಸ್ತ್ರೀ ಮತ್ತು ಮಕ್ಕಳ ಪೌಷ್ಟಿಕತೆ ಬಗ್ಗೆ ಗಮನ ಕೊಡುವುದು.
೩. ಗರ್ಭಧಾರಣೆ ಮತ್ತು ಹೆರಿಗೆ ಅವಧಿಯಲ್ಲಿ ಕಾಲಕಾಲಕ್ಕೆ ವೈದ್ಯಕೀಯ ನೆರವು.
೪. ಸೂಕ್ತ ಪ್ರಮಾಣದ ಪ್ರೀತಿ, ಶಿಸ್ತು, ಮಾರ್ಗದರ್ಶನ, ಪ್ರೋತ್ಸಾಹಗಳನ್ನು ಕೊಟ್ಟು, ಮಕ್ಕಳನ್ನು ಸರಿ ರೀತಿಯಲ್ಲಿ ಬೆಳೆಸುವುದು.
೫. ಗೊಂದಲವಿಲ್ಲದ, ಸರಳ, ನೀತಿ ನಿಯಮಗಳಿಂದ ಕೂಡಿದ ತೃಪ್ತ ಜೀವನ ಮಾಡಲು ತರಪೇತಿ ನೀಡುವುದು.
೬. ಜೀವನದ ಘಟನೆಗಳಾದ ಹುಟ್ಟು, ಸಾವು, ಅಗಲಿಕೆ, ಕಷ್ಟ, ನಷ್ಟ, ಸೋಲು, ಪರೀಕ್ಷೆ, ಅಪಘಾತ, ರೋಗ ರುಜಿನ, ಉದ್ಯೋಗದಲ್ಲಿ ಬಡ್ತಿ, ವರ್ಗಾವಣೆ, ಮನೆ ಮಾಡುವುದು. ಇತ್ಯಾದಿಗಳನ್ನು ಸರಿಯಾದ ನಿಲುವು ಧೋರಣೆಯಿಂದ ಸಮಭಾವದಿಂದ ಎದುರಿಸುವುದು.
೭. ಮದ್ಯಪಾನ, ಮಾದಕ ವಸ್ತುಗಳ ಸೇವನೆಯಿಂದ ದೂರವಿರುವುದು.
೮. ತಲೆ-ಮಿದುಳಿಗೆ ಹಾನಿಕಾರಕ ಪೆಟ್ಟು ಬೀಳದಂತೆ ಎಚ್ಚರ ವಹಿಸುವುದು.
೯. ಉತ್ತಮ ಸಾಮಾಜಿಕ ನಡೆವಳಿಕೆಯಿಂದ, ಸುತ್ತ ಮುತ್ತಲಿನ ಜನರೊಂದಿಗೆ, ಬಂಧು ಮಿತ್ರರೊಂದಿಗೆ ಒಳ್ಳೆಯ ಸಂಬಂಧವನ್ನಿಟ್ಟುಕೊಳ್ಳುವುದು.
೧೦. ಹಿತಮಿತವಾದ ಆಹಾರ, ವೇಳೆ ವೇಳೆಗೆ ಸರಿಯಾಗಿ ಊಟ, ನಿದ್ರೆ, ಆರೋಗ್ಯಕರ ಹವ್ಯಾಸ, ಮನರಂಜನೆ ಮತ್ತು ವ್ಯಾಯಾಮ.
೧೧. ಯೋಗ, ಧ್ಯಾನ, ಪ್ರಾಣಾಯಾಮ, ಸೃಜನಶೀಲ ಚಟುವಟಿಕೆಗಳನ್ನು ನಿತ್ಯ ಮಾಡುವುದು. ಆಧ್ಯಾತ್ಮಿಕ ಆಸಕ್ತಿ-ಚಟುವಟಿಕೆಗಳು.
೧೨. ಒಬ್ಬ ವೈದ್ಯರ ಸಲಹೆ ಮಾರ್ಗದರ್ಶನದಲ್ಲಿ ಅನಾರೋಗ್ಯ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವುದು.

-ಇವುಗಳಿಂದ ಮಾನಸಿಕ ಆರೋಗ್ಯ ಹೆಚ್ಚುತ್ತದೆ. ಮನೋರೋಗಮುಕ್ತ ಸಮಾಜದ ಕಲ್ಪನೆ ಇದರಿಂದ ನನಸಾಗಬಲ್ಲದು.

ಡಾ|| ಸಿ. ಆರ್. ಚಂದ್ರಶೇಖರ್
[illegible]
[illegible] - ೫೬೦ [illegible]

# ಅದೃಶ್ಯ ಸಮುದಾಯ: ಜರವಾಗಳು

ಅಂಡಮಾನಿನಲ್ಲಿ ಎಲ್ಲಿ ಹೋದರೂ, ಅಲ್ಲಿನ ಆದಿವಾಸಿಗಳಾದ ಜರವಾಗಳ ಬಗ್ಗೆ ಚಿತ್ರವಿಚಿತ್ರವಾದ ಕತೆಗಳನ್ನು ಕಿವಿ ತುಂಬಿ ಚೆಲ್ಲುವಷ್ಟು ಕೇಳಬೇಕಾಗುತ್ತಿತ್ತು. 'ಅಪಾಯಕಾರಿ ಪ್ರಾಣಿಗಳು ತಮ್ಮ ಸುತ್ತಮುತ್ತ ಹೊಂಚು ಹಾಕುತ್ತ ಇವೆ' ಎಂಬ ಭೀತಿಯಿಂದ ನಾಗರಿಕ ಜನ ಕಟ್ಟಿಕೊಂಡ ವರ್ಣರಂಜಿತ ಕತೆಗಳವು. ಅವನ್ನೆಲ್ಲ ಕೇಳಿದರೆ ನಾವು ಬಂದಿರುವುದು ಅಂಡಮಾನಿಗೋ ಜರವಾ ದೇಶಕ್ಕೋ ಅಂತ ಅನುಮಾನ ಬರುತ್ತಿತ್ತು. ನಾವು ಜರವಾಗಳು ವಾಸಿಸುವ ದ್ವೀಪ ಮತ್ತು ಕಾಡುಗಳಲ್ಲೇ ಹಾದುಹೋದೆವು. ಕೊನೆಗೂ ಅವರು ಕಾಣಸಲಿಲ್ಲ. ಆದರೆ ಅಂಡಮಾನಿನ ನಮ್ಮ ನೆನಪುಗಳಲ್ಲಿ ಗಾಢವಾಗಿ ತುಂಬಿಕೊಂಡಿದ್ದು ಜರವಾಗಳೇ.

ಯಾರು ಈ ಜರವಾಗಳು ? ಜರವಾಗಳು ತಮ್ಮನ್ನು ಏನೆಂದು ಕರೆದುಕೊಂಡಿದ್ದಾರೋ ತಿಳಿಯದು. ಆದರೆ ನಾಗರಿಕ ಸಮಾಜ ಮಾತ್ರ ಅವರನ್ನು ಜರವಾಗಳೆಂದು ಕರೆಯುತ್ತಿದೆ. ಬಹುಶಃ ಈ ಹೆಸರನ್ನು ಇಟ್ಟವರು, ಅವರನ್ನು ಮೊದಲು ಭೇಟಿಯಾದ ಬ್ರಿಟಿಷರೇ ಇರಬೇಕು. ಹೆದರಿಕೆ ಹುಟ್ಟಿಸುವಷ್ಟು ದಟ್ಟವಾದ ಅರಣ್ಯಗಳಿಂದ ಕೂಡಿದ ಈ ದ್ವೀಪ ಸಮೂಹಗಳನ್ನು ಬ್ರಿಟಿಷರು ೧೮ನೇ ಶತಮಾನದಲ್ಲಿ, ಭಾರತವನ್ನು ಹಿಡಿದುಕೊಂಡ ಹೊತ್ತಿನಲ್ಲೇ, ಆಕ್ರಮಿಸಿಕೊಂಡರು. ಆರ್ಕಿಬಾಲ್ಡ್ ಬ್ಲೇರ್ ಎಂಬ ನಾವಿಕ ಈ ದ್ವೀಪಗಳನ್ನು ಮೊದಲು ವಶಪಡಿಸಿಕೊಂಡು ಅಲ್ಲೊಂದು ಬಂದರು ಕಟ್ಟಿದ. (ಪೋರ್ಟ್ ಬ್ಲೇರ್ ಪಟ್ಟಣ ಅವನ ಹೆಸರಲ್ಲೇ ಇದೆ). ಎರಡನೇ ಮಹಾಯುದ್ಧದ ಹೊತ್ತಲ್ಲಿ (೧೯೪೨ರಿಂದ ೧೯೪೫ರವರೆಗೆ) ಜಪಾನಿಯರು ಬ್ರಿಟಿಷರನ್ನು ಓಡಿಸಿ ಈ ದ್ವೀಪಗಳನ್ನು ತಾತ್ಕಾಲಿಕವಾಗಿ ಹಿಡಿದಿದ್ದರು. ಇದನ್ನು ಬಿಟ್ಟರೆ, ೩೦೦ ವರ್ಷಕಾಲ ಇವು ಬ್ರಿಟಿಷರ ತೆಕ್ಕೆಯೊಳಗೆ ಇದ್ದವು. ಭಾರತ ಆಫ್ರಿಕಾಗಳಂಥ ದೊಡ್ಡ ಖಂಡಗಳನ್ನು, ಅಲ್ಲಿನ ಭೂಪನ್ನೈವತ್ತಾರು ರಾಜರುಗಳನ್ನು ಗೆದ್ದುಕೊಂಡ ಬ್ರಿಟಿಷರು, ಅಂಡಮಾನ್ ದ್ವೀಪಗಳನ್ನು ಚಿಟಿಕೆ ಹೊಡೆದಂತೆ ಪಡೆದುಕೊಂಡರು. ಆರ್ಕಿಬಾಲ್ಡ್ ಬ್ಲೇರನು ಇಲ್ಲಿ ಹೊರಗಿನಿಂದ ಜನ ತಂದು ನೆಲೆಗೊಳಿಸುವಾಗ, ಇಲ್ಲಿನ ಬುಡಕಟ್ಟು ಸಮುದಾಯಗಳಾದ ಜರವಾಗಳು, ಓಂಗಿಗಳು, ಸೆಂಟಿನಲೀಸರು, ಶಾಂಪೇನರು, ನಿಕೋಬಾರಿಗಳು, ಬಲವಾದ ಪ್ರತಿರೋಧ ಮಾಡಿದರು. ಆಧುನಿಕ ಆಯುಧಗಳಿಂದ ಸಜ್ಜಾಗಿದ್ದ ಬ್ರಿಟಿಷರಿಗೆ, ಈ ಪ್ರತಿರೋಧ ಏನೇನೂ ಆಗಿರಲಿಲ್ಲ. ಆಫ್ರಿಕಾದ ಅವರ ಅನುಭವ ಇಲ್ಲಿ ಕೆಲಸಕ್ಕೆ ಬಂದಿತು. ತಮಗೆ ಅಡ್ಡಿ ಮಾಡಿದ ಅಂಡಮಾನಿನ ಆದಿವಾಸಿಗಳನ್ನು, ಅದರಲ್ಲೂ ಜರವಾಗಳನ್ನು ಬ್ಲೇರ್ ಮತ್ತು ಅವನ [illegible] ಕೊಂದುಹಾಕಿದ ಬಗ್ಗೆ, ಜರವಾಗಳು ಅವರನ್ನು [illegible] ಬಗ್ಗೆ ರೋಚಕ ಕಥೆಗಳಿವೆ.

## ಮಾಸದ ರಕ್ತಕಲೆಗಳು

ಈ ಯೂರೋಪಿನ ಜನ ತಮ್ಮ ಮನೆ ಮಾರು ಬಿಟ್ಟು ಸಾವಿರಾರು ಮೈಲಿ ಕಡಲ ಪ್ರಯಾಣ ಮಾಡುವುದು, ಭೂಖಂಡಗಳನ್ನು ಅಲೆಯುವುದು, ಜೀವದ ಹಂಗನ್ನು ತೊರೆದು ಅಪರಿಚಿತ ದೇಶಗಳ ಘನಘೋರ ಅರಣ್ಯಗಳಲ್ಲಿ ನುಗ್ಗುವುದು - ಇವೆಲ್ಲ ಮನುಷ್ಯರೊಳಗಿನ ಅದಮ್ಯ ಕುತೂಹಲ, ಸಾಹಸಗಳ ಅದ್ಭುತ ಗಾಥೆಗಳಂತೆ ತೋರುತ್ತವೆ. ಅರೇಬಿಯನ್ ನೈಟ್ಸ್ ಕಥೆಗಳ ಸಿಂದಬಾದ್ ಕೂಡ ಇಂಥ ಸಾಹಸಿಗ. ವಾಸ್ಕೋಡಗಾಮ, ಕೊಲಂಬಸ್, ಆರ್ಕಿಬಾಲ್ಡ್ ಬ್ಲೇರ್ ಮುಂತಾದವರು ಸಿಂದಬಾದನ ಅಣ್ಣ ತಮ್ಮಂದಿರಂತೆ ತೋರುತ್ತಾರೆ. ಆದರೆ ಈ ಸಾಹಸ, ಕುತೂಹಲಗಳ ಹಿಂದೆ ಸಂಪತ್ತಿಗಾಗಿ ಹಪಹಪಿಸುವ ದುರಾಸೆಯೂ, ದೇಶಗಳನ್ನು ವಶಪಡಿಸಿಕೊಳ್ಳುವಾಗ ಎಸಗಿದ ಕ್ರೌರ್ಯವೂ ಇರುವುದನ್ನು ಮರೆಯಲಾಗುವುದಿಲ್ಲ. ಅಂಡಮಾನಿನ ಚರಿತ್ರೆಯ ಹಾಳೆಗಳನ್ನು ತೆಗೆದರೆ, ಬ್ಲೇರನೂ ಅವನ ದೇಶದವರೂ ಮೂಡಿಸಿರುವ ರಕ್ತದ ಕಲೆಗಳು ಇನ್ನೂ ಹಸಿಯಾಗೇ ಇವೆ.



*ಬಾಳೆಹಣ್ಣು, ತೆಂಗಿನಕಾಯಿ ತರುವ ದೋಣಿಗಾಗಿ ಕಾದಿರುವ ಜರವಾ ಗುಂಪು*

ಅಂಡಮಾನಿನ ಜರವಾ, ಓಂಗೀ, ಸೆಂಟಿನಲೀಸರು ಆಫ್ರಿಕನ್ ಮೂಲದ ನೀಗ್ರೋ ಜನಾಂಗದವರು. ಇವರು ದೂರದ ಆಫ್ರಿಕಾದಿಂದ ಈ ದ್ವೀಪಗಳಿಗೆ ಹೇಗೆ ಮತ್ತು ಯಾವಾಗ ಬಂದರು (ಅಥವಾ ಯಾರು ತಂದರು) ಈ ಬಗ್ಗೆ ಚರಿತ್ರೆ ಇನ್ನೂ ನಿಗೂಢವಾಗಿದೆ. ಇನ್ನುಳಿದ ಶಾಂಪೇನರು ಮತ್ತು ನಿಕೋಬಾರಿಗಳು ಮಂಗೋಲಿಯನ್ ಜನಾಂಗದವರು. ಅಂಡಮಾನಿನ ಸುತ್ತಮುತ್ತ ಬರ್ಮಾ ಮುಂತಾದ ಮಂಗೋಲಿಯನ್ ದೇಶಗಳಿರುವುದರಿಂದ ಇವರು ಇರುವುದು ಆಶ್ಚರ್ಯವಲ್ಲ. ಜರವಾಗಳನ್ನು ಹೊರತುಪಡಿಸಿ, ಉಳಿದ ನಾಲ್ಕು ಬುಡಕಟ್ಟುಗಳು 'ನಾಗರಿಕ'ವಾಗಿವೆ. ಅಂದರೆ ಅವರನ್ನು ನಾಗರಿಕರನ್ನಾಗಿ ಪಳಗಿಸಲಾಗಿದೆ. ಲಿಟ್ಲ್ ಅಂಡಮಾನಿನ ಓಂಗೀಗಳನ್ನು ನೋಡಿದರೆ 'ನಾಗರಿಕ'ರಾಗುವುದರ ಅರ್ಥವೇನೆಂದು ತಿಳಿಯುತ್ತದೆ. ತಮ್ಮ ಕಾಡನ್ನು ನಾಗರಿಕ ಸಮಾಜಕ್ಕೆ ಬಿಟ್ಟುಕೊಟ್ಟು ಅವರೆಲ್ಲ ಮರದ ಕಾರ್ಖಾನೆಗಳಲ್ಲಿ ಕೂಲಿಗಳಾಗಿ ಬದಲಾಗಿದ್ದಾರೆ. ಆದರೆ ಜರವಾಗಳು ಮಾತ್ರ ತಮ್ಮ ಕಾಡನ್ನು ಬಿಟ್ಟುಕೊಡದೆ, ಧೀಮಂತಿಕೆಯನ್ನೂ ಸ್ವಾತಂತ್ರ್ಯವನ್ನೂ ಉಳಿಸಿಕೊಂಡಿದ್ದಾರೆ. 'ನಾಗರಿಕ'ರಾಗಲು ಒಪ್ಪದಿರುವ ಕಾರಣಕ್ಕಾಗಿಯೇ ಅವರು ಕ್ರೂರ ಜನಾಂಗವಾಗಿ ಕಾಣುತ್ತಿರಬೇಕು. ತಮ್ಮ ಪಾಡಿಗೆ ತಾವು ಬದುಕುತ್ತಿರುವ ಜರವಾಗಳ ಬಗ್ಗೆ ನಾಗರಿಕ ಸಮಾಜ ಕಟ್ಟಿರುವ ಕತೆಗಳಲ್ಲಿ ಅದರ ಸುಪ್ತ ಆಕ್ರೋಶ ಹತಾಶೆಗಳು ವ್ಯಕ್ತವಾಗುತ್ತಿವೆ ಎನ್ನಬಹುದು.

ಡಾ॥ ರಹಮತ್ ತರೀಕೆರೆ

## ಜರವಾಗಳ ಬಗ್ಗೆ ಎಚ್ಚರಿಕೆ ಏಕೆ ?

ನಾವು ಪೋರ್ಟ್ ಬ್ಲೇರಿನಿಂದ ಉತ್ತರ ಅಂಡಮಾನಿನ ಮಾಯಾಬಂದರ್ ಪಟ್ಟಣಕ್ಕೆ ಹೋಗಬೇಕಿತ್ತು. ಅಂಡಮಾನ್ ಗ್ರ್ಯಾಂಡ್ ಟ್ರಂಕ್ ರೋಡ್ ಎಂದು ಖ್ಯಾತಿವೆತ್ತ ರಸ್ತೆಯಲ್ಲಿ ಸುಮಾರು ೩೦೦ ಕಿ.ಮೀ. ಪ್ರಯಾಣ ಶುರುವಾಯಿತು. ಈ ರಸ್ತೆ ಇಡೀ ಅಂಡಮಾನಿನ ಮೂರು ಬೃಹತ್ ನಡುಗಡ್ಡೆಗಳನ್ನು ಬೆಸೆಯುತ್ತದೆ. ಎರಡು ಗಂಟೆ ಪ್ರಯಾಣವಾದ ಮೇಲೆ ಜಿರ್ಕಾಟಾಂಗ್ ಎಂಬ ಪುಟ್ಟಹಳ್ಳಿ ಬಂದಿತು. ಅಲ್ಲೊಂದು ಫಾರೆಸ್ಟ್ ಚೆಕ್‌ಪೋಸ್ಟ್ ಇತ್ತು. ಕೂಡಲೇ ನಮ್ಮ ಬಸ್ಸಿಗೆ ಕೋವಿಗಳನ್ನು ಹಿಡಿದ ಪೊಲೀಸರು ಹತ್ತಿ ಡ್ರೈವರನ ಅಕ್ಕ ಪಕ್ಕದ ಸೀಟುಗಳಲ್ಲಿ ಕುಳಿತುಕೊಂಡರು. ದರೋಡೆ ಪ್ರದೇಶವಾದ ಬಳ್ಳಾರಿ ರಾಯಚೂರು ಕಡೆ ರಾತ್ರಿ ಬಸ್ಸಿಗೆ ಕಾವಲು ಪೊಲೀಸರು ಹತ್ತುವುದನ್ನು ಕಂಡಿದ್ದ ನಮಗೆ 'ಗೊಂಡಾರಣ್ಯದಲ್ಲೇಕೆ ಪೊಲೀಸರು ?' ಎಂದು ಕುತೂಹಲ ಹುಟ್ಟಿತು. ಕಿಟಕಿ ತೆಗೆದು ನೋಡಿದರೆ, ದೊಡ್ಡ ಬೋರ್ಡು ಇತ್ತು. ''ನಾವು ಜರವಾ ರಿಸರ್ವ್ ಏರಿಯಾವನ್ನು ಪ್ರವೇಶಿಸುತ್ತಿದ್ದೇವೆ; ಜರವಾಗಳಿದ್ದಾರೆ ಎಚ್ಚರಿಕೆ'' (Beware of Jarawas) ಎಂದು ಅದರಲ್ಲಿ ಬರೆಯಲಾಗಿತ್ತು.

ಬಸ್ಸಿನವರು ಬೇರೆ ''ನಿಮ್ಮ ಕಿಟಕಿಗಳನ್ನು ತೆಗೆಯಬೇಡಿ. ಜರವಾಗಳು ಬಿಡುವ ಬಾಣ ತಾಗಬಹುದು'' ಎಂದು ಎಚ್ಚರಿಸಿ ಅಂಡಮಾನಿಗೆ ಹೊಸಬರಾಗಿ ಬಂದವರಲ್ಲಿ ಸಣ್ಣಗೆ ಭೀತಿಯ ಅಲೆ ಹುಟ್ಟಿಸಿದರು. ನಾವು ಕೂಡ ಹಡಗಿನಲ್ಲಿ ಬರುವಾಗ ನೋಡಿದ ಅಂಡಮಾನ್ ಕುರಿತ ಡಾಕ್ಯುಮೆಂಟರಿಗಳಲ್ಲೂ ಕೂಡ, ಜರವಾಗಳ ಬಾಣಗಳ ರುಚಿ ನೋಡಿದ್ದ ಅನೇಕ ಜನರನ್ನು ಸಂದರ್ಶನ ಮಾಡಲಾಗಿತ್ತು. ಅಷ್ಟೇಕೆ, ನಾವು ಪಯಣಿಸುತ್ತಿದ್ದ ಬಸ್ಸಿಗೂ ಅನೇಕ ಸಲ ಬಾಣಗಳು ತಾಗಿ ಕಿಟಕಿ ಗಾಜು ಒಡೆದಿದ್ದವು.

ಜಿರ್ಕಾಂಟಾಂಗಿನಿಂದ ಮುಂದೆ ದಟ್ಟವಾದ

ಅರಣ್ಯದೊಳಗೆ ಬಸ್ಸು ಹೊರಟಿತು. ಸಣ್ಣಗೆ ಮಳೆ ಜಿನುಗುತ್ತಿತ್ತು. ಕಾಡಿನ ಪೊದೆಗಳೇ ಉಸಿರಾಡುತ್ತಿರುವಂತೆ ಮಂಜಿನ ಹಬೆ ಹುಟ್ಟುತ್ತಿತ್ತು. ಯಾಕೋ ಏನೋ ಈ ಹಳುವಿನೊಳಗಿಂದ ಜರವಾಗಳು ಬಂದು ಈ ಬಸ್ಸನ್ನು ತಡೆಯಬಾರದೇ ಎಂದು ಮನಸ್ಸು ಹಂಬಲಿಸುತ್ತಿತ್ತು. ಗೆಳೆಯ ಜಯಕುಮಾರರಂತೂ ಜರವಾಗಳು ನಮ್ಮನ್ನೆಲ್ಲ ಇಳಿಸಿ, ನಗ್ನಗೊಳಿಸಿ, ತಮ್ಮ ಬೀದಿಗೆ ಒಯ್ಯುವ ದೃಶ್ಯವನ್ನು ಕನಸಿಸುತ್ತಿದ್ದರು. ಆದರೆ ಅವರು ನಮ್ಮ ಕಣ್ಣಿಗೆ ಬೀಳಲೇ ಇಲ್ಲ. ದಾರಿಯುದ್ದಕ್ಕೂ 'ಜರವಾಗಳಿದ್ದಾರೆ ಎಚ್ಚರಿಕೆ' ಬೋರ್ಡುಗಳು ಮಾತ್ರ ಕಣ್ಣಿಗೆ ತಿವಿಯುವಂತೆ ನಿಂತಿದ್ದವು; 'ನಾಯಿಗಳಿವೆ ಎಚ್ಚರಿಕೆ' ಎಂಬ ಬೋರ್ಡುಗಳಂತೆ. ನಮ್ಮಂತೇ ಇರುವ ಸಹಮಾನವರನ್ನು ಕುರಿತು ಭೀತಿಹುಟ್ಟಿಸಿಕೊಳ್ಳುವಂಥ ಈ ಮನಃಸ್ಥಿತಿ ಭೀಕರವಾಗಿತ್ತು. ಈ ಬೋರ್ಡುಗಳನ್ನು ಓದಲು ಬಂದಿದ್ದರೆ ಜರವಾಗಳು ಹೇಗೆ ಪ್ರತಿಕ್ರಿಯಿಸುತ್ತಿದ್ದರೋ ಏನೋ. ಅಂಡಮಾನ್ ಗ್ರ್ಯಾಂಡ್ ಟ್ರಂಕ್ ರಸ್ತೆ ಮಾಡುವಾಗ ಬ್ರಿಟಿಷರಂತೆಯೇ ಅಂಡಮಾನ್ ಸರ್ಕಾರವೂ ಜರವಾಗಳನ್ನು ದಮನ ಮಾಡಿತ್ತು. ಒಂದು ಕಡೆ ರಸ್ತೆಯನ್ನು ಪೊಲೀಸರ ಕಾವಲಿನಲ್ಲಿ ರಿಪೇರಿ ಮಾಡುತ್ತಿದ್ದ ದೃಶ್ಯ ಕಣ್ಣಿಗೆ ಬಿತ್ತು. ಹೆಚ್ಚು ಕಡಿಮೆ ಜರವಾಗಳನ್ನು ಅಭಿವೃದ್ಧಿಗೆ ಅಡ್ಡಿಮಾಡುವ ಅನಿಷ್ಟಗಳು ಎಂದೇ ಭಾವಿಸಲಾಗಿತ್ತು.

## ಸರಕಾರದ ಕ್ರಮ

ಆದರೆ ಅಂಡಮಾನ್ ಸರ್ಕಾರ ಜರವಾಗಳನ್ನು ಅವರ ಪಾಡಿಗೆ ಅವರು ಬದುಕಲು ಕೂಡ ಕ್ರಮ ಕೈಗೊಂಡಿತ್ತು. ಅವರು ವಾಸಿಸುವ ೭೦೦ ಚದರ ಮೈಲಿ ಕಾಡನ್ನು ರಕ್ಷಿತ ಅರಣ್ಯವೆಂದು ಘೋಷಿಸಿ, ನಾಗರಿಕರು ಈ ಕಾಡನ್ನು ಪ್ರವೇಶಿಸದಂತೆ ನಿಷೇಧಿಸಿತ್ತು. ಮಾಯಾಬಂದರಿನ ರಸ್ತೆ ಬಿಟ್ಟು, ಬೇರಾವುದೇ ಚಟುವಟಿಕೆ ಅಲ್ಲಿ ನಡೆಯದಂತೆ ತಡೆಹಿಡಿದಿತ್ತು. ಮಾನವಶಾಸ್ತ್ರ ಇಲಾಖೆಗೆ ನಿಕೋಬಾರಿ ಬುಡಕಟ್ಟಿನ ಒಬ್ಬ ಮನುಷ್ಯನನ್ನು ಮುಖ್ಯಸ್ಥನನ್ನಾಗಿ ಮಾಡಿತ್ತು. (ಈತ ಜರವಾಗಳನ್ನು ಭೇಟಿ ಮಾಡಿ ಬಂದ ನಾಗರಿಕ ಸಮಾಜದ ವ್ಯಕ್ತಿಗಳಲ್ಲಿ ಒಬ್ಬನಾಗಿದ್ದ). ಆದರೂ ಜರವಾ ಕಾಡನ್ನು ಸುತ್ತಮುತ್ತಲಿಂದಲೂ ಭಾರತದ ಮೇನ್ ಲ್ಯಾಂಡಿನಿಂದ ಹೋದ ವಲಸಿಗರು ಒತ್ತುವರಿ ಮಾಡುತ್ತ ಒಳಗೆ ನುಗ್ಗುತ್ತಿದ್ದರು. ಅವರಿಗೆಲ್ಲ ರಾಜಕೀಯ ರಕ್ಷಣೆಯಿತ್ತು. (ಜರವಾಗಳು ಓಟು ಹಾಕುವುದಿಲ್ಲವಷ್ಟೆ). ಜರವಾಗಳು ತಮ್ಮ ಕಾಡಿನ ಅಂಚಿನಲ್ಲಿರುವ ನಾಗರಿಕರ ಮೇಲೆ ದಾಳಿ ಮಾಡುತ್ತಿದ್ದ ಅನೇಕ ಪ್ರಸಂಗಗಳಿದ್ದವು. ಅವರು ದಾಳಿ ಮಾಡಿದಾಗ ಹಣ, ಒಡವೆ ಒಯ್ಯುತ್ತಿರಲಿಲ್ಲ. ಅವರು ಕದಿಯುತ್ತಿದ್ದುದು ತೆಂಗಿನಕಾಯಿ, ಬಾಳೆಗೊನೆ ಹಾಗೂ ಅಲ್ಯುಮಿನಿಯಂ ಪಾತ್ರೆ. ಈ ಮೂರು ವಸ್ತುಗಳನ್ನು. ಅಲ್ಯುಮಿನಿಯಮ್ ತಗಡನ್ನು ಕತ್ತರಿಸಿ ಬಾಣದ ತುದಿಗೆ ಜೋಡಿಸಿಕೊಳ್ಳುತ್ತಿದ್ದರು. ಒಂದು ಸಲ ಜರವಾ ಗುಂಪು ತೆಂಗಿನಕಾಯಿ ಬೇಟೆಯಾಡುತ್ತ ಪಕ್ಕದ ಹಳ್ಳಿಗೆ ಬಂದಿತು. ಮನೆಯವರು ಎದ್ದು ಗುಂಡುಹಾರಿಸಿದಾಗ ಜರವಾಗಳೆಲ್ಲ ಓಡಿಹೋದರು. ಆದರೆ ಒಬ್ಬ ತರುಣ ಮಾತ್ರ ಸಿಕ್ಕಿಬಿದ್ದ. ತೆಂಗಿನಮರ ಹತ್ತಿದ್ದ ಆತ ಅವಸರದಲ್ಲಿ ಇಳಿಯುವಾಗ ಕೆಳಕ್ಕೆ ಬಿದ್ದು ಕಾಲು ಮುರಿದುಕೊಂಡಿದ್ದ.

ಇದು ಅಂಡಮಾನ್ ಸರ್ಕಾರಕ್ಕೆ ಗೊತ್ತಾದ ಕೂಡಲೇ ಆತನನ್ನು (ಆತನ ಹೆಸರು ಎನ್ಮೈ) ಆಸ್ಪತ್ರೆಗೆ ಸಾಗಿಸಿ, ಒಳ್ಳೇ ಚಿಕಿತ್ಸೆಯ ವ್ಯವಸ್ಥೆ ಮಾಡಿತು. ಕಾಲು ಗುಣವಾಗಲು ೨ ತಿಂಗಳು ಬೇಕಾಯಿತು. ಎರಡೂ ತಿಂಗಳ ಕಾಲ ಅವನ ಜತೆ ಯಾವುದೇ ಭಾಷೆಯ ಮೂಲಕ ಮಾತುಕತೆ ಸಾಧ್ಯವಾಗಲಿಲ್ಲ. ಅವನಾಡುತ್ತಿದ್ದ ಜರವಾ ಭಾಷೆ ಇವರಿಗೆ ತಿಳಿಯುತ್ತಿರಲಿಲ್ಲ. ಎನ್ಮೈ ಎರಡು ತಿಂಗಳ ಕಾಲ ನಾಗರಿಕ ಸಮಾಜದ ಸೌಲಭ್ಯಗಳನ್ನು ಸ್ವರ್ಗಸುಖದಂತೆ ಅನುಭವಿಸಿದನೋ, ತನ್ನ ಸಮುದಾಯದಿಂದ ಅಗಲಿ ಎಂಥ ತಲ್ಲಣ ಅನುಭವಿಸಿದನೋ ತಿಳಿಯದು. ಅವನು ಗುಣವಾದ ಬಳಿಕ ಒಂದು ಹೆಲಿಕ್ಯಾಪ್ಟರ್‌ನಲ್ಲಿ ಒಯ್ದು, ತೊಟ್ಟಿಲು ಕಟ್ಟಿ ಜರವಾ ಕಾಡಿಗೆ ಇಳಿಸಿ ಬರಲಾಯಿತು. ಎನ್ಮೈ ಬಹುಶಃ ನಾಗರಿಕ ಜಗತ್ತಿನ ತನ್ನ ಅನುಭವಗಳನ್ನು ಬಣ್ಣ ಕಟ್ಟಿ ಹೇಳಿರಬೇಕು.



*ತೆಂಗು ಬಾಳೆ ತುಂಬಿಕೊಳ್ಳುತ್ತಿರುವ ಜರವಾ*

ಪ್ರಚಂಡ ಶಕ್ತಿಯುಳ್ಳ ನಾಗರಿಕ ಸಮಾಜವನ್ನು ಪಕ್ಕದಲ್ಲಿಟ್ಟುಕೊಂಡು, ಜರವಾಗಳು ತಮ್ಮ ಕಾಡಿನ ದ್ವೀಪಗಳಲ್ಲಿ ಎಷ್ಟು ದಿನ ಪ್ರಭಾವ ಪಡೆಯದೆ ಬದುಕಿಯಾರು ? ಉಳಿದೆಲ್ಲ ಬುಡಕಟ್ಟುಗಳು ಈ ನಾಗರೀಕತೆಯ ಆಕರ್ಷಣೆಗೆ, ಒತ್ತಾಯಕ್ಕೆ ಮಣಿದಿವೆ. ಮಣಿಯುವುದು ಎಂದರೆ ತಮ್ಮ ಭಾಷೆ, ಆಹಾರ, ಉಡುಪು, ಕಾಡು, ವೃತ್ತಿ ಬಿಟ್ಟುಕೊಡುವುದು. ಜರವಾಗಳು ಮಾತ್ರ ಮಣಿಯದೆ ತಮ್ಮ ಸವಾಲನ್ನು ಇನ್ನೂ ಇಟ್ಟಿದ್ದಾರೆ. ಬಹುಶಃ ಅವರ ಬಿಲ್ಲು ಬಾಣಗಳೇ ಅವರ ಸ್ವಾತಂತ್ರ್ಯವನ್ನು ಕಾದಿರಬೇಕು. ಇನ್ನೂ ಬೇಟೆಯಾಡಿಯೇ, ಬಟ್ಟೆ ಉಡದೆಯೇ ಬದುಕಿರುವ ಅವರು ಒಳ್ಳೇ ಗುರಿಕಾರರು. ಮಾಯಾಬಂದರಿನ ಮಾನವಶಾಸ್ತ್ರದ ಮ್ಯೂಸಿಯಮ್ಮಿನಲ್ಲಿ ಅವರ ಆಯುಧಗಳನ್ನೆಲ್ಲಾ ಪ್ರದರ್ಶಿಸಲಾಗಿದೆ.

ನಮ್ಮನ್ನು ಕಾಳಿಘಾಟ್ ಎಂಬಲ್ಲಿಂದ ಮಾಯಾ ಬಂದರಿಗೆ ಕರೆದುತಂದ ದೋಣಿಕಾರ ಪ್ರಿಯತೋಶ್ ಬರೂವ, ಜರವಾಗಳನ್ನು ಭೇಟಿ ಮಾಡಿಬಂದ ಮತ್ತೊಬ್ಬ ವ್ಯಕ್ತಿಯಾಗಿದ್ದ. ಮಹಾನ್ ಕತೆಗಾರನಾದ ಈತ ಜರವಾಗಳ [illegible] ಬಗ್ಗೆ ಹೇಳಿದ ಒಂದು ಕತೆಯ ಪ್ರಕಾರ [illegible] ಹುತ್ತಗಳ ಒಳ ತನ್ನ ವಿಷದ ಜೊಲ್ಲನ್ನು ಕಕ್ಕುವ ಒಂದು ಹಕ್ಕಿ ಅಂಡಮಾನಿನಲ್ಲಿದೆಯಂತೆ. ಆ ಜೊಲ್ಲನ್ನು ಜರವಾಗಳು ಸಂಗ್ರಹಿಸಿ ತಮ್ಮ ಬಾಣದ ತುದಿಗೆ ಲೇಪಿಸುತ್ತಾರಂತೆ. ಎರಡನೆಯದಾಗಿ, ಜರವಾಗಳು ಎಂದೂ ಮೋಸದ ಆಕ್ರಮಣ ಮಾಡುವುದಿಲ್ಲವಂತೆ. ಮೊದಲು ಎಚ್ಚರಿಕೆಯ ಒಂದು ಬಾಣ ಬಿಡುತ್ತಾರೆ. ಇದನ್ನು ಮೀರಿ ಮುಂದೆ ಬಂದರೆ ಮಾತ್ರ ದೇಹಕ್ಕೆ ತಾಗುವಂತೆ ಎರಡನೇ ಬಾಣ ಬಿಡುತ್ತಾರೆ. ಇದು ನಿಜವೇ ಆಗಿದ್ದರೆ, ಹೇಗಾದರೂ ಮಾಡಿ ಅವರ ಅರಣ್ಯಗಳನ್ನು ಕಬಳಿಸಬೇಕೆಂದು ಹಸಿದು ಕಾದಿರುವ ಸಮಾಜದ ಜತೆ, ಜರವಾಗಳ ಈ 'ಧರ್ಮಯುದ್ಧ' ವ್ಯಂಗ್ಯವೇ ಸರಿ.

## ನಾಗರಿಕ ಸಮಾಜದ ಪ್ರಯತ್ನ

ಜರವಾಗಳು ಎಷ್ಟೇ ಪ್ರತಿರೋಧ ಮಾಡಿದರೂ ಅವರನ್ನು ಸಂಪರ್ಕಿಸಲು ನಾಗರಿಕ ಸಮಾಜ ನಿರಂತರ ಯತ್ನಿಸುತ್ತಲೇ ಇದೆ. ಅವರಲ್ಲಿ ಮಾನವ ಶಾಸ್ತ್ರಜ್ಞರೂ, ಭಾಷಾವಿಜ್ಞಾನಿಗಳೂ ಇದ್ದಾರೆ. (ಜರವಾಗಳ ನಗ್ನತೆಯನ್ನು ಕ್ಲಿಕ್ಕಿಸಿ ಮಾರುವ ಫೋಟೋಗ್ರಾಫರುಗಳೂ ಇದ್ದಾರೆ. ಪೋರ್ಟ್ ಬ್ಲೇರಿನ ಫೋಟೋ ಸ್ಟುಡಿಯೋಗಳಲ್ಲಿ ಇವು ಬಿಸಿ ದೋಸೆಯಂತೆ ಮಾರಾಟವಾಗುತ್ತವೆ). ೧೯೭೦ರಲ್ಲಿ ಮೊದಲಬಾರಿಗೆ ಒಂದು ತಂಡ ಜರವಾಗಳನ್ನು ಸಂಪರ್ಕಿಸಿತು. ಜರವಾಗಳನ್ನು ಕುರಿತು ತೆಗೆಯಲಾದ ಒಂದು ಚಿತ್ರದಲ್ಲಿ ಅಂಡಮಾನಿನ ಮಾನವಶಾಸ್ತ್ರ ಇಲಾಖೆಯ ನಿರ್ದೇಶಕನ ನೇತೃತ್ವದಲ್ಲಿ ಕೆಲವು ಬಿಳಿಯರು ಜರವಾಗಳ ಜತೆ ಒಂದು ದಿನ ಕಳೆದ ದೃಶ್ಯಗಳಿದ್ದುವು. ದೂರದಲ್ಲಿ ದೋಣಿ ಬರುವುದನ್ನು ಕಂಡಕೂಡಲೇ ಜರವಾಗಳು ಕಾಡಿನೊಳಗೆ ನುಸುಳಿ ತಲೆ ಮರೆಸಿಕೊಳ್ಳತೊಡಗುತ್ತಾರೆ. ದೋಣಿ ಕಂಡ ಅವರಿಗೆ ಶಂಕೆ, ಆತಂಕ; ದೋಣಿಯಲ್ಲಿರುವ ತೆಂಗು, ಬಾಳೆ, ಕೆಂಪು ಬಟ್ಟೆ ಕಂಡು ಸೆಳೆತ. ದೋಣಿ ಬಾಳೆ ಚಿಪ್ಪನ್ನೂ, ತೆಂಗಿನಕಾಯನ್ನೂ ದಡಕ್ಕೆ ಸುರಿದು ಕೊಂಚ ಹಿಂಜರಿಯುತ್ತಿದ್ದಂತೆ ಒಂದೊಂದಾಗಿ ತಲೆಗಳು ಪೊದೆಗಳಿಂದ ಇಣುಕಲಾರಂಭಿಸುತ್ತವೆ. ಒಬ್ಬ ಜರವಾ ಧೈರ್ಯ ತಂದುಕೊಂಡು ಗಬಕ್ಕನೆ ಬಾಳೆಚಿಪ್ಪು ಎತ್ತಿಕೊಂಡು ಓಡಿ ಹೋಗುತ್ತಾನೆ. ಇದಾದ ಬಳಿಕ ನಾಲ್ಕಾರು ತರುಣರು, ಇದ ಕಂಡು ನಾಲ್ಕಾರು ಚಿಳ್ಳೆ ಪಿಳ್ಳೆಗಳು, ಆಮೇಲೆ ಹೆಂಗಸರು ಕಡೆಗೆ ಎಲ್ಲರೂ ಮುಗಿಬಿದ್ದು ಬಾಚಿಕೊಳ್ಳ ತೊಡಗುತ್ತಾರೆ. ಈಗ ದೋಣಿ ದಡಕ್ಕೆ ಹತ್ತಿರ ಹತ್ತಿರ ಬರತೊಡಗುತ್ತದೆ. ಈ ಭೇಟಿ ಪ್ರಕರಣದಲ್ಲಿ ಎಷ್ಟೋ ತಮಾಷೆ ದೃಶ್ಯಗಳಿದ್ದವು. ತೆಂಗಿನಕಾಯಿ ಎಸೆದಾಟದಲ್ಲಿ ಜರವಾ ಮುದುಕಿಯೊಬ್ಬಳ ಬೆನ್ನ ಮೇಲೆ ಫಟ್ ಎಂದು ಕಾಯಿಬಿದ್ದಾಗ ಗುಲ್ಲೋ ಗುಲ್ಲು. ನಮ್ಮ ದೋಣಿಕಾರ ಗೆಳೆಯ ಪ್ರಿಯತೋಶ್ ಹೇಳಿದಂತೆ, ಜರವಾಗಳಿಗೆ ಕೆಂಪು ಬಟ್ಟೆ ಅಂದರೆ ತುಂಬ ಆಸೆ. ಅದನ್ನು ಹರಿದು ಎಲ್ಲಿ ಬೇಕಲ್ಲಿ ಕಟ್ಟಿಕೊಳ್ಳುತ್ತಾರೆ. ಅಪರಿಚಿತರ ಕೆನ್ನೆಗೆ ಪಟಾರನೆ ಹೊಡೆದು ತಮಾಷೆ ಮಾಡುವುದು ಅವರ ಇನ್ನೊಂದು ಹವ್ಯಾಸವಂತೆ !

(೬೦ನೇ ಪುಟ ನೋಡಿ)

# ದಿನಕ್ಕೊಂದು ಗ್ರಹ?

ನಮ್ಮ ಮಾರ್ಗದರ್ಶಿ ಚಂದ್ರ ಫೆಬ್ರವರಿಯಲ್ಲಿ ದಿನಕ್ಕೊಂದು ಗ್ರಹ ತೋರಿಸಲು ಸಿದ್ಧನಾಗಿದ್ದಾನೆ. ಅತ ಬರುವವರೆಗೂ ಆಕಾಶದಲ್ಲಿ ಶಿವಲೀಲೆಯನ್ನು ಗಮನಿಸಿ.

ಈ ತಿಂಗಳ ಸಂಜೆಯಲ್ಲಿ ಕಂಗೊಳಿಸುವುದು ಒರೈಯನ್ (ಮಹಾವ್ಯಾಧ) ನಕ್ಷತ್ರಪುಂಜ. ಮೂರು ನಕ್ಷತ್ರಗಳ ಚಿಕ್ಕ ಗೆರೆ. ಅದರ ಸುತ್ತ ದೊಡ್ಡದೊಂದು ಆಯುತಾಕಾರದ ಆವರಣ. ವಿವಿಧ ಜನಾಂಗಗಳಲ್ಲಿ ಈ ಚಿತ್ತಾರ ಮೂಡಿಸಿರುವ ಕಲ್ಪನಾ ಲಹರಿ ವೈವಿಧ್ಯಪೂರ್ಣ. ಐರೋಪ್ಯರಿಗೆ ಇದು ಒರೈಯನ್. ಪುರಾಣದ ಮಹಾಯೋಧ. ಜಗತ್ತಿನ ಜೀವ ಜಂತುಗಳೆಲ್ಲವನ್ನೂ

**ಡಾ॥ ಬಿ. ಎಸ್. ಶೈಲಜಾ**

ಗೆಲ್ಲುವೆನೆಂಬ ಆತ್ಮವಿಶ್ವಾಸ ಈತನದು. ಈತನೊಡನೆ ಕಾಳಗಕ್ಕಿಳಿದದ್ದು ಬಲಶಾಲಿ ವೃಷಭ. ಪೂರ್ವದಲ್ಲಿ ವೃಷಭ ಮೊದಲು ಮೂಡುತ್ತದೆ. ಅದರ ನಂತರ ಒರೈಯನ್ ಉದಯಿಸುತ್ತದೆ. ಇದನ್ನು ಕಾಳಗದ ಆರಂಭ ಎನ್ನಬಹುದಾದರೆ ಮೇಲಿರುವ ವೃಷಭದ್ದೇ ಮೇಲುಗೈ. ನೆತ್ತಿಯ ಮೇಲಿದ್ದಾಗ ನಮಗೆ ಕಾಣುವುದು ಇವರಿಬ್ಬರ ಮುಖಾಮುಖಿ. ಇದೇ ಸಂಜೆಯಲ್ಲಿ ಕಾಣುವ ದೃಶ್ಯ. ಪಶ್ಚಿಮದಲ್ಲಿ ಕಂತುವಾಗ ಒರೈಯನ್ ಮೇಲೆ, ವೃಷಭ ಕೆಳಗೆ. ಅಂದರೆ ಕಾಳಗದಲ್ಲಿ ಒರೈಯನ್ ವಿಜಯಿ. ಈ ಕಥೆಯು ಚಿತ್ರಣ ಆಗಸದಲ್ಲಿದೆ. ಒರೈಯನ್ ಕಾಲಬಳಿಯಲ್ಲಿ ನಾಯಿ. ಕ್ಯಾನಿಸ್ ಮೇಜರ್ ಹೆಸರಿನ ಈ ನಕ್ಷತ್ರಪುಂಜದ ಅತಿ ಪ್ರಕಾಶಮಾನ ನಕ್ಷತ್ರವೇ ಸಿರಿಯಸ್.

ಸಿರಿಯಸ್‌ನ ಭಾರತೀಯ ನಾಮ ಲುಬ್ಧಕ. ಲುಬ್ಧಕ ಎಂಬ ಪದದ ಒಂದು ಅರ್ಥ ಬೇಟೆಗಾರ ಎಂದು. ಇದರ







ಹಿನ್ನೆಲೆ ಪ್ರಜಾಪತಿ ಬ್ರಹ್ಮನ ಕತೆ. ಮಗಳನ್ನೇ ಮೋಹಿಸಿದ ಈತ. ಮಗಳು (ರೋಹಿಣಿ) ಜಿಂಕೆಯಾಗಿ ಓಡಿದಳು. ಹಿಂಬಾಲಿಸಿದ ಪ್ರಜಾಪತಿ ಇನ್ನೊಂದು ಜಿಂಕೆಯಾದ. ಈ ಕುಕೃತ್ಯವನ್ನು ತಡೆಯಲು ಶಿವನೇ ಬೇಟೆಗಾರನಾದ. ಆತನ ಬಾಣ ಬ್ರಹ್ಮನ ತಲೆಗಳಲ್ಲೊಂದನ್ನು ಕತ್ತರಿಸಿತು. (ಮೃಗ ಎಂದರೆ ಜಿಂಕೆ). ಮೃಗ ರೂಪದಲ್ಲಿದ್ದ ಈ ತಲೆ ಮೃಗಶಿರಾ ಆಯಿತು. ರಕ್ತಸಿಕ್ತ ಬಾಣ ಆರಿದ್ರಾ, (ಆರ್ದ್ರಾ) ಎಂಬ ಕೆಂಪು ನಕ್ಷತ್ರವಾಯಿತು. ಈ ರುದ್ರ ನಾಟಕದ ಪ್ರೇಕ್ಷಕಿ ರೋಹಿಣಿ.

ಈ ಕತೆಯನ್ನು ಆಗಸದಲ್ಲಿ ಕಲ್ಪಿಸಿಕೊಳ್ಳಬಹುದು. ಸಿರಿಯಸ್ ಅಂದರೆ ಲುಬ್ಧಕನಿಂದ ಒರೈಯನ್‌ನತ್ತ ಗೆರೆ ಎಳೆದರೆ ಅದು ಮೂರು ನಕ್ಷತ್ರಗಳನ್ನು ಸವರಿಕೊಂಡು ಹೋಗುತ್ತದೆ. ಇವು ಮೂರು ಬ್ರಹ್ಮನ (ಉಳಿದುಕೊಂಡ) ಮೂರು ತಲೆಗಳು ಎಂದು ಊಹಿಸಬಹುದು. ಈ ಮೂರು



ನಕ್ಷತ್ರಗಳಿಗಿಂತ ಮಂಕಾದ ನಕ್ಷತ್ರ ಮೃಗಶಿರಾ ಚಿಮ್ಮಿ ದೂರಕ್ಕೆ ಹಾರಿದೆ.

ರೋಹಿಣಿ, ಮೃಗಶಿರಾ, ಆರಿದ್ರಾ ಇವು ಒಂದೇ ನೇರದಲ್ಲಿವೆ. ಮೂಲತಃ ಈ ನಕ್ಷತ್ರಗಳ ಕಲ್ಪನೆ ಮೂಡಿದ್ದು ಚಂದ್ರನ ಪಥವನ್ನು ಗುರುತಿಸುವುದಕ್ಕಾಗಿ. ಹನ್ನೆರಡು ರಾಶಿಗಳ ರಾಶಿಚಕ್ರವೂ ಇದೇ ಹೆದ್ದಾರಿಯನ್ನು ಗುರುತಿಸುತ್ತದೆ. ಆದರೆ ಆರಿದ್ರಾ (ಬೀಟಲ್ ಜ್ಯೂಸ್) ಮತ್ತು ಮೃಗಶಿರಾ (ಲ್ಯಾಮ್‌ಡಾ ಒರಿಯೋನಿಸ್) ಇವೆರಡೂ ಒರೈಯನ್‌ಗೆ ಸೇರಿವೆ. ರಾಶಿಚಕ್ರದಲ್ಲಿಲ್ಲ.

ಚಂದ್ರ ಈ ನಕ್ಷತ್ರಗಳನ್ನು ದಾಟುವ ದಿನ ಫೆಬ್ರವರಿ 14 ಮತ್ತು 15. ಚಂದ್ರನಿಲ್ಲದಾಗ, ಅಂದರೆ ಫೆಬ್ರವರಿಯ ಮೊದಲ ವಾರದಲ್ಲಿ, ಈ ನಕ್ಷತ್ರಪುಂಜಗಳನ್ನು ಗುರುತಿಸಿ. ನಿಮ್ಮ ಪ್ರಯತ್ನದ ಫಲಿತಾಂಶ 14 ಮತ್ತು 15ರಂದು ಪ್ರಕಟವಾಗುವುದು.

ಮಾರ್ಗದರ್ಶಿ ಚಂದ್ರ ಫೆಬ್ರವರಿ ಮೊದಲೆರಡು ದಿನ ಬೆಳಗಿನ ಝಾವ ಕಾಣುತ್ತದೆ. ಎರಡರಂದು ಶುಕ್ರಗ್ರಹದ ಸಮೀಪ ಕಾಣುತ್ತದೆ. ಫೆಬ್ರವರಿ 5ರಂದು ಸಂಜೆ 6 ಗಂಟೆ 33 ನಿಮಿಷಕ್ಕೆ ಅಮಾವಾಸ್ಯೆ. ಅಂಟಾರ್ಕ್ಟಿಕಾದಿಂದ ಪಾರ್ಶ್ವ ಸೂರ್ಯಗ್ರಹಣವನ್ನು ಕಾಣಬಹುದು. 9ರಂದು ಚಂದ್ರನನ್ನು ಮೀನರಾಶಿಯಲ್ಲಿ ಮಂಗಳಗ್ರಹದ ಸಮೀಪ ಕಾಣಬಹುದು. 11ರಂದು ಮೇಷರಾಶಿಯಲ್ಲಿ

> ನಕ್ಷತ್ರಲೋಕದಲಿ ಲಕ್ಷಕ್ಕೆ ಬೆಲೆಯಿಲ್ಲ
> ಲಕ್ಷ್ಯವೊಂದೆ ಪರಮಗಮ್ಯ ತ್ವರೆಯಿಂದ ತೆರೆ
> ಚಕ್ಷುವಂ ತೊರೆ ಅಹಂಕಾರವಂ ನಡೆದಂತೆ
> ಸಾಕ್ಷಾತ್ಕರಿಪುದಲ್ಲಿ ವರ್ಚಸ್ಸು ಅತ್ರಿಸೂನು

> *ನಾಟಕವ ನೋಡು ಬ್ರಹ್ಮಾಂಡ ರಂಗಸ್ಥಲದಿ*
> *ಕೋಟಿ ನಟರಾಂತಿಹರು ಚಿತ್ರ ಪಾತ್ರಗಳ*
> *ಆಟಕ್ಕೆ ಕಥೆಯಿಲ್ಲ ಮೊದಲಿಲ್ಲ ಕಡೆಯಿಲ್ಲ*
> *ನೋಟಕರು ಮಾಟಕರೆ ಮಂಕುತಿಮ್ಮ*

ಗುರುಗ್ರಹದ ಸಮೀಪ, 12ರಂದು ಶನಿಗ್ರಹದ ಸಮೀಪ ಹೀಗೆ ನಾಲ್ಕು ದಿನ ನಾಲ್ಕು ಗ್ರಹಗಳ ವೀಕ್ಷಣೆ ಸಾಧ್ಯ. ಬರಿಗಣ್ಣಿಗೆ ಕಾಣುವ ಇನ್ನೊಂದು ಗ್ರಹ ಬುಧ. ಫೆಬ್ರವರಿ 13, 14 ಈ ಅವಧಿಯಲ್ಲಿ ಸಂಜೆ ಪಶ್ಚಿಮದಲ್ಲಿ ದಿಗಂತದಂಚಿನಲ್ಲಿ ಕಾಣುತ್ತದೆ. ಫೆಬ್ರವರಿ 6ರಂದು ಚಂದ್ರನ ಪಕ್ಕ ಇರುತ್ತದೆ. ಆದರೆ ಅಂದು ಚಂದ್ರನನ್ನು ಕಾಣುವುದೊಂದು ಸವಾಲೇ ಸರಿ.

ಫೆಬ್ರವರಿ 20 ರಾತ್ರಿ 10 ಗಂಟೆಗೆ ಹುಣ್ಣಿಮೆ. ಚಂದ್ರನ ಸಮೀಪ ಇರುವ ಪ್ರಕಾಶಮಾನವಾದ ನಕ್ಷತ್ರವೇ ಮಘ. ಆದ್ದರಿಂದ ಈ ತಿಂಗಳ ಹೆಸರು ಮಾಘ. (ನೀಲಿ ಚಂದ್ರ - blue moon ಎಂದು ಹೆಸರಿಸಿದ್ದು ಮೂಲದಲ್ಲಿ ಕ್ರಾಂತಿಮಾಸದ ಎರಡನೆಯ ಹುಣ್ಣಿಮೆಗೆ. ಆ ಪ್ರಕಾರ ಇದು ನೀಲಿಚಂದ್ರ).

ದುರ್ಬೀನು ಅಥವಾ ಚಿಕ್ಕ ದೂರದರ್ಶಕದಿಂದ ಒರೈಯನ್‌ನ (ವ್ಯಾಧನ) ಸೊಂಟಪಟ್ಟಿಯ ಮೂರು ನಕ್ಷತ್ರಗಳನ್ನು ಗಮನಿಸಿ. ತುಸು ದಕ್ಷಿಣಕ್ಕೆ ತಿರುಗಿಸಿ ವ್ಯಾಧನ ಖಡ್ಗದ ಒರೆಯ ಸಮೀಪ ದೃಷ್ಟಿಸಿ ನೋಡಿ. ನಕ್ಷತ್ರ ಹೌದೋ ಅಲ್ಲವೋ ಎಂದು ಅನುಮಾನ ಬರುವ ಒಂದು ಕಾಯ ಕಾಣುತ್ತದೆ. ಈ 'ನೆಬ್ಯುಲ'ದಲ್ಲಿ ಕೆಲವು ಮಿಲಿಯನ್ ವರ್ಷಗಳಲ್ಲಿ ಹೊಸ ನಕ್ಷತ್ರಗಳು ಉದಯಿಸಲಿವೆ. ಒರೈಯನ್ ನೆಬ್ಯುಲ ಎಂದೇ ಇದರ ಹೆಸರು.

ಕ್ಯಾಸಿಯೋಪಿಯ, ಪರ್ಸಿಯುಸ್, ಒರೈಯನ್, ಕ್ಯಾನಿಸ್ ಮೇಜರ್ (ಅಂದರೆ ಕುಂತಿ, ಅರ್ಜುನ, ಮಹಾವ್ಯಾಧ ಮತ್ತು ಶ್ವಾನ) ಈ ಹಾದಿಯಲ್ಲಿ ದುರ್ಬೀನಿನಿಂದ ದೃಷ್ಟಿ ಹಾಯಿಸಿ. ದಟ್ಟವಾಗಿ ಹರಡಿರುವ ನಕ್ಷತ್ರಗಳು ಕಾಣುತ್ತವೆ. ಬೇರೆ ಯಾವ ದಿಕ್ಕಿನಲ್ಲೂ ಇಷ್ಟೊಂದು ದಟ್ಟವಾದ ನಕ್ಷತ್ರಗಳು ಹರಡಿಲ್ಲ. ಬರಿಗಣ್ಣಿನಿಂದಲೂ ನೀವು ಈ ವ್ಯತ್ಯಾಸವನ್ನು ಗಮನಿಸಬಲ್ಲಿರಿ. ಇದೇ ಹಾಲು ಹಾದಿ, ಕ್ಷೀರಪಥ ಎಂದೆಲ್ಲಾ ಹೆಸರು ಪಡೆದಿರುವ ನಮ್ಮ ಗ್ಯಾಲಕ್ಸಿ ಆಕಾಶಗಂಗೆಯ ಒಂದು ಭಾಗ.

**ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್,
ಶ್ರೀ ಟಿ. ಚೌಡಯ್ಯ ರಸ್ತೆ, ಬೆಂಗಳೂರು- ೫೬೦ ೦೦೧

*ಸಂಜೆಯ ಆಕಾಶದಲ್ಲಿ ನೆತ್ತಿಯನ್ನು ದಾಟುವ ನಕ್ಷತ್ರ ಪುಂಜ ಪರ್ಸಿಯುಸ್ (ಅರ್ಜುನ) ಅನ್ನು ಪ್ರತಿ ದಿನವೂ ಗಮನಿಸಿ. ಇದರಲ್ಲಿ ಒಂದು ನಕ್ಷತ್ರ (ಬೀಟಾ, ಪ್ರಕಾಶದಲ್ಲಿ ಎರಡನೆಯದು) ಒಮ್ಮೊಮ್ಮೆ ಕ್ಷೀಣ ವಾಗಿರುತ್ತದೆ. ಫೆಬ್ರವರಿ 19ರ ರಾತ್ರಿ 7 ಗಂಟೆಗೆ ಇದು ಪ್ರಕಾಶದಲ್ಲಿ ಕನಿಷ್ಠವನ್ನು ಮುಟ್ಟುತ್ತದೆ. 22 ರಂದು ಸಂಜೆ ಕ್ಷೀಣವಾಗಿದ್ದು 8 ಗಂಟೆಯ ಹೊತ್ತಿಗೆ ಪುನಃ ಪ್ರಕಾಶ ವನ್ನು ಪಡೆಯುತ್ತದೆ. ಈ ನಕ್ಷತ್ರಕ್ಕೆ ಆಲ್ಗಾಲ್ (ಅಂದರೆ ದೆವ್ವದ ಕಣ್ಣು) ಎಂಬ ಹೆಸರನ್ನಿಟ್ಟವರು ಅರಬ್ಬರು. ಇದು ಹೀಗೇಕೆ ಕಣ್ಣು ಮಿಟುಕಿಸುತ್ತದೆ ಎಂದು ಚಿಂತಿಸಿದವರಲ್ಲಿ ಒಬ್ಬ ಜಾನ ಗುಡ್‌ರಿಕ್. ಈ ಕಿವುಡ ಮೂಕ ಹುಡುಗ ಇನ್ನೂರು ವರ್ಷಗಳ ಹಿಂದೆ ಆಕಾಶವೀಕ್ಷಣೆಯನ್ನು ತನ್ನ ದಿನಚರಿಯನ್ನಾಗಿ ಮಾಡಿ ಕೊಂಡಿದ್ದ. ಆಲ್ಗಾಲ್ ಪ್ರತಿ 2 ದಿನ 22 ಗಂಟೆಗಳಿ ಗೊಮ್ಮೆ ಕ್ಷೀಣವಾಗುತ್ತದೆ ಎಂದು ತನ್ನ ಅನೇಕ ವರ್ಷಗಳ ವೀಕ್ಷಣೆಯಿಂದ ಲೆಕ್ಕ ಹಾಕಿದ್ದ. ಅಷ್ಟೇ ಅಲ್ಲ, ಆ ಘಟನೆ ಒಟ್ಟು ಎಂಟು ಗಂಟೆ ನಡೆಯುತ್ತದೆ ಎಂದೂ ತಿಳಿದಿದ್ದ. ಈ ನಕ್ಷತ್ರ ಜೋಡಿ ಇರಬೇಕು, ಇದರ ಸಂಗಾತಿ ಅಡ್ಡ ಬಂದಾಗ ಹೀಗೆ ಬೆಳಕು ಕಡಿಮೆ ಆಗುತ್ತಿರಬೇಕು ಎಂದು ಆತ ಬರೆದಿಟ್ಟದ್ದು ಇಂದು ಖಗೋಳ ವಿಜ್ಞಾನದಲ್ಲಿ ಯಮಳ ನಕ್ಷತ್ರಗಳ ಹೊಸ ಅಧ್ಯಾಯವನ್ನೇ ತೆರೆದಿಟ್ಟಿದೆ.*

# ಬಾಲದುಡಿಮೆಗಾರ - ದಾದಾಪೀರ್

ಬೆಳಗಾಗುತ್ತಿದ್ದಂತೆ ತಾಯಿ ನಸ್ರೀನಳ ಗಡಿಬಿಡಿ ಪ್ರಾರಂಭವಾದಾಗ ದಾದಾಪೀರನ ಸಕ್ಕರೆ ನಿದ್ದೆಯೂ ಹಾರಿಹೋಗುತ್ತದೆ. ಗಾರ್ಮೆಂಟ್ಸ್ ಮಹಿಳೆಯರು ಗುಂಪುಗುಂಪಾಗಿ ಬೀದಿಗಿಳಿದರೆಂದರೆ, ನಸ್ರೀನಳ ಗಡಿಬಿಡಿ ಮತ್ತಷ್ಟು ಹೆಚ್ಚುತ್ತದೆ. ಮಾಡಿದ ಅನ್ನವನ್ನೋ ಉಪ್ಪಿಟ್ಟನ್ನೋ ಅವಸರದಿಂದ ಊಟದ ಡಬ್ಬಿಗೆ ತುಂಬಿಸಿಕೊಂಡು, ಜೋಕೆಯಾಗಿ ಹೋಗಿಬರುವಂತೆ ದಾದಾಪೀರನಿಗೆ ಹೇಳಿ, ಶಾಲೆ ಮುಗಿಸಿ ಬಂದು ಮನೆಯಲ್ಲಿಯೇ ಇರುವಂತೆ ಮಗಳು ರೆಹನಾ ಬಾನುವಿಗೆ ತಾಕೀತು ಮಾಡಿ, ಬೀದಿಗಿಳಿದು ಹೆಂಗಸರ ಗುಂಪಿನಲ್ಲಿ ಮರೆಯಾಗುತ್ತಾಳೆ.

ಅನಂತರ ದಾದಾಪೀರನ ತೇರಿನ ಸಿಂಗಾರ ಪ್ರಾರಂಭವಾಗುತ್ತದೆ. ಸೈಕಲಿಗೆ ಸ್ಟ್ಯಾಂಡು ಹಾಕಿ ನಿಲ್ಲಿಸಿ, ಬಣ್ಣಬಣ್ಣದ ಪ್ಲಾಸ್ಟಿಕ್ ಬಕೆಟ್‌ಗಳು, ಕೊಡಗಳು, ಪಾತ್ರೆಗಳು, ಮಗ್ಗುಗಳು, ಇನ್ನಿತರ ಸಣ್ಣ ಗೃಹ ಬಳಕೆಯ ವಸ್ತುಗಳನ್ನು ಒಂದೊಂದಾಗಿ ಜೋಡಿಸಿ, ಹಿಂದಿನ ದಿನ ಗೃಹಿಣಿಯರು ಆರ್ಡರ್ ಮಾಡಿದ್ದ ವಸ್ತುಗಳನ್ನು ಮರೆಯದೆ ತೆಗೆದಿರಿಸಿಕೊಂಡು, ಗ್ರಾಹಕರು ಕೇಳಿದಾಗ ಸುಲಭವಾಗಿ ತೋರಿಸಲು ಬರುವಂತೆ, ಅದೇ ವೇಳೆ ರಸ್ತೆಯಲ್ಲಿ ತೇರು ಚಲಿಸುವಾಗ ಎದುರಿಗೆ ಬರುವ ವಾಹನಗಳಿಗೆ ಢಿಕ್ಕಿಯಾಗದಂತೆ ಅಡಕವಾಗಿ ಕಟ್ಟಿಕೊಂಡು ಹೊರಡುವ ತಯ್ಯಾರಿ ನಡೆಸುತ್ತಾನೆ.

ಗಾರ್ಮೆಂಟ್ಸ್‌ನವರು, ಇನ್ನಿತರ ಕಾರ್ಮಿಕರು ರಸ್ತೆ ತೆರವು ಮಾಡಿದನಂತರ ದಾದಾಪೀರನ ತೇರು ರಸ್ತೆಗಿಳಿಯುತ್ತದೆ. 'ಪ್ಲಾಸ್ಟಿಕ್ ಸಾಮಾನ್ ಬೇಕೇನ್ರಮ್ಮ, ಪ್ಲಾಸ್ಟಿಕ್ ಸಾಮಾನ್...' ಎಂದು ಒಂದೆರಡು ಬಾರಿ ಸಣ್ಣ ಸ್ವರದಲ್ಲಿ ಕೂಗು ಹಾಕುತ್ತ ಚೌಡೇಶ್ವರಿ ನಗರದಿಂದ ಹೊರಟು ಲಗ್ಗೆರೆ, ರಾಜಗೋಪಾಲನಗರ, ಲಕ್ಷ್ಮೀನಾರಾಯಣಪುರ, ದಾಸರಹಳ್ಳಿ, ಜಾಲಹಳ್ಳಿ, ಚಿಕ್ಕಬಾಣವಾರ - ಹೀಗೆ, ಪ್ರತಿದಿನ ಸುಮಾರು ಮೂವತ್ತು ಕಿಲೋಮೀಟರ್ ಸೈಕಲ್ ಸವಾರಿ.

ಚಿಕ್ಕನಾಯಕನ ಹಳ್ಳಿಯಲ್ಲಿ ನಾಲ್ಕನೇ ತರಗತಿಯಲ್ಲಿ ಕಲಿಯುತ್ತಿದ್ದ ದಾದಾಪೀರನ ಓದು ಮುಂದುವರಿದಿದ್ದರೆ



ದಾದಾ ಪೀರ್

ಈಗ ಆತ ಹೈಸ್ಕೂಲು ಮುಗಿಸಿರುತ್ತಿದ್ದ. ಕುಟುಂಬದಲ್ಲಾದ ಏರುಪೇರಿನಿಂದ ಓದು ಮುಂದುವರಿಯಲಿಲ್ಲ. ಆತನ ತಂದೆ ತಿಪಟೂರಿನಲ್ಲಿ ನಾಲ್ಕೈದು ಲಕ್ಷ ರೂಪಾಯಿ ಬಂಡವಾಳ ಹಾಕಿ ವ್ಯಾಪಾರ ಮಾಡುತ್ತಿದ್ದ. ವಹಿವಾಟು ಸರಿಯಾಗಿ ನಡೆಯದೆ ನಷ್ಟ ಅನುಭವಿಸಬೇಕಾಯಿತು. ಇದೇನೂ ಅಪರೂಪದ ವಿಷಯವಲ್ಲ. ಇದಕ್ಕೆ ನಸ್ರೀನಳಾಗಲೀ, ಆಕೆಯ ಎರಡು ಸಣ್ಣ ಮಕ್ಕಳಾಗಲೀ ಕಾರಣರಲ್ಲ. ದಿವಾಳಿಯಾದ ತಂದೆ ಮತ್ತೆ ವ್ಯಾಪಾರ ಮಾಡಿ ಕಳೆದುಕೊಂಡಿದ್ದನ್ನು ಗಳಿಸಬೇಕಿತ್ತು. ಅದಕ್ಕಾಗಿ ಆ ಮಹಾಶಯ ಸರಳ ಮಾರ್ಗ ಅನುಸರಿಸಿದ. ನಸ್ರೀನಳಿಗೆ ತಲಾಖ್ ಕೊಟ್ಟ! ವರದಕ್ಷಿಣೆ ಪಡೆದು ಮತ್ತೊಂದು ಹೆಣ್ಣನ್ನು ಮದುವೆಯಾದ.

ಯಾವುದೇ ಆಸರೆಯಿಲ್ಲದೆ ತನ್ನ ಎರಡು ಪುಟ್ಟ ಮಕ್ಕಳನ್ನು ಸಾಕುವ ಹೊಣೆ ನಸ್ರೀನಳ ಪಾಲಿಗೆ ಬಂದಿತು. ದಾದಾಪೀರನ ಓದೂ ಅಲ್ಲಿಗೆ ಕೊನೆಗೊಂಡಿತು. ಒಂದೆರಡು ವರ್ಷ ಅಲ್ಲಿ ಕಷ್ಟ ಅನುಭವಿಸಿದನಂತರ, ನಸ್ರೀನಳ ಬಂಧುವೊಬ್ಬರ ಸಲಹೆಯ ಮೇರೆಗೆ ಬೆಂಗಳೂರಿಗೆ ಬಂದರು. ಅವರು ಸಹಾಯ ಮಾಡಿರದಿದ್ದರೆ ಬೆಂಗಳೂರಿನಲ್ಲಿ ಸಹ ಬದುಕು ದುರ್ಭರವಾಗಲಿತ್ತು. ನಸ್ರೀನಳಿಗೆ ಗಾರ್ಮೆಂಟ್ಸ್‌ನಲ್ಲಿ ಕೆಲಸ ಸಿಕ್ಕಿತು. ಒಂದು ಪುಟ್ಟ ಬಾಡಿಗೆ ಮನೆ ಹಿಡಿಯಲು, ದಾದಾ ಪೀರನಿಗೆ ವ್ಯಾಪಾರ ಮಾಡಲು, ಪ್ಲಾಸ್ಟಿಕ್ ಸಾಮಾನು ಕೊಡಿಸಲು ಸಹ ದೂರದ ಬಂಧು ನೆರವು ನೀಡಿದರು. ದುಡಿಮೆಯ ಮೇಲಿನ ನಂಬಿಕೆಯೇ ಆತನ ಬಂಡವಾಳ.

ಪ್ರತಿ ದಿನ ಮೂವತ್ತರಿಂದ ನಲವತ್ತು ಕಿ. ಮೀ. ಸವಾರಿ ಮಾಡಿ ದಾದಾ ಪೀರ ಸುಮಾರು 50ರೂ ಗಳಿಸುತ್ತಾನೆ. ತೀರಾ ಸಾಮಾನ್ಯ ಜನರು ಈತನ ಗ್ರಾಹಕರು. ದಾರಿಯಲ್ಲಿ ಸಿಗುವ ಟೀ ಅಂಗಡಿಗಳಲ್ಲಿ ಏನಾದರೂ ತಿಂದರೆ ಊಟದ ಶಾಸ್ತ್ರ ಮುಗಿಯುತ್ತದೆ.

ಹದಿನಾಲ್ಕರ ಪ್ರಾಯದ ದಾದಾಪೀರನಿಗೆ ತನ್ನ ಓದು ನಾಲ್ಕನೇ ತರಗತಿಗೇ ನಿಂತುದಕ್ಕೆ, ಬೆಂಗಳೂರಿನಲ್ಲಿ ಓದು ಮುಂದುವರಿಸಲಾಗದ್ದಕ್ಕೆ ಬೇಸರವಿದೆ. ತನ್ನ ತಂಗಿ ಶಾಲೆಗೆ ಹೋಗುತ್ತಿದ್ದಾಳೆಂದು ಸಂತೋಷವಿದೆ. ಆದರೆ, ಆಕೆಯೂ ಗಾರ್ಮೆಂಟ್ಸ್ ಹುಡುಗಿಯರ ಗುಂಪು ಸೇರಬಹುದೆಂದು ಅನುಮಾನವೂ ಇದೆ.

ದಾದಾಪೀರನ ತೇರು ಬರುತ್ತಿದೆ. ದಾರಿಬಿಡಿ.

ಕೆ. ಪಿ. ಸ್ವಾಮಿ
ನಂ. ೧೬೭, ೧೦ನೇ ಮೈನ್, ೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು - ೫೬೦ ೦೫೮

## ದುಡಿಯುವ ಮಕ್ಕಳು

ಯಾವುದೇ ಕಾರಣದಿಂದ ಶಿಕ್ಷಣಕ್ಕೆ ಅವಕಾಶವಿಲ್ಲದಾಗ ಅನಿವಾರ್ಯವಾಗಿ ಮಕ್ಕಳು ದುಡಿಮೆಗಿಳಿಯಬೇಕಾಗುತ್ತದೆ. ಮಾಲಿಕರು ಬಾಲಕಾರ್ಮಿಕರನ್ನು ನೇಮಿಸಿಕೊಳ್ಳುವ ಮೂಲಕ ಅವರಿಗೆ ಉಪಕಾರ ಮಾಡುತ್ತಾರೆಯೇ ?

ಮಾಲಿಕರಿಗೆ ಮುಖ್ಯವಾಗಿ ತಮ್ಮ ಲಾಭದ ಬಗ್ಗೆ ಹೆಚ್ಚು ಆಸಕ್ತಿ ಇರುತ್ತದೆ. ಬಾಲ ಕಾರ್ಮಿಕರನ್ನು ಯಾವುದೇ ಅಡ್ಡಿಯಿಲ್ಲದೆ ಶೋಷಿಸಬಹುದಾಗಿದೆ. ಬಹುಮಟ್ಟಿಗೆ ಕೃಷಿ ಕ್ಷೇತ್ರದಲ್ಲಿ ಹೆಚ್ಚು ಸಂಖ್ಯೆಯಲ್ಲಿ ದುಡಿಯುವ ಮಕ್ಕಳು ಕಾಣಸಿಗುತ್ತಾರೆ. ಬಹಳ ಕಡಿಮೆ ಕೂಲಿಗೆ ಅವರನ್ನು ನೇಮಿಸಿಕೊಳ್ಳಬಹುದು. ಮಕ್ಕಳು ಬಹಳ ಸಣ್ಣ ವಯಸ್ಸಿನಲ್ಲಿಯೇ, ಎಂದರೆ ಆರು-ಏಳರ ಪ್ರಾಯದಲ್ಲಿಯೇ, ತಮ್ಮ ತಂದೆ ತಾಯಿಗಳೊಂದಿಗೆ ದುಡಿಮಯ ಕ್ಷೇತ್ರ ಪ್ರವೇಶಿಸುತ್ತಾರೆ. ಮಧ್ಯಮ ವರ್ಗದ ಜನರು ಮನೆಗೆಲಸಗಳಿಗಾಗಿ ಗಣನೀಯ ಸಂಖ್ಯೆಯ ಬಾಲದುಡಿಮೆಗಾರರನ್ನು ನೇಮಿಸಿಕೊಳ್ಳುತ್ತಾರೆ. ಅಲ್ಲದೆ, ಬೀಡಿ ಕೈಗಾರಿಕೆ, ಗಾಜು ತಯಾರಿಕೆ, ರತ್ನಗಂಬಳಿ ನೇಯ್ಗೆ, ಪ್ರಶಸ್ತ ಶಿಲೆಗೆ ಮೆರಗು ಕೊಡುವುದು, ಬೆಂಕಿಕಡ್ಡಿ, ಪಟಾಕಿ ತಯಾರಿಕೆ ಉದ್ಯಮಗಳು ಬಾಲಕಾರ್ಮಿಕರ ಶೋಷಣೆಯಿಂದಲೇ ಸಾಕಷ್ಟು ಲಾಭ ಗಳಿಸಿವೆ. ಮಕ್ಕಳಿಗೆ ಕಡಿಮೆ ಕೂಲಿ ನೀಡಲಾಗುತ್ತದೆ. ಜೊತೆಗೆ ಗೊಣಗಾಟವಿಲ್ಲ, ಮಾಲಿಕರಿಗೆ ಬೇಕಾದ್ದೂ ಅದೇ ! ಮನರಂಜನೆಯ ಆಟಕ್ಕಾಗಿ ಮಕ್ಕಳನ್ನು ಕಳ್ಳತನದಲ್ಲಿ ಪರದೇಶಗಳಿಗೆ ಕಳಿಸಿಕೊಡುವ ದಂಧೆ ನಡೆಯುವುದೂ ಗುಟ್ಟೇನಲ್ಲ.

# ಯೋಗ ಪ್ರವೇಶ - ೭

ಜಿ. ರಾಮಕೃಷ್ಣ

ವೈಜ್ಞಾನಿಕ ಅಂಶಗಳನ್ನು ಸಾರ್ವಜನಿಕರ ಗಮನಕ್ಕೆ ತರುವುದು ಸ್ವಾಗತಾರ್ಹ. ಹೊಸ ಸಂಶೋಧನೆಗಳು ಜನರಿಗೆ ತಿಳಿಯುವುದು ಇದರಿಂದ ಸಾಧ್ಯ. ಬೆಂಗಳೂರಿನ ವಾರಪತ್ರಿಕೆಯೊಂದು ಇಂತಹ ಕ್ರಮವನ್ನು ಆರಂಭಿಸಿದೆ. ಹೊಸ ಶತಮಾನದ ವಿಶೇಷ ಅಂಕಣವೆಂದು ಇದನ್ನು ಹೆಸರಿಸಲಾಗಿದೆ. ಮೊದಲ ಮುತ್ತಿನಲ್ಲೇ ಹಲ್ಲು ಉದುರಿತು, ಎಂಬಂತಾಗಿದೆ ಈ ಪ್ರಯತ್ನ. ಪತ್ರಿಕೆಯನ್ನಾಗಲಿ, ಸಂಶೋಧನೆಯನ್ನಾಗಲಿ ತೆಗಳುವ ಮಾತಲ್ಲ ಇದು. ಯಾವುದನ್ನು ವೈಜ್ಞಾನಿಕವೆಂದು ಆಯ್ದುಕೊಳ್ಳುತ್ತೇವೋ ಅದರ ಬಗ್ಗೆ ಎಚ್ಚರಿಕೆ ಅಗತ್ಯವೆಂದಷ್ಟೇ ಇದರರ್ಥ. ಅಮೆರಿಕಾದಲ್ಲಿ ನಡೆಸಲಾದ ಸಂಶೋಧನೆ ಎಂಬ ಹಣೆಪಟ್ಟಿ ಇದ್ದುಬಿಟ್ಟರೆ ಅದು ನಂಬಿಕೆಗೆ ಅರ್ಹವೆಂಬ ಮೌಢ್ಯ ಪ್ರದರ್ಶನ ಯಾರಿಗೂ ಗೌರವ ತರುವುದಿಲ್ಲ. ಸಂಶೋಧನೆಯ ಪದ್ಧತಿಗೆ ಬೆಲೆಯುಂಟೇ ವಿನಾ ಯಾರು ಸಂಶೋಧಕರು ಅಥವಾ ಎಲ್ಲಿ ಸಂಶೋಧನೆಯನ್ನು ಕೈಗೊಳ್ಳಲಾಗಿತ್ತು ಎಂಬುದಕ್ಕೆ ಅಷ್ಟೊಂದು ಮಹತ್ವವಿಲ್ಲ.

ಹಿಟ್ಲರನ ಕಾಲದ ಜರ್ಮನಿಯಲ್ಲಿ ಭೌತಶಾಸ್ತ್ರದಲ್ಲಿ ಪಾರಂಗತರಾಗಿದ್ದ ಕೆಲವರು 'ಯಹೂದಿ' ಮತ್ತು 'ಆರ್ಯ' ಎಂಬ ಎರಡು ಸಂಶೋಧನಾ ಪ್ರವಾಹಗಳನ್ನು ಗುರುತಿಸಿ ಐನ್‌ಸ್ಟೈನರ ಕೊಡುಗೆಯನ್ನು 'ಯಹೂದಿ' ಎಂದು ಅವ ಹೇಳನ ಮಾಡಿದ್ದುದುಂಟು. ಅವರ ಪೈಕಿ ಫಿಲಿಪ್ ಲೆನಾರ್ಡ್ ಪ್ರಮುಖ. ಆತ ಹಿಟ್ಲರನ ಬಲಗೈ ಭಂಟನಾಗಿ ವಿಜ್ಞಾನಕ್ಕೆ ಅಪಚಾರವೆಸಗಿದ. ಅವನ ಪ್ರಾಧ್ಯಾಪಕ ಮ್ಯಾಕ್ಸ್ ಬಾರ್ನ್ ಮುಂದೊಮ್ಮೆ ತಮ್ಮ ಶಿಷ್ಯನನ್ನು ಭೇಟಿಯಾಗಲು ನಿರಾಕರಿಸಿದ್ದು ಇದೇ ಕಾರಣಕ್ಕಾಗಿ. ಅಂದರೆ, ಲೆನಾರ್ಡ್ ವಿಜ್ಞಾನದ ಸಂಶೋಧನೆಯ ಕ್ರಮವನ್ನು ಫ್ಯಾಸಿಸ್ಟ್ ದುರಾಕ್ರಮಣದ ಕೈಗೊಂಬೆಯಾಗಿಸಿದ್ದನೆಂಬುದು ಅವರ ಸಿಟ್ಟಾಗಿತ್ತು.

ಸಹಸ್ರಮಾನದ ಸಂಶೋಧನೆಯ ಹೊಸ ತುಣುಕೆಂದು ಈಗ ನಮ್ಮ ಮುಂದೆ ಬಂದಿರುವುದು ಇಂತಹ ಪೂರ್ವಗ್ರಹ ಪೀಡೆಯ ಫಲ. ಅದನ್ನು ಹಾಗೆ ಗುರುತಿಸದೆ ಅದಕ್ಕೆ ಮಾನ್ಯತೆ ನೀಡುವುದು ಯೋಗ್ಯವೆನಿಸುವುದಿಲ್ಲ. ಅಮೆರಿಕಾದ ಯಾವುದೋ ವಿಶ್ವವಿದ್ಯಾನಿಲಯದ ಒಬ್ಬಿಬ್ಬ ವಿಜ್ಞಾನ ಸಂಶೋಧಕರು ಒಟ್ಟು ಹದಿನೈದು ಮಹಿಳೆಯರ ಮಿದುಳುಗಳನ್ನು ಅಳತೆ ಮಾಡಿ ಪರೀಕ್ಷಿಸಿ ಒಂದು ತೀರ್ಮಾನಕ್ಕೆ ಬಂದಿದ್ದಾರಂತೆ. ವಿಶ್ವದ ಅರ್ಧ ಜನಸಂಖ್ಯೆಯಲ್ಲಿ ಬೆರಳೆಣಿಕೆಗೆ ಸಿಗುವಷ್ಟು ಮಂದಿಯನ್ನು ನೋಡಿ ಒಂದು ಮೂಲಭೂತ ಸಿದ್ಧಾಂತವನ್ನು ಮಂಡಿಸುವುದು ಎಷ್ಟು ವೈಜ್ಞಾನಿಕವೆಂದು ನಮಗೆ ನಾವೇ ಉತ್ತರ ಕೊಟ್ಟುಕೊಳ್ಳಬೇಕು.

ಆ ಸಿದ್ಧಾಂತವಾದರೂ ಏನು ? ಮಿದುಳಿನ ಎರಡು ಭಾಗಗಳ ಪೈಕಿ ಮಹಿಳೆಯರ ಬಲಭಾಗದ ಮಿದುಳು ಪುರುಷರ ಬಲಭಾಗದ ಮಿದುಳಿಗಿಂತ ದೊಡ್ಡದು ಹಾಗೂ ಪುರುಷರ ಎಡಭಾಗದ ಮಿದುಳು ಮಹಿಳೆಯರ ಎಡಭಾಗದ ಮಿದುಳಿಗಿಂತ ದೊಡ್ಡದು. ಆದ್ದರಿಂದ ಎಡಭಾಗದ ಕ್ರಿಯೆಯಲ್ಲಿ ಪುರುಷನದು ಮೇಲುಗೈ ಮತ್ತು ಬಲಭಾಗದ ಕ್ರಿಯೆಯಲ್ಲಿ ಮಹಿಳೆಯರದು ಮೇಲುಗೈ. ಅಂತಹ ಕ್ರಿಯೆಗಳು ಯಾವುವು ? ನೆನಪಿನ ಶಕ್ತಿ, ಗಣಿತ, ಮಾತು, ತರ್ಕ ಇತ್ಯಾದಿಗಳು ಮಿದುಳಿನ ಎಡಭಾಗದ ವ್ಯಾಪ್ತಿಗೆ ಬರುತ್ತವೆ; ಭಾವನೆಗಳು, ಕಲ್ಪನೆಗಳು, ಕನಸುಗಳು ಬಲಭಾಗದ ವ್ಯಾಪ್ತಿಯವು. ಆದ್ದರಿಂದ ಪುರುಷರಲ್ಲಿ ಬುದ್ಧಿಮತ್ತೆ ಹೆಚ್ಚಾಗಿದೆ. ಮಹಿಳೆಯರಲ್ಲಿ ಭಾವುಕತೆ ಹೆಚ್ಚಾಗಿದೆ.

ನೋಡಿದಿರಾ, ಎಂತಹ ಅದ್ಭುತ ಸಂಶೋಧನೆ ! ಅದೂ ಕೇವಲ ಹದಿನೈದು ಮಹಿಳೆಯರನ್ನು ಆಧರಿಸಿ ಕೈಗೊಂಡ ವಿದ್ವತ್ಪೂರ್ಣ ತೀರ್ಮಾನ !! ಈ ಖೋಟಾ ಸಂಶೋಧನೆಯನ್ನು ಕಸದಬುಟ್ಟಿಗೆ ಹಾಕುವ ಬದಲು ಅದಕ್ಕೆ ಅಗ್ರಸ್ಥಾನ ನೀಡಿದ್ದು ಅನೂಹ್ಯವಾದ ಪ್ರತಿಭೆ. ಜನಾಂಗೀಯ ಶ್ರೇಷ್ಠತೆಯನ್ನು ಸಾರುವ 'ಸಂಶೋಧನೆ'ಗಳನ್ನು ಮಾಡಿದ್ದ ಐಸೆಂಕ್ ಮತ್ತು ಲೆನಾರ್ಡ್ ಹಾಗೂ ಮೂರ್ಖತನದ 'ಸಂಶೋಧನೆ' ನಡೆಸಿದ್ದ ಲೈಸೆಂಕೋಗಳ ಸಾಲಿಗೆ ಸೇರುವ ಪ್ರಸ್ತುತ ಸಂಶೋಧಕರಿಗೆ ವಾರಪತ್ರಿಕೆಯೊಂದರಲ್ಲಿ ಮಾನ್ಯತೆ ದೊರಕಿದ್ದು ಅವರ ಪರಮ ಅದೃಷ್ಟವೇ ಇರಬೇಕು.

ಬೆಂಗಳೂರಿನ ನಿಮ್ಹಾನ್ಸ್‌ನ ನಿರ್ದೇಶಕರಾಗಿದ್ದ ಡಾ॥ ವರ್ಮಾ ಅವರು ಮಿದುಳಿನ ಎರಡು ಭಾಗಗಳ ಕ್ರಿಯೆಗಳ ಬಗ್ಗೆ ಆಳವಾದ ಅಧ್ಯಯನ ನಡೆಸಿ ಹಲವು ಪ್ರಬಂಧಗಳನ್ನು ಪ್ರಕಟಿಸಿದ್ದಾರೆ. ಕೇವಲ ಗಾತ್ರವನ್ನು ಪರಿಗಣಿಸಿ ಮಿದುಳಿನ ಕ್ರಿಯೆಯನ್ನು ಮಾಪನ ಮಾಡುವಂತಿಲ್ಲ. ಮಹಿಳೆಯ ಗರ್ಭದಿಂದ ಹೊರಬರಬೇಕಾದ ಸಂದರ್ಭವು ಮುಂದಿನ ಶತಮಾನಗಳಲ್ಲಿ ಅನಿವಾರ್ಯವಾಗಿರುವುದಿಲ್ಲ ; ಏಕೆಂದರೆ, ಮಹಿಳೆಯ ಶರೀರದ ಹೊರಗೆ ಭ್ರೂಣವನ್ನು ಬೆಳೆಸುವ ತಂತ್ರವನ್ನು ಸಾಧಿಸಿಕೊಂಡಿರಲಾಗಿರುತ್ತದೆ, ಎನ್ನುತ್ತಾರೆ ಖ್ಯಾತ ವಿಜ್ಞಾನಿ ಸ್ಟೀಫನ್ ಹಾಕಿಂಗ್. ಆಗ ಮಿದುಳಿನ ಗಾತ್ರಕ್ಕೆ ಮಿತಿಯೂ ಇರಬೇಕಾಗಿಲ್ಲವಾದ್ದರಿಂದ ಎಷ್ಟೋ ಸಂಕೀರ್ಣ ಸಮಸ್ಯೆಗಳಿಗೆ ಪರಿಹಾರ ಸಾಧ್ಯವಾಗ ಬಹುದೇನೋ ಎನ್ನುತ್ತಾರೆ, ಅವರು. ಆವರೆಗೆ ? ಪುರುಷ ಮಹಿಳೆಯರಿಬ್ಬರಿಗೂ ಅನ್ವಯವಾಗುವ ಸೂತ್ರಗಳು ನಮ್ಮೆಲ್ಲರ ಮಾನಸಿಕ ಪ್ರವೃತ್ತಿ, ತೊಯ್ದಾಟ, ಅಸ್ಥಿಮಿತತೆ ಗಳಲ್ಲಿ ಕಾಣಬರುತ್ತವೆ. ಯೋಗಪ್ರಕ್ರಿಯೆಯಲ್ಲಿ ಪುರುಷ- ಮಹಿಳೆಯರಿಬ್ಬರಿಗೂ ಏಕಪ್ರಕಾರವಾದ ಸೂಚನೆಗಳಿವೆ. ಒಂದು ಉದಾಹರಣೆಯನ್ನು ನೋಡೋಣ. ಅವಿದ್ಯಾ, ಅಸ್ಮಿತಾ, ರಾಗ, ದ್ವೇಷ ಮತ್ತು ಅಭಿನಿವೇಶ ಎಂಬ ಐದು ವಿಧದ ಕ್ಲೇಶಗಳು ಇಬ್ಬರಿಗೂ ಸಮಾನ. ಯಾವುವನ್ನು ಸಾಮಾನ್ಯವಾಗಿ ಅಹಿತಕರ ವರ್ತನೆಗಳೆಂದು ಕರೆಯುತ್ತೇವೋ ಅವು ಕೇವಲ ವೈಯಕ್ತಿಕ ನೆಲೆಯ ದೋಷಗಳಲ್ಲ. ಅವು ಸಮುದಾಯ ಜೀವನದಲ್ಲಿ ಅನಾರೋಗ್ಯಕರ ಪ್ರವೃತ್ತಿಗಳನ್ನು ಪೋಷಿಸುವಂಥವು. ಒಬ್ಬ ವ್ಯಕ್ತಿಯ ಸಾಮಾಜಿಕೀಕರಣದಲ್ಲಿ ಉಂಟಾಗಿರುವ ನ್ಯೂನತೆ ಅಥವಾ ಅಪಕ್ವತೆಯನ್ನು ಈ ವರ್ತನೆಯು ಎತ್ತಿ ತೋರಿಸುತ್ತದೆ. ಅಪೇಕ್ಷಿತ ವರ್ತನೆಗಿಂತ ಭಿನ್ನವಾದ ಈ ವರ್ತನೆಯನ್ನು ಯೋಗದರ್ಶನದಲ್ಲಿ 'ಕ್ಲೇಶ' ಎನ್ನುತ್ತಾರೆ. ಆದರೆ ಅದು ಮಾರ್ಪಾಟಾಗದಿರುವಂತಹ ಸಂಸ್ಕಾರವಲ್ಲ. ಮಾರ್ಪಾಟಿಗೆ ಒಂದು ಮಾರ್ಗ ಅನುಸರಿಸಬೇಕು, ಅಷ್ಟೆ.

ನಮ್ಮ ಹಾಗೂ ಸುತ್ತಣ ವಾಸ್ತವದ ಬಗ್ಗೆ ವಸ್ತುನಿಷ್ಠವಾದ ಪ್ರಜ್ಞೆಯನ್ನು ಬೆಳೆಸಿಕೊಳ್ಳುವುದು ಯೋಗಶಾಸ್ತ್ರದ ಪ್ರಕಾರ ಅತ್ಯಂತ ಆದ್ಯತೆಯ ವಿಚಾರ. ಮಾನಸಿಕ ತುಮುಲಗಳನ್ನು ಹತ್ತಿಕ್ಕಲು ಇದೊಂದು ಪ್ರಖರವಾದ ಸಾಧನೆ. ಯಾವ ವೈಕ್ಲವ್ಯವೂ ಇಲ್ಲದೆ ಸ್ಥಿರಚಿತ್ತದಿಂದ ವಿದ್ಯಮಾನಗಳನ್ನು ವೀಕ್ಷಿಸುವುದು, ಅನುಭವಿಸುವುದು ಇದರಿಂದ ಸಾಧ್ಯವಾಗುತ್ತದೆ. ಇದನ್ನೇ 'ಸಾಕ್ಷೀಭಾವ' ಎನ್ನುತ್ತಾರೆ. ತನಗೆ ಅಂಟಿಲ್ಲವೇನೋ ಎಂಬಂತೆ ಘಟನೆಗಳನ್ನು ಪರಿವೀಕ್ಷಿಸಿದಾಗ ಸಮತೋಲನವು ಸುಲಭವಾಗಿರುತ್ತದೆ. ವ್ಯಕ್ತಿಯ ದೈಹಿಕ ಹಾಗೂ ಮಾನಸಿಕ ಕ್ರಿಯೆಗಳು ಒತ್ತಡವನ್ನು ಉಂಟುಮಾಡುವುದರ ಬದಲು ಸಮತಟ್ಟಾದ ಆಯಾಮವನ್ನು ರಚಿಸಿಕೊಡುತ್ತವೆ. ಇದೇ ಯೋಗಶಾಸ್ತ್ರದ ಗುಟ್ಟು, ವೈಶಿಷ್ಟ್ಯ. ಮಾನಸಿಕ ಮತ್ತು ದೈಹಿಕ ಅಸ್ವಸ್ಥತೆಯನ್ನು ನೀಗಿಕೊಳ್ಳಲು ಯೋಗಾಭ್ಯಾಸವು ಹೇಗೆ ಸಹಾಯಕವೆಂದರೆ ಮಾನಸಿಕ - ದೈಹಿಕ ಕ್ರಿಯೆಗಳಲ್ಲಿ ಒತ್ತಡವನ್ನು ಕಡಿಮೆಗೊಳಿಸಲು ಮತ್ತು ಕ್ರಮೇಣ ನಿವಾರಿಸಲು ಅದು ಸಮರ್ಥವಾಗಿದೆ. ಯೋಗದ ಒಂದು ಭಾಗವಾದ ಧ್ಯಾನದ ಮಹತ್ವವಿರುವುದೂ ಇದರಲ್ಲೇ.

ಮಿದುಳಿನ ಎಡ ಮತ್ತು ಬಲಭಾಗಗಳ ಪ್ರಶ್ನೆ ಬರುವುದು ಈ ಹಿನ್ನೆಲೆಯಲ್ಲಿ. ಏನೋ ಒಂದು ಕೆಲಸ ಮಾಡಬೇಕಾಗಿದೆ ಎನ್ನೋಣ. ಮಿದುಳಿನ ಎಡಭಾಗ ಕೂಡಲೇ ಒಂದು ದೊಡ್ಡ ತರ್ಕಸರಣಿಯನ್ನು ಎಳೆ ಎಳೆಯಾಗಿ ಬಿಡಿಸಲು ಉಪಕ್ರಮಿಸುತ್ತದೆ. ಅದರ ಆಗುಹೋಗುಗಳು, ಹಿಂದಿನ ಅನುಭವ, ಸಾಧಕ-ಬಾಧಕಗಳು, ಯುಕ್ತಾಯುಕ್ತತೆ ಎಲ್ಲವೂ ಜಾಗೃತವಾಗಲು ಇದೇ ಕಾರಣ. ಈ ಗಡಿಬಿಡಿಯನ್ನು ನಿಯಂತ್ರಣದಲ್ಲಿಟ್ಟು ಸಾವಧಾನವಾಗಿ, ಸಮಚಿತ್ತದಿಂದ, ಮುನ್ನಡೆಯಲು ಮಿದುಳಿನ ಬಲಭಾಗವು ಕಾರ್ಯೋನ್ಮುಖವಾಗಬೇಕು. ಧ್ಯಾನದ ಕೊಡುಗೆಗಳಲ್ಲಿ ಇದು ಪ್ರಮುಖವಾದುದು. ಮಿದುಳಿನ ಬಲಭಾಗವನ್ನು ಉದ್ರೇಕಗೊಳಿಸುವುದಲ್ಲ, ಉತ್ತೇಜನಗೊಳಿಸುವುದು ಧ್ಯಾನದ ಆಶಯ. ''ಒಳಗಣ್ಣು'' (ಅಂತಶ್ಚಕ್ಷು) ಎನ್ನುತ್ತಾರಲ್ಲ, ಅದು ಮೂಡಬೇಕು; ಒಣತರ್ಕವನ್ನು ಹತೋಟಿಯಲ್ಲಿಡಲು ಸಾಧ್ಯವಾಗಬೇಕು. ಧ್ಯಾನಮಾರ್ಗವೆಂದರೆ ಮೂಲತಃ ಈ ಮಾರ್ಪಾಟಿನ ಪ್ರಮೇಯ.

ಇದರಲ್ಲಿ ಹೆಣ್ಣು-ಗಂಡು ಎಂಬ ತಾರತಮ್ಯಕ್ಕೆ ಏನರ್ಥವಿದೆ ? ಅಮೆರಿಕಾದ ಯಾವುದೋ ಮೂಲೆಯಲ್ಲಿ ನಡೆದಿದೆಯೆನ್ನಲಾದ ಅವೈಜ್ಞಾನಿಕ 'ಸಂಶೋಧನೆ'ಗೆ ಯೋಗಶಾಸ್ತ್ರ ಪದ್ಧತಿಯಂತೂ ಸೊಪ್ಪು ಹಾಕಲಾರದು. ವ್ಯಕ್ತಿತ್ವ ವಿಕಸನದ ಹಾದಿಯಲ್ಲಿ ಲೈಂಗಿಕ ಭೇದವು ಅಡಚಣೆಯೂ ಅಲ್ಲ, ಅನುಕೂಲವೂ ಅಲ್ಲ. ನಮ್ಮ ಅಭ್ಯಾಸ-ಪ್ರಯತ್ನಗಳಷ್ಟೇ ಕಾರ್ಯಸಿಂಧುವಿಗೆ ಮಾರ್ಗ. ''ಅಭ್ಯಾಸವೈರಾಗ್ಯಾಭ್ಯಾಂ ತನ್ನಿರೋಧಃ'' (ಯೋ.ಸೂ. ೧.೧೨) ಎನ್ನುವಾಗ ಪತಂಜಲಿಯ ಆಶಯವೂ ಅದೇ ಆಗಿದೆ. 'ಯೋಗ ತರಂಗಿಣಿ' ಎಂಬ ಗ್ರಂಥದ ದ್ವಿತೀಯ ಶತಕದಲ್ಲಿ ಬರುವ ಎರಡು ಸಾಲುಗಳು ಹೀಗಿವೆ: ಸ್ಮೃತ್ಯೈವ ಸರ್ವಚಿಂತಾಯಾಂ ಧಾತುರೇಕಃ ಪ್ರಪದ್ಯತೇ। ಯಚ್ಚಿತ್ತೇ ನಿರ್ಮಲಾ ಚಿಂತಾ ತದ್ಧಿ ಧ್ಯಾನಂ ಪ್ರಚಕ್ಷತೇ ॥ (೬೧). ಅದನ್ನು ಮನನ ಮಾಡೋಣ.

○○

# ಅಹಿಂಸೆ

**ಮ**ಹಾವೀರ ಜಯಂತಿ ಬಕ್ರೀದ್ ಒಟ್ಟಿಗೆ ಬಂದಾಗ, ಗಾಂಧಿಜಯಂತಿ ಮಹಾನವಮಿ ಒಟ್ಟಿಗೆ ಬಂದಾಗ ದೊಡ್ಡ ಧರ್ಮ ಜಿಜ್ಞಾಸೆ ನಡೆಯುತ್ತದೆ. ಆವತ್ತು ಪ್ರಾಣಿವಧೆಗೆ ಅನುಮತಿ ಕೊಡಬೇಕೆ ಬಾರದೆ ? ಅಹಿಂಸಾ ಪರಮೋ ಧರ್ಮಃ ಎಂದರೆ ಅದು ಯಾವ ರೀತಿಯ ಅಹಿಂಸೆ ಅಥವಾ ಯಾವುದಾದರೂ ಒಂದು ಧರ್ಮಕ್ಕೆ ಸಂಬಂಧಿಸಿದ್ದೆಂದು ತಿಳಿಯುವುದು ಸರಿಯೇ ? ಅಹಿಂಸೆಯೆಂದರೆ ಪ್ರಾಣಿವಧೆ ಮಾಡದಿರುವುದು ಮಾತ್ರವೆ ? ನಿಜವಾದ ಹುಂಜಕ್ಕೆ ಬದಲು ಹಿಟ್ಟಿನ ಹುಂಜ ಬಲಿಕೊಡಲು ಹೋದ ಯಶೋಧರ, ಪರಸತಿಯನ್ನು ಕೂಡಿದ ಅಷ್ಟಾವಂತನಿಗಿಂತ ಹೆಚ್ಚು ಕಾಲ ಇನ್ನೂ ಅಧೋ ಲೋಕಗಳ ನರಕಕ್ಕೆ ಹೋದನೆಂದು ಜೈನ ಪುರಾಣಗಳೇ ಹೇಳುತ್ತವೆ.

ಹಿಂಸೆ ಎಂದರೆ ಪ್ರಾಣಿ ಹಿಂಸೆ. ಅದು ಭೌತಿಕ, ವಾಚಿಕ, ಮಾನಸಿಕ ಹಂತಗಳಲ್ಲಿ ಹೇಗೂ ಆಗಬಹುದು. ಬೈಗುಳ, ಮನಸ್ತಾಪ ಎಲ್ಲವೂ ಹಿಂಸೆಯೇ. ವ್ಯಾಪಕಾರ್ಥದಲ್ಲಿ ಅಹಿಂಸೆ ಒಂದು ಆದರ್ಶವೇ. ಆದರೆ ಅದನ್ನು ಶಾಕಾಹಾರಿತ್ವಕ್ಕಷ್ಟೇ ತಳುಕು ಹಾಕಿರುವುದು ಸ್ವಲ್ಪ ವಿಚಿತ್ರ. ಶಾಕಾಹಾರವು ಮಾಂಸಾಹಾರಕ್ಕಿಂತ ಎಷ್ಟು ಒಳ್ಳೆಯದು ಎನ್ನುವ ಚರ್ಚೆ ಬೇರೆ. ಆದರೆ ಅದನ್ನು 'ಶಿಷ್ಟಮೂಲ್ಯ'- 'ಸಾಂಸ್ಕೃತಿಕ ಮೂಲ್ಯ'ವಾಗಿಸುವುದು ಬೇರೆ.

ಕುರಿ ಕೋಳಿ ಕಡಿದದ್ದು ಮಾತ್ರ ಪ್ರಾಣಿವಧೆಯೇ ? ಗಿಡ ಮೂಲಿಕೆಗಳಲ್ಲೂ ಚೈತನ್ಯವಿದೆಯಷ್ಟೆ. ನಿರ್ಜೀವವಾದ ಆಹಾರವನ್ನು ಯಾರೂ ಸೇವಿಸಲಾರರು. ಜೀವೋ ಜೀವಸ್ಯ ಜೀವನಂ. ಹೆಚ್ಚು ಸಂಕೀರ್ಣ ಜೀವ ಕಡಿಮೆ ಸಂಕೀರ್ಣ ಜೀವಕೋಶಗಳನ್ನು ಆಹಾರವಾಗಿಸಿಕೊಳ್ಳುತ್ತದೆ. ದವಸ ಧಾನ್ಯ ಮಾತ್ರ ಬಳಸುವವರೂ ಅದಕ್ಕೆ ಮುತ್ತುವ ಕ್ರಿಮಿಕೀಟಗಳನ್ನು ಕೊಲ್ಲುತ್ತಾರೆ, ಕಾಳು ತಿನ್ನಲು ಬರುವ ಹಕ್ಕಿಗಳನ್ನು ಓಡಿಸುತ್ತಾರೆ. ಬೇಕಾದಷ್ಟು, ಅದಕ್ಕಿಂತ ಹೆಚ್ಚು ದಾಸ್ತಾನು ಮಾಡುತ್ತಾರೆ. ಅದನ್ನು ತಿನ್ನಲು ಬಂದ ಇಲಿಗಳಿಗೆ ಪಾಷಾಣ ಹಾಕುತ್ತಾರೆ. ಇಷ್ಟೆಲ್ಲಾ ಪ್ರಾಣಿವಧೆಯ ಮೂಲಕವೇ ಶಾಕಾಹಾರಿ ಶಾಕಾಹಾರಿಯಾಗಬಲ್ಲ.

ಇದು ಮನುಷ್ಯರಿಗಷ್ಟೇ ಅನ್ವಯಿಸಿಲ್ಲ. ಮಾಂಸ ತಿನ್ನುವ ಹುಲಿ-ಸಿಂಹ, ತೋಳಗಳು ಹಿಂಸ್ರಪ್ರಾಣಿಗಳು; ಶಾಕಾಹಾರೀ ಹುಲ್ಲೇ, ಹಸು, ಕರುಗಳು ಸಾಧು ಪ್ರಾಣಿಗಳು; ಎಂದು ವಿಭಾಗಿಸಿದ ಮನುಷ್ಯ ಈ ಸಾಧುಪ್ರಾಣಿಗಳನ್ನೇ ಪ್ರಮುಖವಾಗಿ ತನ್ನ ದಾಸ್ಯಕ್ಕೆ ಒಳಗು ಮಾಡಿ ಕೊಂಡಿರುವನು. ಮನುಷ್ಯ ಬಳಸಬಹುದಾದ ಮಾಂಸ ಮುಖ್ಯವಾಗಿ ಶಾಕಾಹಾರಿ ಪ್ರಾಣಿಗಳ ಮಾಂಸವನ್ನೇ.

ನೈಸರ್ಗಿಕ ನಾಶ ಒಪ್ಪಿಕೊಳ್ಳುವುದು ಅಹಿಂಸೆ. ಬುದ್ಧಿ ಪೂರ್ವಕವಾಗಿ ಅದನ್ನು ತಡೆಯುವುದು ಹೆಚ್ಚಿನ ಹಿಂಸೆ. ಬೀ.ಚಿ. ಹೇಳಿದ ಕಟು ಹಾಸ್ಯ ಹೀಗಿದೆ. - ಅಕ್ಟೋಬರ್ ಎರಡರಂದು ಕುರಿ ತಿನ್ನುವವರು ತಿಂದೇ ತಿಂದರು. ಆದರೆ ಎರಡನೇ ತಾರೀಖಿಗಾಗಿ ಒಂದನೇ ತಾರೀಖು ಕಡಿಯುತ್ತಿದ್ದ ಕುರಿಯನ್ನು ಸೆಪ್ಟೆಂಬರ್ 30ಕ್ಕೆ ಕಡಿದರು. ಪಾಪ ಆ ಕುರಿಗಳ ಆಯುಷ್ಯ ಒಂದು ದಿನ ಕಡಿಮೆಯಾಯಿತು. ಗಾಂಧಿಜಯಂತಿಯಿಂದ ಈದ್ ಮಿಲಾದ್‌ಗೋ, ಚಂಡಿ ಬಲಿಗೋ, ವೈದಿಕ ಯಜ್ಞಕ್ಕೋ ಪ್ರಾಣಿಗಳನ್ನು ಕೊಲ್ಲುವಾಗ ಅದರಲ್ಲೂ ಧಾರ್ಮಿಕ ಡೌಲಿನಿಂದ ಭೌತಿಕವಾದ ಹಿಂಸೆಗೆ ಸಮಾಜದಲ್ಲಿ ಧಾರ್ಮಿಕ ಆವರಣ ಕೊಡುವುದು ಎಷ್ಟು ನೀಚವೋ ಅದೇ ರೀತಿ ಮಹಾಪುರುಷರ ಹೆಸರಿನಲ್ಲಿ ಮಾಂಸ ನಿಷೇಧಿಸುವುದೂ ದಡ್ಡತನ.

ವೈದಿಕರ ಯಜ್ಞದ ಬಲಿಯನ್ನು ವಿರೋಧಿಸಿದ, ಅವಹೇಳನ ಮಾಡಿದ ಮಹಾ ಕಾರುಣಿಕ ಬುದ್ಧ- ಮಾಂಸ ಭಕ್ಷಣವನ್ನು ರದ್ದುಪಡಿಸಿ ಎನ್ನಲಿಲ್ಲ. ದೇವದತ್ತನೆಂಬ ಕುಹಕ ಭಿಕ್ಷುವು ಬುದ್ಧ ಸಂಘದಲ್ಲಿ ಮಾಂಸಭಕ್ಷಣೆಯನ್ನು ನಿಷೇಧಿಸುವ ಸೂಚನೆ ತಂದಾಗ 'ಕೇವಲ ಶಾಕಾಹಾರಿಗಳಾಗಬೇಕು ಎನಿಸಿದವರು ಹಾಗೆಯೇ ಮಾಡಲಿ. ಮಾಂಸ ಭಕ್ಷಣೆ ಮಾಡುವವರು ಮಾಡಲಿ, ಆದರೆ ಭಿಕ್ಷುವು ತನಗಾಗಿಯೇ ಪ್ರಾಣಿ ವಧೆ ಮಾಡುವುದನ್ನು ತಪ್ಪಿಸಲಿ' ಎಂದಿದ್ದ. ಬುದ್ಧನ ಅವಸಾನ ವೇಳೆಯಲ್ಲಿ ಸೂಕರ ಮದ್ದವ - ಹಂದಿ ಮಾಂಸ ತಿಂದು ಜೀರ್ಣವಾಗದೆ ಆತನ ಸಾವಿಗೆ ಕಾರಣವಾಯಿತು.

ಜೀವನ ನಿರ್ವಹಣೆಗೆ ಇನ್ನೊಂದು ಜೀವವನ್ನು ಆಕ್ರಮಿಸುವುದು ನೈಸರ್ಗಿಕವಾದ್ದರಿಂದ ಮಾಂಸ ಭಕ್ಷಣೆಯೇ ಹಿಂಸೆಯಲ್ಲ. ಅಗತ್ಯಕ್ಕಿಂತ ಹೆಚ್ಚಾಗಿ ಗಳಿಸುವ, ಹಂಚದೆ ಉಳಿಸುವ, ಉಳಿಸಿ ಹಾಳುಗೆಡಹುವ ದುರಾಸೆ, ಡಾಂಭಿಕತೆಗಳು ಹಿಂಸೆ. ಕಾಳಸಂತೆ ನಡೆಸುವುದು, ಗೋಧಿ ಸಮುದ್ರಕ್ಕೆ ತಳ್ಳುವುದು ಹಿಂಸೆ. ಹಸುವನ್ನು ಕಟ್ಟಿ ತಂದು ಕರುವನ್ನು ಕಟ್ಟಿ ಹಾಲು ಕರೆದುಕೊಳ್ಳುವವರು ಆ ಹಾಲನ್ನು ಹಸು ನಮಗಾಗಿ ತಯಾರಿಸಿಲ್ಲ ಎಂದು ಯೋಚಿಸುವರೇ. ಹಾಗೆ ಕರೆದ ಹಾಲು ಮಕ್ಕಳ ಬಾಯಿಗೂ ದಕ್ಕದೆ ಯಮುನೆಯಲ್ಲಿ ಸುರಿಯುವುದೋ ದೊಡ್ಡ ಕಲ್ಲಿನ ವಿಗ್ರಹಕ್ಕೆ ಸುರಿಯುವುದೋ ಗೋಹತ್ಯೆಗಿಂತ ದೊಡ್ಡ ಹಿಂಸೆ. ನಿವಾರ್ಯವಾದ ಹಿಂಸೆ.

'ಈ ಭೂಮಿ ಪ್ರತಿಯೊಬ್ಬರ ಅವಶ್ಯಕತೆಯನ್ನು ಪೂರೈಸಬಲ್ಲದು, ಯಾರೊಬ್ಬರ ದುರಾಸೆಯನ್ನಲ್ಲ' ಎಂದ ಗಾಂಧಿಯ ಜಯಂತಿಯ ದಿನ ಮಾತ್ರ ಮಾಂಸದಂಗಡಿ ಮುಚ್ಚಿಸಿ ಕೆಂಟುಕಿ ಚಿಕನ್ನನ್ನು ಬರಮಾಡಿಕೊಳ್ಳುವ ಮಿಥ್ಯಾಚಾರಕ್ಕೆ ಕೊನೆ ಎಂದು ? ತಾನು ಬೆಳೆದ ಬೆಳೆ ತನಗೇ ಇರಲಿ ಎಂದು ಕೀಟಗಳನ್ನು, ಹಕ್ಕಿಗಳನ್ನು, ಪಶುಗಳನ್ನು ಕೊಲ್ಲುತ್ತಾ ಬಂದು, ತನಗಡ್ಡಿಯಾದ ಬೇರೆ ಮನುಷ್ಯನನ್ನೂ ಕೊಲ್ಲುತ್ತಾನೆ- ಮಾನವ. ಅದೇ ನೈಸರ್ಗಿಕವಾಗಿ ಕಾಳು ತಿನ್ನುವ ಹಕ್ಕಿ ಕೀಟವನ್ನೂ ತಿನ್ನುತ್ತದೆ. ಹೊಲದೊಳಗಿನ ಹಾವು ಇಲಿಯನ್ನು ತಿನ್ನುತ್ತದೆ. ಅದೇ ಕಾಡಿನಲ್ಲಿ ಹಸಿವೆಯಿಲ್ಲದ ಹುಲಿ ಪಕ್ಕದಲ್ಲೇ ಮೇಯುವ ಹುಲ್ಲೆಯನ್ನು ತಿರುಗಿಯೂ ನೋಡುವುದಿಲ್ಲ. ಜೀವ, ಜೀವವನ್ನು ತಿನ್ನುವ ಕ್ರಿಯೆ ಜೀವನಚಕ್ರ. – ಒಟ್ಟಿಗೆ ಕಾಪಾಡಲಿ– ಒಟ್ಟಿಗೆ ಭುಂಜಿಸೋಣ ಎನ್ನುವ ಶಾಂತಿಮಂತ್ರದ ಆಶಯ. ಜೀವವನ್ನು –ಅದು ಅತಿ ಸೂಕ್ಷ್ಮವೇ ಆಗಿರಲಿ- ಚೆಲ್ಲಾಡುವ ಮನುಷ್ಯ ಕ್ರಿಯೆ ಮಾತ್ರ ನಾಶದ ಸರಪಳಿ.

ನಾವು ಹಿಂಸೆ ಎಂದು ಭಾವಿಸುವ ಆದರೆ ಸಹಜ ನಾಶವನ್ನು ಒಪ್ಪಿಕೊಂಡು ಅದರ ಪಾಡಿಗೆ ಬಿಡುವುದು- ಎಂದರೆ ಬಲಿಯಾಗಿ ವಿಜೃಂಭಿಸದೆ - ನಿಯಮವಾಗಿ ನಿಷೇಧಿಸದೆ ಬಿಡುವುದು ನಿಜವಾದ ಅಹಿಂಸೆಯಲ್ಲವೆ ?

**ಡಾ|| ಜಿ. ಶ್ರೀನಿವಾಸಮೂರ್ತಿ**
ಪ್ರಾಧ್ಯಾಪಕರು, ನಂ. ೨೮, ೬ನೇ ಮೇನ್, ಮಲ್ಲೇಶ್ವರಂ,
ಬೆಂಗಳೂರು - ೫೬೦ ೦೦೩

*(೫೫ನೇ ಪುಟದಿಂದ)*

ನಾಗರಿಕ ಸಮಾಜ ಅವರ ಜತೆ ಸಂಪರ್ಕಕ್ಕಾಗಿ ತೆಂಗು, ಬಾಳೆಯನ್ನು, ಗಾಳಕ್ಕೆ ಸಿಗಿಸುವ ಎರೆಹುಳುವಿನಂತೆ ಬಳಸುತ್ತಿದೆ ಅನಿಸುತ್ತದೆ. ಜರವಾಗಳಿಗೆ ಪ್ರಿಯವಾದ ಈ ಎರಡು ಫಲಗಳನ್ನು ಬೆಳೆಯಲು, ಒಂದು ಸಲ ಮಾನವ ಶಾಸ್ತ್ರ ಇಲಾಖೆ ತೆಂಗಿನ ಸಸಿ, ಬಾಳೆ ಗೆಡ್ಡೆಗಳನ್ನು ಕೊಟ್ಟು, ಕೃಷಿ ಕಲಿಸಲು ಯತ್ನಿಸಿತು. ಆದರೆ ಅವರ ಆಹಾರಾಭ್ಯಾಸದ ಮೇಲೆ ಇದರಿಂದ ದುಷ್ಪರಿಣಾಮವಾಗುತ್ತದೆ ಎಂದು ತಜ್ಞರು ಟೀಕಿಸಿದ ಮೇಲೆ ಈ ಯೋಚನೆ ನಿಂತಿತು.

ಜರವಾಗಳನ್ನು ಭೇಟಿ ಮಾಡಲು ಹೊರಗಿನ ಸಮಾಜ ಮುಗಿ ಬೀಳುವುದಕ್ಕೆ ವಿರುದ್ಧವಾದ ಘಟನೆಗಳೂ ವರದಿಯಾಗತೊಡಗಿವೆ. ಅದೆಂದರೆ ಜರವಾಗಳೇ ಕಾಡನ್ನು ಬಿಟ್ಟು ಅಂಡಮಾನಿನ ಶಹರುಗಳನ್ನು ನೋಡಲು ಬರತೊಡಗಿರುವುದು. ಅವರಿಗೆ ಆಹಾರದ ಕೊರತೆಯುಂಟಾಗಿರಬಹುದು ಎಂದು ಊಹಿಸಿ ಸರ್ಕಾರ ಅವರ ಕಾಡುಗಳಲ್ಲಿ ಬಾಳೆಹಣ್ಣು, ಒಣಮೀನುಗಳನ್ನು ಹೆಲಿಕ್ಯಾಪ್ಟರಿನಿಂದ ಸುರಿಸಿತು. ಆದರೆ ಊರ ಸೆಳೆತಕ್ಕೆ ಬಂದು ಹೋದ ಜರವಾಗಳ ಉಕ್ಕಿನಂಥ ದೇಹ, ಮಿನುಗುವ ಚರ್ಮ, ಆರೋಗ್ಯದಾಯಕ ಮುಖ ಕಂಡ ಮೇಲೆ ಅವರಿಗೆ ಆಹಾರದ ಸಮಸ್ಯೆಯಿರಲಿಕ್ಕಿಲ್ಲವೆಂದು ತಿಳಿಯಲಾಯಿತು.

ಆಶ್ಚರ್ಯವೆಂದರೆ ಜರವಾಗಳನ್ನು ಪೇಟೆಗಳಿಗೆ ತಂದು ತೋರಿಸಿಕೊಂಡು ಹೋಗುವ ಕೆಲಸ ಮಾಡುತ್ತಿರುವುದು ಬೇರಾರೂ ಅಲ್ಲ; ಕಾಲು ಮುರಿದು ಆಸ್ಪತ್ರೆಯಲ್ಲಿದ್ದು ಹೋದ ಅಧುನಿಕ ಲೋಕದ ರುಚಿ ಕಂಡಿರುವ ಎನ್ಮೆಯೇ ಎಂದು ಸಮಾಜ ಶಾಸ್ತ್ರಜ್ಞರು ಹೇಳುತ್ತಿದ್ದಾರೆ. ಎನ್ಮೆಗೆ ತಾನು ಕಂಡ ಲೋಕವನ್ನು ತನ್ನವರಿಗೂ ತೋರಿಸುವ ಆಸೆ. ನಾವು ಅಂಡಮಾನಿಗೆ ಹೋಗಿದ್ದ ವರ್ಷದಲ್ಲೇ (೧೯೯೭, ಅಕ್ಟೋಬರ್) ಜರವಾಗಳ ಒಂದು ತಂಡ ನಗರಕ್ಕೆ ಬಂದಿತ್ತು. ಅನಂತರ ೧೯೯೮ರ ಏಪ್ರಿಲ್‌ನಲ್ಲಿ ೬೩ ಜನರ ಇನ್ನೊಂದು ತಂಡ ಪೋರ್ಟ್ ಬ್ಲೇರಿಗೆ ಬಂದಿತು. ಈ ತಂಡದಲ್ಲಿ ಹೆಚ್ಚಾಗಿ ಹೆಂಗಸರು ಮಕ್ಕಳೂ ಇದ್ದರು. ಈ ಎನ್ಮೆ ಆಫ್ರಿಕನ್ ಲೇಖಕ ಚಿನುವಾ ಅಚಿಬೆಯ 'ಥಿಂಗ್ಸ್ ಫಾಲ್ ಅಪಾರ್ಟ್' ಕಾದಂಬರಿಯಲ್ಲಿ ಬರುವ ನೋವೆಯಂತಿದ್ದಾನೆ. ತನ್ನ ಸಮುದಾಯವನ್ನು ಆಧುನಿಕ ಅಂಡಮಾನ್ ಸಮಾಜದೊಂದಿಗೆ ಬೆಸೆಯುತ್ತಿರುವ ಎನ್ಮೆ, ನಿಜವಾಗಿ ತನ್ನ ಸಮುದಾಯಕ್ಕೆ ಶತ್ರುವಾಗುತ್ತಾನೋ, ಗೆಳೆಯನಾಗುತ್ತಾನೋ ಕಾಲವೇ ಹೇಳಬೇಕು.

**ಡಾ|| ರಹಮತ್ ತರೀಕೆರೆ**
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩೨೭೬


Registered with the Registrar of News Papers for India under No.11308/99. Postal REGISTERED CPMG/KA/BG-7/2000

